# ಕರ್ನಾಟಕದ
# ಜೈನ ಚಿತ್ರಕಲೆ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ
ಸಂಶೋಧನ ಪ್ರಬಂಧ


ಸಂಶೋಧಕ
ಉಮೇಶ ಎಸ್.

ಮಾರ್ಗದರ್ಶಕರು
ಡಾ.ಎಸ್.ಸಿ.ಪಾಟೀಲ
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು





ಶಿಲ್ಪ ಮತ್ತು ವರ್ಣಚಿತ್ರಕಲೆಗಳ ಅಧ್ಯಯನ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೭

167







# ಕರ್ನಾಟಕದ ಜೈನ ಚಿತ್ರಕಲೆ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಕಿರು ಸಂಶೋಧನ ಪ್ರಬಂಧ

ಸಂಶೋಧಕ
ಉಮೇಶ ಎಸ್.

ಮಾರ್ಗದರ್ಶಕರು
ಡಾ. ಎಸ್.ಸಿ.ಪಾಟೀಲ
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು

ಲಲಿತಕಲಾ ನಿಕಾಯ
ಶಿಲ್ಪ ಮತ್ತು ವರ್ಣಚಿತ್ರಕಲೆಗಳ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಶಾಖೆ : ಬನಶಂಕರಿ
೨೦೦೭





# ಪ್ರಮಾಣ ಪತ್ರ

**"ಕರ್ನಾಟಕದ ಜೈನ ಚಿತ್ರಕಲೆ"** ಎಂಬ ಶೀರ್ಷಿಕೆಯ ಕಿರು ಸಂಶೋಧನ ಪ್ರಬಂಧವನ್ನು ಡಾ.ಎಸ್.ಸಿ.ಪಾಟೀಲ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ಶಿಲ್ಪ ಮತ್ತು ವರ್ಣಚಿತ್ರಕಲೆಗಳ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Umesh

(ಉಮೇಶ ಎಸ್.)
ಶಿಲ್ಪ ಮತ್ತು ವರ್ಣಚಿತ್ರಕಲೆಗಳ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಬನಶಂಕರಿ, ಬಾದಾಮಿ

ದಿನಾಂಕ : ೩೦ ಜೂನ್ ೨೦೦೭
ಸ್ಥಳ : ಬನಶಂಕರಿ ಬಾದಾಮಿ



## ಪ್ರಮಾಣ ಪತ್ರ

ಉಮೇಶ ಎಸ್. ಇವರು ಬರೆದು ಸಾದರಪಡಿಸಿದ **"ಕರ್ನಾಟಕದ ಜೈನ ಚಿತ್ರಕಲೆ"** ಎಂಬ ಶೀರ್ಷಿಕೆಯ ಕಿರು ಸಂಶೋಧನ ಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು, ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ಶಿಲ್ಪ ಮತ್ತು ವರ್ಣಚಿತ್ರಕಲೆಗಳ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಪ್ರಬಂಧ ಇಡಿಯಾಗಿ, ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**(ಡಾ.ಎಸ್.ಸಿ.ಪಾಟೀಲ)**
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಶಿಲ್ಪ ಮತ್ತು ವರ್ಣಚಿತ್ರಕಲೆಗಳ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಬನಶಂಕರಿ, ಬಾದಾಮಿ

ದಿನಾಂಕ : ೩೦ ಜೂನ್ ೨೦೦೭
ಸ್ಥಳ : ಬನಶಂಕರಿ ಬಾದಾಮಿ



## ಕರ್ನಾಟಕದ ಜೈನ ಚಿತ್ರಕಲೆ

### ಪರಿವಿಡಿ



'ಧರ್ಮ' ಎಂಬುದಕ್ಕೆ ಕಲಾವಿದರು ಒಂದು 'ಮೂರ್ತ' ರೂಪ ನೀಡಿ ಕಲಾಕೃತಿಯಾಗಿಸುವಲ್ಲಿ ಮಾಡಿರುವ ಪ್ರಯತ್ನಗಳು ಕುತುಹಲಕಾರಿಯಾದವು. ಧರ್ಮವೇ ತನ್ನ ಪ್ರಸರಣಕ್ಕೆ ಕಲೆಗಳನ್ನು ಬಳಸಿಕೊಂಡಿತೋ ಅಥವಾ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಧರ್ಮದ ಆಶ್ರಯ ಪಡೆಯಿತೋ ಎಂಬುದು ಚಿಂತನೀಯ ವಿಷಯ ಒಟ್ಟಿನಲ್ಲಿ ಧರ್ಮ ತನ್ನ ಪ್ರಸರಣ ಕಾರ್ಯಕ್ಕೆ ಕಲೆಯನ್ನು, ಕಲೆ ತನ್ನ ಉಳಿವಿಗೆ ಧರ್ಮವನ್ನು ಆಶ್ರಯಿಸಿದ್ದು ನಿಜ. ಇವೆರಡೂ ಪೂರಕವಾಗಿ ಇಂದಿಗೂ ಉಳಿದು ಬಂದಿದೆ.[೧]

ಹಾಗೆಂದು ಎಲ್ಲ ಧರ್ಮಗಳು ಕಲೆಯನ್ನು ಆಶ್ರಯಿಸಿಲ್ಲ. ಕಲಾಕೃತಿಗಳೆಲ್ಲವೂ ಧಾರ್ಮಿಕ ಅಂಶವನ್ನಷ್ಟೆ ಚಿತ್ರಿಸಿದ್ದು ಕಲೆಗೆ ಆದ್ಯತೆ ನೀಡಿದ ಧರ್ಮಗಳು ಒತ್ತಾಯದಿಂದ ಇಲ್ಲವೇ ಶಿಕ್ಷೆಯ ಹೆದರಿಕೆಯಿಂದ ಉಳಿಯುವಂತಾದರೆ ಧರ್ಮಹೀನವಾದ ಕಲೆ ಕೇವಲ ದೃಶ್ಯ ಮಾಧ್ಯಮವಾಗಿ ಅರ್ಥವಂತಿಕೆಯಿಂದ ದೂರ ಸರಿಯುತ್ತದೆ. ಇಲ್ಲಿಯೂ ಚಿತ್ರಗಳಲ್ಲಿ ಧರ್ಮದ ಅಂಶ ಕುರಿತ ಚಿತ್ರಣ ಒಂದಾದರೆ ಆಚರಣೆಯ ಅಂಗವಾಗಿ ಇಲ್ಲವೇ ಪೂರಕವಾಗಿ ಚಿತ್ರಕಲೆ ಬಳಕೆಯಾಗುವುದು, 'ಧರ್ಮ' ಎಂಬುದು ಹಲವಾರು ಸಂಕೇತಗಳಿಂದ ಕೂಡಿದ ದೇವರು, ದೇವತೆ, ಪರಿವಾರ ದೇವತೆ ಮುಂತಾದವುಗಳ ಮೂರ್ತ ರೂಪ ಪಡೆದಿರುತ್ತದೆ. ಒಂದು ತತ್ವ, ಜಾತಿ, ವರ್ಗ ಇತ್ಯಾದಿಗಳನ್ನು ಅದು ಒಳಗೊಂಡಿರುತ್ತದೆ. ಅಂದರೆ ಸ್ಪಷ್ಟವಾಗಿ ಗುರುತಿಸಬಹುದಾದಂತಹ ಪ್ರತ್ಯೇಕತೆಯನ್ನು ಧರ್ಮಗಳು ಆಯಾ ಧರ್ಮವನ್ನು ಆರಂಭಿಸಿ ಪ್ರಚುರಪಡಿಸಿದ ಮೂಲ ವ್ಯಕ್ತಿಯನ್ನು ಪರಂಪರೆಯಲ್ಲಿ ಆದ ಆಚಾರ್ಯ ಪುರುಷರನ್ನೋ ಸಾಂಕೇತಿಕವಾಗಿ ಇರಿಸಿಕೊಳ್ಳುತ್ತವೆ. ಧರ್ಮದ ವಿವರಣೆ ನೀಡುವಾಗ ಆಯಾ ಧರ್ಮದಲ್ಲಿ ಬಂದ ಚಿಂತಕರು ಆ ವಿವರಣೆಯನ್ನು ಒಂದು ತತ್ವವಾಗಿ ಹೇಳುವುದುಂಟು. ಈ ತತ್ವಗಳು ಸಾಮಾನ್ಯ ಮನುಷ್ಯರಿಗೆ ಅಥವಾ ಬೇರೆಯ ಧರ್ಮಾವಲಂಬಿಗೆ ಸುಲಭವಾಗಿ ಅರ್ಥವಾಗದೇ ಹೋಗಬಹುದು. ಅಂತಹ ವೇಳೆಯಲ್ಲಿ ತತ್ವಗಳನ್ನು ಸುಲಭವಾದ ಕಥೆಗಳ ಮೂಲಕ ಹೇಳುವದುಂಟು. ಚಿತ್ರ ಮತ್ತು ಶಿಲ್ಪ ಕಲಾವಿದರು ಅನುಸರಿಸುವುದು ಈ ಬಗೆಯ ಕಥಾನಕಗಳನ್ನು, ಇಂತಹ ಧರ್ಮಾಧಾರಿತ ಕಥೆಗಳನ್ನು, ಕಥಾನಕಗಳನ್ನು ಮತ್ತು ಜೀವನ ಚರಿತ್ರೆಗಳನ್ನು ದೃಶ್ಯಾತ್ಮಕವಾಗಿ ಪ್ರಾಪಂಚಿಕರ ಮುಂದೆ ಮಂಡಿಸಲು ಭಿತ್ತಿಚಿತ್ರಗಳು ಹಾಗೂ ಚಿತ್ರಸಹಿತ ಹಸ್ತಪ್ರತಿಗಳು ನಮ್ಮ ದೇಶಿ ಸಂಸ್ಕೃತಿಯಲ್ಲಿ ಬಹುಮುಖ್ಯ ಪಾತ್ರವನ್ನು ನಿರ್ವಹಿಸುತ್ತವೆ. ಧಾರ್ಮಿಕ ವೈಭವೀಕರಣಕ್ಕೆ ಕಾರಣವಾದ ಜೈನ ಚಿತ್ರಕಲೆಯ ಕುರಿತು ಸೀಮಿತ ಅಧ್ಯಯನವನ್ನು ಇಲ್ಲಿ ಕೈಗೊಳ್ಳಲಾಗಿದೆ.

೦೧. ಡಾ.ಅ.ಲ. ನರಸಿಂಹನ :ಧರ್ಮ, ಪು.೧೧೬



**ಅಧ್ಯಯನದ ಉದ್ದೇಶ**

ಒಂದು ಪ್ರದೇಶದ, ಒಂದು ಕಾಲದ ಸಂಸ್ಕೃತಿಯನ್ನು ಅಭ್ಯಸಿಸುವ ಸಂದರ್ಭದಲ್ಲಿ ಅಲ್ಲಿ ಉಳಿದ ಕಲಾಪ್ರಕಾರಗಳಂತೆ ಚಿತ್ರಕಲೆಯನ್ನು ಅವಶ್ಯಕವಾಗಿ ಪರಿಗಣಿಸಬೇಕಾಗುತ್ತದೆ. "ಸಂಸ್ಕೃತಿಯ ಒಂದು ಭಾಗವೇ ಆಗಿರುವ ಚಿತ್ರಕಲೆ ಇತರ ಆಕರಗಳಿಗಿಂತ ಬೇರೆಯಾಗಿ ನಮ್ಮ ಸಾಂಸ್ಕೃತಿಕ ಇತಿಹಾಸವನ್ನು ಪುನರ್ ರಚಿಸಲು ಹೇಗೆ ಸಹಾಯ ಮಾಡುತ್ತದೆ. ಎಂಬುವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ.

ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆಯ ಬೆಳವಣಿಗೆಗೆ ಜೈನರ ಕೊಡುಗೆ ಗಮನಾರ್ಹ. ಗಂಗ, ಕದಂಬ, ಚಾಲುಕ್ಯ, ಹೊಯ್ಸಳ ಮತ್ತು ವಿಜಯನಗರದ ಅರಸರು ಹಾಗೂ ಮೈಸೂರಿನ ಒಡೆಯರ ಕಾಲದಲ್ಲಿ ಅನೇಕ ಜೈನ ಬಸದಿಗಳ ನಿರ್ಮಾಣವಾಗಿದ್ದು ಇವುಗಳೆಲ್ಲವೂ ಜೈನ ಧರ್ಮದ ಕೊಡುಗೆಯಾಗಿವೆ. ವಾಸ್ತುಶಿಲ್ಪ, ಶಿಲ್ಪಕಲೆ ಹಾಗೂ ಹಸ್ತಪ್ರತಿಚಿತ್ರಗಳು, ಭಿತ್ತಿ ಚಿತ್ರಗಳು ಮುಂತಾದ ಚಿತ್ರಕಲೆಯ ವಿವಿಧ ಶೈಲಿ, ಪರಂಪರೆ ಮತ್ತು ತಾಂತ್ರಿಕ ಅಂಶಗಳ ಇತಿಹಾಸವನ್ನು ಇಂತಹ ಅಧ್ಯಯನಗಳಿಂದ ತಿಳಿದುಕೊಳ್ಳಬಹುದಾಗಿದೆ. ಹಾಗೆಯೇ ಕಾಲಮಾನದ ಪ್ರಭಾವದಿಂದ ವಿವಿಧ ರೀತಿಯ ಆಪತ್ತುಗಳಿಂದ ವಿನಾಶ ಹೊಂದುತ್ತಿರುವ ಜೈನ ಚಿತ್ರಕಲೆಯನ್ನು ಒಂದು ವ್ಯವಸ್ಥಿತ ಅಧ್ಯಯನಕ್ಕೆ ಒಳಪಡಿಸಿಕೊಂಡು ಅವುಗಳ ಮಹತ್ವವನ್ನು ಕಲಾಕ್ಷೇತ್ರಕ್ಕೆ ಮನವರಿಕೆ ಮಾಡಿಕೊಡುವ ಉದ್ದೇಶವನ್ನು ಸಹ ಹೊಂದಲಾಗಿದೆ.

ಸುಮಾರು ಕ್ರಿಸ್ತಪೂರ್ವದಿಂದಲೂ ಭಾರತದಲ್ಲಿ ಬೆಳೆದು ಬಂದ ಜೈನಧರ್ಮ, ಸಾಹಿತ್ಯ, ಶಿಲ್ಪ, ವಾಸ್ತುಶಿಲ್ಪ ಹಾಗೂ ಚಿತ್ರಕಲೆಯನ್ನು ಸಾಕಷ್ಟು ಬೆಳಸಿ ಪ್ರೋತ್ಸಾಹಿಸಿ ಹೊಸ ರೂಪವನ್ನು ನೀಡಿದೆ ಜೈನ ಧರ್ಮ ಪೋಷಿಸಿದ ಆ ಕಾಲದ ಚಿತ್ರಕಲೆಯ ವಸ್ತು-ವಿಷಯ, ಶೈಲಿ ಕಾಲದಿಂದ ಕಾಲಕ್ಕೆ ಬದಲಾದ ರೀತಿ, ಅವುಗಳ ಮೇಲಾದ ಪ್ರಭಾವ, ಪ್ರೇರಣೆ ಮುಂತಾದ ಮಹತ್ವದ ರಚನೆಗಳು ಮತ್ತು ಚಿತ್ರರಚನೆಯ ಸಂದರ್ಭದಲ್ಲಿ ಅನುಸರಿಸಬಹುದಾದ ತಾಂತ್ರಿಕತೆಯ ವಿಚಾರಗಳನ್ನು ತಿಳಿದುಕೂಳ್ಳಲು ಪ್ರಸ್ತುತ ಅಧ್ಯಯನವು ಆಸಕ್ತಿ ಹೊಂದಿದೆ.

ಕರ್ನಾಟಕದ ಜೈನ ಧರ್ಮದ ಇತಿಹಾಸದಲ್ಲಿ ಅನೇಕ ಜೈನ ಬಸದಿಗಳು ನಿರ್ಮಾಣಗೊಂಡಿವೆ. ಹಾಗೆಯೇ ಧವಲಾ, ಜಯಧವಲಾ, ಮಹಾಧವಲಾ ಹಾಗೂ ಪ್ರತಿಷ್ಠಾತಿಲಕ, ತ್ರಿಲೋಕಾಸಾರ ಮತ್ತು ಮಹಾಪುರಾಣ, ಭರತೇಶ ವೈಭವ ಮುಂತಾದ ಹಸ್ತಪ್ರತಿಗಳು ಕರ್ನಾಟಕದಲ್ಲಿ ರಚನೆಗೊಂಡು ನೋಡಲು ಸಿಗುತ್ತವೆ. ಈ ಹಸ್ತಪ್ರತಿ ಚಿತ್ರಕಲೆಯ ಬಗ್ಗೆ ವಿಶೇಷ ಅಧ್ಯಯನ ನಡೆದದ್ದು ಕಂಡುಬರುವದಿಲ್ಲ! ಕರ್ನಾಟಕದ ಸಮಗ್ರ ಚಿತ್ರಕಲೆಯ ಅಭ್ಯಾಸವಾಗಬೇಕಾದರೆ ಕರ್ನಾಟಕದಲ್ಲಿ ಹೆಚ್ಚು ಪ್ರಚಲಿತವಿದ್ದ ಜೈನರ ಕಾಲದ ಹಸ್ತಪ್ರತಿ ಚಿತ್ರಕಲೆಯನ್ನು ಅವಶ್ಯವಾಗಿ ಪರಿಗಣಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಸಾವಿರಾರು ವರ್ಷಗಳ ಸುಧೀರ್ಘವಾದ ಇತಿಹಾಸ ಮತ್ತು ಉಜ್ವಲ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಕರ್ನಾಟಕದ ಚರಿತ್ರೆಯಲ್ಲಿ ಕನ್ನಡ ಸಾರಸ್ವತ ಲೋಕದ ವಿಕಾಸ, ಕಲೆ ಸಂಸ್ಕೃತಿಗಳ ಆಗರವಾಗಿರುವ ಕರ್ನಾಟಕದ ಜೈನಹಸ್ತಪ್ರತಿಗಳು ಕನ್ನಡ ನಾಡಿನ ಕಲಾಕೋಶಗಳಂತೆ ಇವೆ. ಈಗಾಗಲೇ ಕರ್ನಾಟಕ ಹಸ್ತಪ್ರತಿಗಳಿಗೆ ಐತಿಹಾಸಿಕ ಹಿನ್ನೆಲೆಯನ್ನು ಹಲವು ಅಧ್ಯಯನಗಳ ಮುಖಾಂತರ ತೋರಿಸಿರುವಂತೆ ಉಪೇಕ್ಷಿತವಾಗಿವೆ. ಕರ್ನಾಟಕದ ಜೈನ ಹಸ್ತಪ್ರತಿ ಚಿತ್ರಕಲೆಗೂ ಐತಿಹಾಸಿಕ ಹಿನ್ನೆಲೆಯನ್ನು ಪರಚಯಿಸಿಕೊಡುವ ಅಧ್ಯಯನವನ್ನು ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ಕರ್ನಾಟಕದಲ್ಲಿ ಇದುವರೆಗೂ ನಡೆದ ಜೈನ ಅಧ್ಯಯನಗಳಲ್ಲಿ ಸಂಸ್ಕೃತಿ ಕ್ಷೇತ್ರದ ಬಹುಮುಖ್ಯ ಭಾಗವಾದ ಚಿತ್ರಕಲೆಯ ಉಲ್ಲೇಖಗಳನ್ನು ಕುರಿತು ಅಲ್ಲಲ್ಲಿ ಬಿಡಿಬಿಡಿಯಾದ ಅಧ್ಯಯನಗಳಾಗಿವೆ. ಆದರೆ ಚಿತ್ರಕಲೆ ಕುರಿತಾದ ವ್ಯಾಪಕವಾದ ದೃಶ್ಯಾತ್ಮಕ ನೆಲೆಯ ಅಧ್ಯಯನ ಸಮಗ್ರವಾಗಿ ಇದುವರೆಗೆ ಆಗದೇ ಇರುವುದನ್ನು ಗಮನಿಸಿ



"ಕರ್ನಾಟಕ ಜೈನ ಚಿತ್ರಕಲೆ"ಯನ್ನು ಕುರಿತು ವಿಶೇಷವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಲ್ಲಿ ಕರ್ನಾಟಕವನ್ನಲ್ಲದೇ ಪ್ರಮುಖ ಅರಸರ ಕಾಲದಲ್ಲಿ ಜೈನ ಧರ್ಮಕ್ಕೆ ನೀಡಿದ ಕಲಾತ್ಮಕ ಕೊಡುಗೆಗಳನ್ನು ವಿಶೇಷವಾಗಿ ಕರ್ನಾಟಕದಲ್ಲಿ ಬೆಳೆದು ಬಂದ ಚಿತ್ರಕಲೆಯನ್ನು ಒಂದು ವ್ಯಾಪ್ತಿಗೆ ಸೀಮಿತಗೊಳಿಸಿಕೊಂಡು ವಿಶೇಷ ಅಧ್ಯಯನ ಮಾಡುವ ಉದ್ದೇಶ ಹೊಂದಲಾಗಿದೆ.

ಕರ್ನಾಟಕದ ಇತಿಹಾಸವನ್ನು ಕಲೆಗಳ ದೃಷ್ಟಿಯಿಂದ ಪರಿಶೀಲಿಸಿದರೆ ಅದರ ಸೌಂದರ್ಯ ಮತ್ತು ರೂಪ ವೈವಿಧ್ಯತೆಗಳು ಎಂಥವರನ್ನು ಬೆರುಗುಗೊಳಿಸುತ್ತದೆ. ಚಾರಿತ್ರಿಕವಾಗಿ ನೋಡಿದಾಗ ಕದಂಬರಿಂದ ಮೈಸೂರು ಒಡೆಯರ ಕಾಲದವರೆಗೆ ನಮ್ಮ ನಾಡಿನಲ್ಲಿ ಜೈನ ಧರ್ಮದ ಪರಂಪರೆ ಬೆಳೆದು ಬಂದಿದೆ. ಕರ್ನಾಟಕವು ಹೆಚ್ಚು ಜೈನಧರ್ಮ ಕ್ಷೇತ್ರದ ನೆಲೆಗಳನ್ನು ಹೊಂದಿರುವ ರಾಜ್ಯವಾಗಿದೆ. ಕರ್ನಾಟಕದಲ್ಲಿ ಜೈನಚಿತ್ರ ಪ್ರಕಾರಗಳು ಹೆಚ್ಚಾಗಿದ್ದು ಶೈಲಿ, ವಿನ್ಯಾಸ ಮತ್ತು ವಸ್ತುವಿಷಯಗಳು ವೈವಿಧ್ಯತೆಯಿಂದ ಕೂಡಿವೆ. ಈ ವೈವಿಧ್ಯತೆಗೆ ಪ್ರಮುಖ ಕಾರಣ ಆಯಾ ಪ್ರದೇಶದ ಸಾಂಸ್ಕೃತಿಕ ಪರಂಪರೆ ಮತ್ತು ಭೌಗೋಳಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ ಹಿನ್ನೆಲೆಗಳು ಕಾರಣವೆನ್ನಬಹುದು. ದಕ್ಷಿಣ ಕರ್ನಾಟಕದ ಶ್ರವಣಬೆಳಗೊಳ, ಮೂಡಬಿದರೆ, ಕಾರ್ಕಳ ಮುಂತಾದವು ವಿಶೇಷವಾಗಿದ್ದು ಕರ್ನಾಟಕದ ವ್ಯಾಪ್ತಿಗೆ ಈ ಅಧ್ಯಯನ ಸೀಮಿತಗೊಂಡಿರವುದರಿಂದ ಸಾಂದರ್ಭಿಕವಾಗಿ ಇತರೆಡೆಯ ಭಿತ್ತಿಚಿತ್ರಗಳನ್ನು ಹಾಗೂ ಹಸ್ತಪ್ರತಿಚಿತ್ರಗಳನ್ನು ಗಮನಿಸಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಕರ್ನಾಟಕದ ಜೈನ ಧರ್ಮದ ಕಲಾಕೃತಿಗಳು ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡಿವೆ. ಆದರೆ ಆ ಸ್ವಂತಿಕೆ ಅವುಗಳ ಸುತ್ತ ಕಟ್ಟಿದ ಒಂದು ಬೇಲಿಯಾಗಿರದೇ ಮೇಲೇರುವ ನಿಚ್ಚಾಣಿಗೆಯಾಗಿ ಪರಿಣಮಿಸಿದೆ. ಕರ್ನಾಟಕದ ವಾಸ್ತುಶಿಲ್ಪ, ಶಿಲ್ಪ, ಚಿತ್ರಾದಿ ಕಲೆಗಳಿಗೆ ಅವುಗಳದೇ ಆದ ಒಂದು ವೈಶಿಷ್ಟ್ಯವಿದೆ. ಚಾಲುಕ್ಯ ಹೊಯ್ಸಳರ ಕಾಲದ ವಾಸ್ತು ಶಿಲ್ಪಗಳಲ್ಲಿ, ಚಾಲುಕ್ಯ, ವಿಜಯನಗರ ಮತ್ತು ಮೈಸೂರು ಅರಸರ ಚಿತ್ರಕಲೆಯಲ್ಲಿ ಮೇಲುನೋಟಕ್ಕೆ ಎದ್ದು ಕಾಣುವಂತೆ ಜೈನಚಿತ್ರಕಲೆಯ ಕಲೆಗೆ ಸಂಬಂಧಿಸಿದ ಕಲಾತ್ಮಕವಾದ ಅಪೂರ್ವ ಅಂಶಗಳು ಗೋಚರಿಸುತ್ತವೆ. ಅದನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಇದುವರೆಗೆ ನಡೆದ ಅಧ್ಯಯನಗಳು**

'ಸಂಶೋಧನೆ' ಎನ್ನುವುದು ಬಹಳ ಹಿಂದಿನಿಂದಲೂ ನಡೆದು ಬಂದಿದ್ದರೂ ಅದೊಂದು ಅಧ್ಯಯನ ಸ್ವರೂಪ ಪಡೆದು ಪದವಿ ಪ್ರಾಪ್ತಿಗಾಗಿ ಬಳಕೆ ಆಗಿರುವುದು ತೀರಾ ಇತ್ತೀಚೆಗೆ ಎಂದೇ ಹೇಳಬಹುದು. ಕ್ರಿಸ್ತಪೂರ್ವದಲ್ಲಿಯೇ ನಲಂದಾದಂತಹ ವಿಶ್ವವಿದ್ಯಾಲಯದ ಉಲ್ಲೇಖ ಭಾರತದಲ್ಲಿದೆ. ಆದರೆ ಆಂಗ್ಲದ 'ರೀಸರ್ಚ'ಗೆ ಸಂವಾದಿಯಾಗಿ ಸಂಶೋಧನೆ ಒಂದು ಶಿಸ್ತು ರೂಪದಲ್ಲಿ ವಿಶ್ವವಿದ್ಯಾಲಯಗಳಲ್ಲಿ ಬೆಳೆದು ಬಂದಿರುವುದು ಪಾಶ್ಚಾತ್ಯರ ಪ್ರಭಾವದಿಂದಲೇ. ಕರ್ನಾಟಕದಲ್ಲಂತೂ ಶತಮಾನದ ಈಚೆಗಷ್ಟೇ ಇಂತಹ ಸಂಶೋಧನಾ ಪದ್ಧತಿ ಬೆಳೆದು ಬಂದಿದೆ. ಸಮ್ಯಕ್‌ಶೋಧ ಅರ್ಥಾತ್ ಸತ್ಯಶೋಧ ಎಂಬರ್ಥ ನೀಡುವ ಸಂಶೋಧನೆ ಮೂಲತಃ ವೈಜ್ಞಾನಿಕ ಶಿಸ್ತಿಗೆ ಸಂಬಂಧಿಸಿದಂತೆ ಕಂಡುಬಂದರೂ ಮುಂದೆ ಅದು ಸಮಾಜ ವಿಜ್ಞಾನ ಕ್ಷೇತ್ರಕ್ಕೆ ವಿಸ್ತರಿಸಿಕೊಂಡು, ಇಂದು ಚಿತ್ರಕಲೆಯೂ ಸೇರಿದಂತೆ ಲಲಿತಕಲೆಯ ಎಲ್ಲ ಅಂಗಗಳಿಗೂ ತನ್ನ ಬಾಹುಗಳನ್ನು ಚಾಚಿಕೊಂಡಿದೆ. ಜೊತೆಗೆ ಒಂದು ದೃಷ್ಟಿಯಿಂದ ಸಂಶೋಧನಾ ಅಧ್ಯಯನ ಎನ್ನುವುದು ಶಿಕ್ಷಣೋನ್ನತಿಗೆ, ತನ್ಮೂಲಕ ವೃತ್ತಿಯ ಪದೋನ್ನತಿಗೆ ಅನಿವಾರ್ಯ ಎನ್ನುವಷ್ಟು ವ್ಯಾಪಕವಾಗಿ ಬೆಳೆದು ಬರುತ್ತಿರುವುದು ಕಂಡುಬರುತ್ತಿದೆ. ಐವತ್ತು ವರ್ಷಗಳ ಹಿಂದೆ ಅಲ್ಲೊಂದು ಇಲ್ಲೊಂದು ಎಂಬಂತೆ ಗುರುತಿಸಬಹುದಾಗಿದ್ದ ಸಂಶೋಧನಾ ಅಧ್ಯಯನಗಳು ಇಂದು ಒಂದೊಂದು ವಿಶ್ವವಿದ್ಯಾಲಯದಿಂದಲೂ ವರ್ಷಕ್ಕೆ ಐವತ್ತಕ್ಕೂ ಹೆಚ್ಚು ಸಂಖ್ಯೆಯಲ್ಲಿ ಹೊರಬರುತ್ತಿರುವುದನ್ನು ಗಮನಿಸಿದರೆ, ಯುವಜನತೆ ಇಂದು ಸಂಶೋಧನೆಯತ್ತ ಹೆಚ್ಚಿನ ಆಸಕ್ತಿಯನ್ನು ಹೊಂದುತ್ತಿರುವುದನ್ನು ನೋಡುತ್ತೇವೆ.



ಹಿಂದೆ ವಿಶ್ವವಿದ್ಯಾಲಯ ಮಟ್ಟದ ಯಾವುದೇ ಸಂಶೋಧನಾ ಪ್ರಬಂಧ ರಚನೆಗೊಂಡದ್ದೇ ಇಲ್ಲ. ವಿಶ್ವಮಾನ್ಯ ಪಡೆದ ಕಲಾವಿದರು, ಕಲಾ ಚಟುವಟಿಕೆ ಮತ್ತು ಕಲಾಕೃತಿಗಳ ತಾಣವೇ ಇದಾಗಿದ್ದರೂ ಅವುಗಳ ಕುರಿತು ತೀರಾ ಇತ್ತೀಚಿನವರೆಗೂ ಅಧ್ಯಯನಗಳು ನಡೆದಿಲ್ಲ. ೧೯೯೦ರ ನಂತರ ವಿಶ್ವವಿದ್ಯಾಲಯ ಮಟ್ಟದಲ್ಲಿ ಪಿಎಚ್.ಡಿ. ಮಹಾಪ್ರಬಂಧಗಳು ರಚನೆಯಾಗಲು ಆರಂಭವಾದವು.

**ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು**

ಕರ್ನಾಟಕದ ಸಂದರ್ಭದಲ್ಲಿ ಚಿತ್ರಕಲಾ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನಾ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದಾಗಿದೆ. ಏಕೆಂದರೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಗಳ ಕುರಿತಾದ ಅಧ್ಯಯನಕ್ಕೆ ಅವಕಾಶ ದೊರಕಿದ್ದು ತೀರ ಇತ್ತೀಚಿಗಷ್ಟೆ. ೯೦ ರ ದಶಕದಲ್ಲಿ ಈ ಅಧ್ಯಯನಗಳು ತೀವ್ರಗೊಂಡು ಈಗಷ್ಟೇ ತನ್ನ ಶೈಶವಾವಸ್ಥೆಯನ್ನು ಕಳೆದು ಯೌವ್ವನಕ್ಕೆ ಕಾಲಿಡುತ್ತಿದೆ. ೧೯೮೦ರ ದಶಕದಿಂದ ಕರ್ನಾಟಕದಲ್ಲಿ ನಡೆದ ದೃಶ್ಯಕಲಾ ಅಧ್ಯಯನಗಳ ಸ್ಥೂಲವಾದ ವಿವರವನ್ನು ಈ ಕೆಳಗೆ ಸಮೀಕ್ಷಿಸಿ ಕೊಡಲಾಗಿದೆ.

೧೯೮೦ ರ ದಶಕದಿಂದ ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಮೊದಲಬಾರಿಗೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆ ಕುರಿತು ಸಂಶೋಧನಾತ್ಮಕ ಅಧ್ಯಯನ ಪ್ರಾರಂಭಗೊಂಡಿರುವುದು ಕಂಡುಬರುತ್ತದೆ. ಡಾ.ಎಸ್.ಸಿ.ಪಾಟೀಲರು ೧೯೮೩ರಲ್ಲಿ ಕರ್ನಾಟಕ ವಿ.ವಿ.ಯ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಮಂಡಿಸಿದ **ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ : ಒಂದು ಅಧ್ಯಯನ**[೨] ಎಂಬ ಸಂಶೋಧನ ಕಿರು ಪ್ರಬಂಧವು ಈ ಕ್ಷೇತ್ರದ ಪ್ರಥಮ ಅಧ್ಯಯನದ ಕಾರ್ಯವೆಂದು ದಾಖಲಾಗಿದೆ. ೧೯೮೭ರಲ್ಲಿ ಡಾ.ಬಿ.ಕೆ.ಹಿರೇಮಠರವರು **ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ**[೩] ಎಂಬ ಪಿಹೆಚ್.ಡಿ. ಮಹಾಪ್ರಬಂಧದಲ್ಲಿ ಹಸ್ತಪ್ರತಿ ಚಿತ್ರಕಲೆ ಕುರಿತಂತೆ ಕೆಲವು ಅಧ್ಯಾಯಗಳನ್ನು ಮೀಸಲಾಗಿಟ್ಟು ಅಧ್ಯಯನ ಮಾಡಿದ್ದಾರೆ. ಇದರ ನಂತರ ೧೯೯೧ರಲ್ಲಿ ಕರ್ನಾಟಕದಲ್ಲಿ ಜನಪದ ಚಿತ್ರಕಲೆಯನ್ನೇ ಸಂಶೋಧನೆಯ ಮುಖ್ಯ ವಿಷಯವನ್ನಾಗಿಟ್ಟುಕೊಂಡು ಕರ್ನಾಟಕ ವಿ.ವಿ.ಗೆ ಮಂಡಿಸಿದ ಪಿಹೆಚ್.ಡಿ. ಮಹಾಪ್ರಬಂಧ **ಕರ್ನಾಟಕದ ಜನಪದ ಚಿತ್ರಕಲೆ**[೪] ಈ ಮಹಾಪ್ರಬಂಧವನ್ನು ಡಾ.ಎಸ್.ಸಿ.ಪಾಟೀಲರು ಸಿದ್ಧಪಡಿಸಿದ್ದು ದೃಶ್ಯಕಲಾ ಕ್ಷೇತ್ರದ ಮೊದಲ ಅಧ್ಯಯನ ಎಂಬ ಅಗ್ಗಳಿಕೆಗೆ ಪಾತ್ರವಾಗಿದೆ. ನಂತರದ ದಿನಗಳಲ್ಲಿ ೧೯೯೫ರಲ್ಲಿ ಡಾ. ಅ.ಲ.ನರಸಿಂಹನ್ ಅವರು ಬೆಂಗಳೂರು ವಿ.ವಿ.ಗೆ ಮಂಡಿಸಿದ ಪಿಎಚ್.ಡಿ. ಮಹಾಪ್ರಬಂಧ **ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು,**[೫] ೧೯೯೭ರಲ್ಲಿ ಡಾ.ಸಂಪದಾ ಭಟ್ ಅವರ **ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು**[೬] ಬೆಂಗಳೂರು ವಿಶ್ವವಿದ್ಯಾಲಯಕ್ಕೆ, ೧೯೯೭ರಲ್ಲಿ ಡಾ.ಪುಷ್ಪಾ ದ್ರಾವಿಡ ಇವರು ಮಂಡಿಸಿದ **ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ ಜೀವನ ಮತ್ತು ಕಲಾಕೃತಿಗಳು.**[೭] ೨೦೦೦ ರಲ್ಲಿ ಡಾ.ಯಾದಪ್ಪ ಪರದೇಶಿಯವರ **ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಒಂದು ಅಧ್ಯಯನ,**[೮] ೨೦೦೨ರಲ್ಲಿ ಡಾ.ಶಿವಾನಂದ ಬಂಟನೂರು ಇವರ **ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ,**[೯] ೨೦೦೨ರಲ್ಲಿ ಡಾ.ಗಿರೀಶ ಅವರ **ಬುಡಕಟ್ಟು**

೦೨. ಡಾ. ಎಸ್.ಸಿ.ಪಾಟೀಲ : ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ, ಕರ್ನಾಟಕ ವಿ.ವಿ.,೧೯೮೩
೦೩. ಡಾ. ಬಿ.ಕೆ.ಹಿರೇಮಠ : ಕನ್ನಡ ಹಸ್ತಪ್ರತಿಗಳು, ಪಿಹೆಚ್.ಡಿ.ಮ.ಪ್ರ ಕರ್ನಾಟಕ ವಿ.ವಿ.,೧೯೮೭
೦೪. ಡಾ. ಎಸ್.ಸಿ.ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪಿಹೆಚ್.ಡಿ.,ಮ.ಪ್ರ.,೧೯೯೧
೦೫. ಡಾ. ಅ.ಲ.ನರಸಿಂಹನ್ ; ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಪಿಹೆಚ್.ಡಿ.,ಮ.ಪ್ರ., ಬೆಂಗಳೂರು ವಿ.ವಿ.೧೯೯೮
೦೬. ಡಾ. ಸಂಪದಾ ಭಟ್ : ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು, ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೧೯೯೮
೦೭. ಡಾ. ಪುಷ್ಪಾ ದ್ರಾವಿಡ : ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ ಜೀವನ ಮತ್ತು ಕಲಾಕೃತಿಗಳು,ಪಿಹೆಚ್.ಡಿ., ಮ.ಪ್ರ., ಬೆಂಗಳೂರು ವಿ.ವಿ., ೧೯೯೭
೦೮. ಡಾ.ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ. ೨೦೦೦
೦೯. ಡಾ.ಶಿವಾನಂದ ಬಂಟನೂರು : ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ,ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨



**ಚಿತ್ರಕಲೆ**[೧೦]೨೦೦೨ರಲ್ಲಿ ಡಾ.ಲಕ್ಷ್ಮಿದೇವಿ ಗವಾಯಿಯವರ ಕಲಾವಿದ ಎಂ.ಎ.ಚೆಟ್ಟಿಯವರ ಜೀವನ, **ಕಲಾಕೃತಿಗಳು–ಒಂದು ಅಧ್ಯಯನ,**[೧೧] ೨೦೦೨ರಲ್ಲಿ ಶರಣಪ್ಪ ಕೋಲ್ಕಾರ ಅವರ **ಕೊಪ್ಪಳ–ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ,**[೧೨] ೨೦೦೨ರಲ್ಲಿ ಡಾ.ಸೌಮ್ಯ ಅವರ **ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್**[೧೩] ೨೦೦೨ರಲ್ಲಿ ಡಾ.ಪ್ರಮೀಳಾ ಲೋಚನ ಅವರ **ಮೈಂಡ್ ಮ್ಯೂಜಿಕ್ ಅಂಡ್ ಕಲರ್ ಎಕ್ಸಪೋಜಿಸ್ ಅಂಡ್ ಡೆವೆಲಪ್ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್**[೧೪] ೨೦೦೩ರಲ್ಲಿ ಡಾ.ವೀಣಾ ಶೇಖರ್ ಮಂಡಿಸಿದ ಎ ಸ್ಟಡಿ **ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ** (೧೭೮೦–೧೮೨೦),[೧೫] ೨೦೦೩ರಲ್ಲಿ ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ ಅವರ **ಕಲಾವಿದ ಆರ್.ಎಮ್.ಹಡಪದ, ಒಂದು ಅಧ್ಯಯನ,**[೧೬] ೨೦೦೩ರಲ್ಲಿ ಡಾ.ಎಸ್.ಸಿ.ಪಾಟೀಲರು ಕರ್ನಾಟಕ ವಿ.ವಿಗೆ ಮಂಡಿಸಿದ **ಎಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯುಕೇಶನ್ ಎಟ್ ಸ್ಕೂಲ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ ಆಂಡ್ ಪೇಂಟಿಂಗ್**[೧೭] ೨೦೦೪ರಲ್ಲಿ ಡಾ.ವಿ.ಎಮ್.ಬಾಗಾಯತ್ ಅವರ **ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ**(೧೪೦೦–೧೮೦೦),[೧೮] ೨೦೦೪ರಲ್ಲಿ ಡಾ.ಶಿವಕುಮಾರ ಎ.ಓ. ಅವರ **ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು.**[೧೯]೨೦೦೫ರಲ್ಲಿ ಡಾ.ಶಶಿಕಲಾ ಹೂಗಾರ ಅವರ **ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ**[೨೦] ೨೦೦೫ರಲ್ಲಿ ಡಾ.ಶಿವಪ್ರಕಾಶ ತುಕ್ಕಣ್ಣವರ ಅವರ **ಕರ್ನಾಟಕ ರಥ ಶಿಲ್ಪಕಲೆ**[೨೧] ೨೦೦೫ರಲ್ಲಿ ಡಾ.ಎಚ್.ಎನ್.ಚಿತ್ರಗಾರ ಅವರ **ಕರ್ನಾಟಕ ಹಸ್ತಪ್ರತಿ ಚಿತ್ರಕಲೆ**[೨೨] ೨೦೦೫ರಲ್ಲಿ ಡಾ. ಎಸ್. ವಿ. ವೆಂಕಟೇಶಯ್ಯ ಅವರ **ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು ಒಂದು ಅದ್ಯಯ**[೨೩] ೨೦೦೬ರಲ್ಲಿ ಡಾ. ವಿಶ್ವೇಶ್ವರಿ ತಿವಾರಿ ಅವರ **ರಂಗೋಲಿ ಕಲೆ**[೨೪] ೨೦೦೭ ರಲ್ಲಿ ಡಾ. ಗೀತಾಜಂಲಿ ಬಿ.ಆರ್ ಅವರ **ಕರ್ನಾಟಕದ ಐತಿಹಾಸಿಕ ದೀಪಸ್ತಂಭಗಳು ಮೈಸೂರು ಪ್ರದೇಶವನ್ನು ಅನುಲಕ್ಷಿಸಿ**[೨೫] ಹಾಗೂ ೨೦೦೭ ರಲ್ಲಿಯೇ ಬಂದ ಡಾ. ಎಮ್.ಸಿ. ಬಾಗೋಡಿಯವರ **ಸುರಪುರ**

---

೧೦. ಡಾ.ಗಿರೀಶ : ಬುಡಕಟ್ಟು ಚಿತ್ರಕಲೆ,ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೧೧. ಡಾ.ಲಕ್ಷ್ಮಿದೇವಿ ಗವಾಯಿ : ಕಲಾವಿದ ಎಂ.ಎ.ಚೆಟ್ಟಿಯವರ ಜೀವನ, ಕಲಾಕೃತಿಗಳು–ಒಂದು ಅಧ್ಯಯನ, ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೧೨. ಡಾ. ಶರಣಪ್ಪ ಕೋಲ್ಕಾರ : ಅವರ ಕೊಪ್ಪಳ–ಹಂಪಿ ಪ್ರದೇಶದ ಪ್ರಾಗಿತಿಹಾಸಿಕ ಕಾಲದ ಕಲೆ,ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೧೩. ಡಾ. ಸೌಮ್ಯ : ಯಂತ್ರಾ ದಿ ಯುಜುಮ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರನ್ಸ್ ಟು ಕಾಂಟೆಂಪರರಿ ತಾಂತ್ರಿಕಾ ಆರ್ಟಿಸ್ಟ, ಪಿಹೆಚ್.ಡಿ., ಮ.ಪ್ರ., ಬೆಂಗಳೂರು ವಿ.ವಿ. ೨೦೦೨

೧೪. ಡಾ. ಪ್ರಮೀಳಾ ಲೋಚನ : ಮೈಂಡ್ ಮ್ಯೂಜಿಕ್ ಅಂಡು ಕಲರ್ ಎಕ್ಸಪೋಜಿಸ್ ಅಂಡ್ ಡೆವೆಲಪ್ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್, ಪಿಹೆಚ್.ಡಿ., ಮ.ಪ್ರ., ಬೆಂಗಳುರು ವಿ.ವಿ. ೨೦೦೨

೧೫. ಡಾ.ವೀಣಾ ಶೇಖರ್ : ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦– ೧೮೨೦) ಪಿಹೆಚ್.ಡಿ.,ಮ.ಪ್ರ.,ಬೆಂಗಳೂರು ವಿ.ವಿ., ೨೦೦೩

೧೬. ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ : ಕಲಾವಿದ ಆರ್.ಎಮ್.ಹಡಪದ, ಒಂದು ಅಧ್ಯಯನ,ಪಿಹೆಚ್.ಡಿ., ಮ.ಪ್ರ.,ಕನ್ನಡ ವಿ.ವಿ.೨೦೦೩

೧೭. ಡಾ. ಎಸ್.ಸಿ.ಪಾಟೀಲ : ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯುಕೇಶನ್ ಆಟ್ ಸ್ಕೂಲ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ ಆಂಡ್ ಪೇಂಟಿಂಗ,ಕರ್ನಾಟಕ ವಿ.ವಿ., ೨೦೦೩

೧೮. ಡಾ. ವಿ.ಎಮ್.ಬಾಗಾಯತ್ : ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ(೧೪೦೦–೧೮೦೦), ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೪

೧೯. ಡಾ.ಶಿವಕುಮಾರ ಎ.ಓ. : ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು, ಪಿಹೆಚ್.ಡಿ. ಮ.ಪ್ರ., ಗು.ವಿ.ಗು. ೨೦೦೪

೨೦. ಡಾ.ಶಶಿಕಲಾ ಹೂಗಾರ : ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೨೧. ಡಾ.ಶಿವಪ್ರಕಾಶ ತುಕ್ಕಣ್ಣವರ : ಕರ್ನಾಟಕ ರಥ ಶಿಲ್ಪಕಲೆ, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೨೨. ಡಾ.ಎಚ್.ಎನ್.ಚಿತ್ರಗಾರ : ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೨೩. ಡಾ.ಎಸ್.ವಿ. ವೆಂಕಟೇಶಯ್ಯ : ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೨೪. ಡಾ ವಿಶ್ವೇಶ್ವರಿ ತಿವಾರಿ : ರಂಗೋಲಿ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ. ಗು.ವಿ.ವಿ.,೨೦೦೬

೨೫ ಡಾ.ಗೀತಾಂಜಲಿ ಆಚಾರ್ಯ : ಕರ್ನಾಟಕದ ಐತಿಹಾಸಿಕ ದೀಪಸ್ತಂಭಗಳು –ಒಂದು ಅಧ್ಯಯನ,.ಪಿಹೆಚ್.ಡಿ.ಮ.ಪ್ರ. ಕ.ವಿ.ವಿ.,೨೦೦೭.



**ಶೈಲಿಯ ಚಿತ್ರಕಲೆ**[೨೬]. ಇವು ಚಿತ್ರಕಲೆಯ ಕುರಿತು ಬಂದ ಪಿಹೆಚ್.ಡಿ. ಮಹಾಪ್ರಬಂಧಗಳು. ೨೦೦೫ರಲ್ಲಿ ಡಾ. ಆನಂದ ಪೂಜಾರ ಅವರ **ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ**[೨೭] ೨೦೦೫ರಲ್ಲಿ ಡಾ. ಡಿ. ಎ. ಉಪಾಧ್ಯ ಅವರ **ದೃಶ್ಯಕಲೆಗಳ ತೌಲನಿಕ ಅಧ್ಯಯನ**[೨೮] ಡಿ.ಲಿಟ್. ಮಹಾಪ್ರಬಂಧಗಳಾಗಿವೆ.

೨೦೦೨ರಲ್ಲಿ ಮಲ್ಲಿಕಾರ್ಜುನ ಬಾಗೋಡಿಯವರು ಎಂ.ಫಿಲ್. ಪದವಿಗಾಗಿ ಮಂಡಿಸಿದ **ಚಿತ್ರಕಲಾವಿದ ಜೆ.ಎಸ್.ಖಂಡೇರಾವ-ಒಂದು ಅಧ್ಯಯನ,**[೨೯] ಮತ್ತು ೨೦೦೩ರಲ್ಲಿ ಎ.ಎಸ್.ವಿಶ್ವನಾಥ ಅವರ **ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ**[೩೦] ೨೦೦೫ರಲ್ಲಿ ಶಂಕರಪ್ಪ ಎಂ. ಕುಂದಗೋಳ ಅವರ **ಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು**[೩೧] ಮತ್ತು ಸಿ.ಡಿ.ಜಟ್ಟೆಣ್ಣವರ ಅವರ **ಕಲಾವಿದ ಡಾ.ಎಂ.ವಿ.ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳು**[೩೨] ೨೦೦೬ರಲ್ಲಿ  ರವಿ ವಸರಾಮ ನಾಯಕ ಇವರ **ಕಿನ್ನಾಳ ಕಲೆ ಒಂದು ಅಧ್ಯಯನ**[೩೩] ಸುಚಿತ್ರಾ .ಗ. ಲಿಂಗದಳ್ಳಿ ಇವರ **ವಿಜಯನಗರದ ಭಿತ್ತಿಚಿತ್ರಕಲೆ ಒಂದು ಅಧ್ಯಯನ,**[೩೪] ಈ ಪ್ರಬಂಧಗಳು ಕರ್ನಾಟಕ ದೃಶ್ಯಕಲೆಯ ಕುರಿತಾಗಿ ಬಂದ ಎಂ.ಫಿಲ್ ಸಂಶೋಧನಾ ಅಧ್ಯಯನಗಳಾಗಿವೆ. ಹೀಗೆ ಗುಲ್ಬರ್ಗಾ, ಬೆಂಗಳೂರು, ಕರ್ನಾಟಕ ವಿ.ವಿ. ಮತ್ತು ಕನ್ನಡ ವಿ.ವಿ.ಗಳಲ್ಲಿ ಪಿಹೆಚ್.ಡಿ.ಅಧ್ಯಯನಕ್ಕಾಗಿ  ಸುಮಾರು ೨೫ಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳು ರಚನೆಯಾಗಿವೆ. ಮತ್ತು ೧೫ಕ್ಕೂ ಹೆಚ್ಚು ಮಂದಿ ಅಧ್ಯಯನ ನಿರತರಾಗಿದ್ದಾರೆ. ಇದಲ್ಲದೇ ವಿಶ್ವವಿದ್ಯಾಲಯಗಳ ಡಿಪ್ಲೋಮಾ ಪದವಿ ಅಂತಿಮ ವರ್ಷಕ್ಕೆ ಸಿದ್ಧಪಡಿಸುವ ಕೀರು ಸಂಶೋಧನಾ ಯೋಜನಾ ವರದಿಗಳು ಬಿ.ವಿ.ಎ ಮತ್ತು  ಬಿ.ಎಫ್.ಎ. ಪದವಿ ಹಾಗೂ ಎಂ.ವಿ.ಎ ಮತ್ತು ಎಂ.ಎಫ್.ಎ ಸ್ನಾತಕೋತ್ತರ ಹಂತದಲ್ಲಿ  ಸುಮಾರು ೪೦೦ ಕ್ಕೂ ಹೆಚ್ಚಿನ ಲಘುಶೋಧ ಪ್ರಬಂಧಗಳು ರಚನೆಗೊಂಡಿವೆ. ಪದವಿ ತರಗತಿಗಳಿಗೆ ಅಧ್ಯಯನದ ಭಾಗವಾಗಿ ಕಿರು ಸಂಶೋಧನಾ ಪ್ರಬಂಧಗಳು ರಚನೆಯಾಗಿದ್ದು, ಸಂಶೋಧನಾ ಅಧ್ಯಯನವು ಕಲಾಕ್ಷೇತ್ರದಲ್ಲಿ ಅನಿವಾರ್ಯವಾದ ಅಧ್ಯಯನವಾಗಿ ಬೆಳೆಯುತ್ತಿದೆ. ಹೀಗೆ ಈ ಕ್ಷೇತ್ರದಲ್ಲಿ ಸಂಶೋಧನೆಗಳು ತೀವ್ರವಾಗಿ ಮುನ್ನಡೆಯುತ್ತಲಿದ್ದು, ಭವಿಷ್ಯತ್ತಿನಲ್ಲಿ ಕಲಾಕ್ಷೇತ್ರವು ಸಂಶೋಧನಾತ್ಮಕವಾಗಿಯೂ ಇನ್ನಷ್ಟು ಬಲಗೊಳ್ಳುವ ಆಶಯವನ್ನು ನಿರೀಕ್ಷಿಸಬಹುದು.

**ಪ್ರಸ್ತುತ ಕರ್ನಾಟಕದಲ್ಲಿ ಜೈನ ಚಿತ್ರಕಲೆಯನ್ನು ಕುರಿತು ನಡೆದ ಅಧ್ಯಯನದ ಅವಲೋಕನ**

ಕರ್ನಾಟಕದಲ್ಲಿ ಜೈನ ಚಿತ್ರಕಲೆಯನ್ನು ಕುರಿತು ಲೇಖನಗಳಂತಹ ಸಂಕ್ಷಿಪ್ತ ಪ್ರಮಾಣದ ವಿವರಣೆಗಳು ಪ್ರಕಟಗೊಂಡಿದ್ದು ಹೊರತುಪಡಿಸಿದರೆ ಪ್ರತ್ಯೇಕ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದು, ಜೈನ ಕಲೆಯನ್ನು ವಿಶೇಷವಾಗಿ ಗುರುತಿಸಿದವರನ್ನು ಇಲ್ಲಿ ಗಮನಿಸಬಹುದಾಗಿದೆ. ಮಿರ್ಜಿ ಅಣ್ಣಾರಾಯ ಇವರು "ಜೈನ ಧರ್ಮ"[೩೫] ಎಂಬ ಪುಸ್ತಕದಲ್ಲಿ ಜೈನ ಕಲೆಯನ್ನು ಕುರಿತು ಒಂದು ಅಧ್ಯಾಯವನ್ನು ರೂಪಿಸಿ ಕರ್ನಾಟಕದ ಜೈನ ಚಿತ್ರಕಲೆಯನ್ನು

---

೨೬. ಡಾ.ಮಲ್ಲಿಕಾರ್ಜುನ ಬಾಗೋಡಿ: ಸುರಪುರ ಶೈಲಿಯ ಚಿತ್ರಕಲೆ ಒಂದು ಅಧ್ಯಯನ , ಪಿಹೆಚ್.ಡಿ.ಮ.ಪ್ರ ಗು.ವಿ.ವಿ.,೨೦೦೭ ಪಿಹೆಚ್.ಡಿ.ಮ.ಪ್ರ ಗು.ವಿ.ವಿ.,೨೦೦೭

೨೭ ಡಾ.ಆನಂದ ಕೆ. ಪೂಜಾರ : ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ, ಡಿ.ಲಿಟ್. ಮ.ಪ್ರ.ಕನ್ನಡವಿ.ವಿ.,೨೦೦೫.

೨೮ ಡಾ. ಡಿ. ಎ. ಉಪಾದ್ಯ ಅವರ ದೃಶ್ಯಕಲೆಗಳ ತೌಲನಿಕ ಅದ್ಯಯನ, ಡಿ.ಲಿಟ್. ಮ.ಪ್ರ.ಕನ್ನಡವಿ.ವಿ.,೨೦೦೫

೨೯. ಮಲ್ಲಿಕಾರ್ಜುನ ಬಾಗೋಡಿ : ಚಿತ್ರಕಲಾವಿದ ಜೆ.ಎಸ್.ಖಂಡೇರಾವ-ಒಂದು ಅಧ್ಯಯನ,ಎಂ.ಫಿಲ್. ಪ್ರ ಕ.ವಿ.ವಿ.ಹಂ. ೨೦೦೨

೩೦. ಎ.ಎಸ್.ವಿಶ್ವನಾಥ :ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ, ಎಂ.ಫಿಲ್.ಪ್ರ ಕ.ವಿ.ವಿ.ಹಂ. ೨೦೦೩

೩೧. ಶಂಕರಪ್ಪ ಎಂ. ಕುಂದಗೋಳ : ಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು, ಎಂ.ಫಿಲ್. ಪ್ರ ಕ.ವಿ.ವಿ.ಹಂ. ೨೦೦೫

೩೨ ಸಿ.ಡಿ.ಜಟ್ಟೆಣ್ಣವರ : ಕಲಾವಿದ ಡಾ.ಎಂ.ವಿ.ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳುಎಂ.ಫಿಲ್. ಪ್ರ, ಕ.ವಿ.ವಿ.ಹಂ. ೨೦೦೫

೩೩. ಸುಚಿತ್ರಾ ಗ. ಲಿಂಗದಳ್ಳಿ: ವಿಜಯನಗರದ ಭಿತ್ತಿಚಿತ್ರಕಲೆ ಒಂದು ಅದ್ಯಯನ, ಎಂ.ಫಿಲ್. ಪ್ರ, ಕ.ವಿ.ವಿ.ಹಂ. ೨೦೦೬

೩೪ ರವಿ ವಸರಾಮ ನಾಯಕ: ಕಿನ್ನಾಳ ಕಲೆ  ಒಂದು ಅದ್ಯಯನ, ಎಂ.ಫಿಲ್. ಪ್ರ, ಕ.ವಿ.ವಿ.ಹಂ. ೨೦೦೬



ಗುರುತಿಸಿರುವುದನ್ನು ಕಾಣಬಹುದು. ಅದೇ ರೀತಿ "ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ"[೩೬] ಪುಸ್ತಕದಲ್ಲಿ ಜೈನ ಸಂಸ್ಕೃತಿ ಮತ್ತು ಕಲೆಯನ್ನು ಕುರಿತು ಡಾ, ಹೀರಾಲಾಲ ಜೈನ ಅವರ ಹಿಂದಿ ಪುಸ್ತಕವನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಈ ಪುಸ್ತಕದಲ್ಲಿ ಭಾರತೀಯ ಜೈನಕಲೆಯ ಪ್ರಸ್ತಾಪವನ್ನು ಕಾಣಬಹುದು. ಈ ಕೃತಿಯಲ್ಲಿ ಒಟ್ಟಾರೆ ಜೈನ ವಾಸ್ತುಕಲೆ, ಶಿಲ್ಪಕಲೆ, ಚಿತ್ರಕಲೆ ಹಾಗೂ ಸಂಕೀರ್ಣ ಮಾಧ್ಯಮದ ಕಲೆಗಳನ್ನು ಕುರಿತಂತೆ ಕಿರು ವಿವರಗಳನ್ನು ನೀಡಿದ್ದಾರೆ,

ಡಾ. ಶಿವರಾಮ ಕಾರಂತರವರು "ಕರ್ನಾಟಕದಲ್ಲಿ ಚಿತ್ರಕಲೆ"[೩೭] ಎಂಬ ಹೊತ್ತಿಗೆಯಲ್ಲಿ ಮೂಡಬಿದರೆಯ "ಧವಲಾ ಗ್ರಂಥ ಚಿತ್ರಗಳು" ಎಂಬ ಕಿರು ಅಧ್ಯಾಯದಲ್ಲಿ ಕರ್ನಾಟಕದ ಜೈನಕಲೆಯನ್ನು ಕುರಿತಂತೆ ಧವಲಾ ಗ್ರಂಥಗಳನ್ನು ಚಿತ್ರಗಳ ತಂತ್ರ, ಶೈಲಿಯನ್ನು ಕುರಿತು ವಿವರಿಸಿದ್ದಾರೆ. ಎಸ್.ಎಮ್. ಶಿರಹಟ್ಟಿ ಅವರು ಉಚ್ಚ ಕಲಾ ಅಭ್ಯಾಸಿಗಳಿಗೆ ಮಾರ್ಗದರ್ಶನಪರವಾದ "ಭಾರತೀಯ ಚಿತ್ರಕಲೆ"[೩೮] ಸಂಕ್ಷಿಪ್ತ ಪರಿಚಯ (ಭಾಗ ೧) ರಚಿಸಿದ್ದಾರೆ. ಈ ಕಿರು ಹೊತ್ತಿಗೆಯಲ್ಲಿ ಜೈನಶೈಲಿ ಎಂಬ ಪುಟ್ಟ ಅಧ್ಯಾಯದಲ್ಲಿ ಜೈನ ಚಿತ್ರಕಲೆಯ ಜೈನಶೈಲಿಯ ವಿಕಾಸ ಮತ್ತು ಜೈನ ಶೈಲಿಯ ಚಿತ್ರದ ವಿಧಿ–ವಿಧಾನ ಕುರಿತು ಸಂದರ್ಭೋಚಿತವಾಗಿ ವಿವರಿಸಿದ್ದಾರೆ.

ಪ್ರೊ. ಹಂಪ ನಾಗರಾಜಯ್ಯನವರ "ಯಕ್ಷ–ಯಕ್ಷಿಯರು"[೩೯] ಎಂಬ ಪ್ರಸ್ತಕದಲ್ಲಿ ಜೈನ ತೀರ್ಥಂಕರರ ಯಕ್ಷಾಯಕ್ಷಿಯರನ್ನು ಚಿತ್ರದ ಮೂಲಕ ಗುರುತಿಸಿರುವುದು ಗಮನಾರ್ಹವಾಗಿದೆ. ಡಾ.ಸಿಂಧಗಿ ರಾಜಶೇಖರರವರು "ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ"[೪೦] ಪ್ರಸ್ತಕದಲ್ಲಿ ಕರ್ನಾಟಕದಲ್ಲಿ ಜೈನರ ವಾಸ್ತುಶಿಲ್ಪ ಮತ್ತು ಚಿತ್ರಕಲೆ ಕುರಿತಂತೆ ಕರ್ನಾಟಕದಲ್ಲಿ ಜೈನಭಿತ್ತಿ ಚಿತ್ರಗಳ ಹಾಗೂ ಹಸ್ತಪ್ರತಿ ಚಿತ್ರಗಳನ್ನು ಕುರಿತು ಮಾಹಿತಿಯನ್ನು ನೀಡಿದ್ದಾರೆ. ಡಾ.ಬಿ.ಕೆ.ಹಿರೇಮಠರವರು ತಮ್ಮ "ಕನ್ನಡ ಹಸ್ತಪ್ರತಿಗಳು"[೪೧] ಪಿ.ಹೆಚ್‌ಡಿ. ಪ್ರಬಂಧದಲ್ಲಿ ಜೈನ ಹಸ್ತಪ್ರತಿಗಳ ಕುರಿತು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. ಜೈನ ಹಸ್ತಪ್ರತಿಗಳ ಇತಿಹಾಸ, ಕಲಾವಿನ್ಯಾಸ ಹಾಗೂ ಕಲಾಪ್ರಕಾರಗಳಾಗಿರುವ ಫಲಕ ಮತ್ತು ತಾಡೋಲೆ, ಕಾಗದ ಹಸ್ತಪ್ರತಿಗಳನ್ನು ಪರಿಚಯಿಸಿದ್ದಾರೆ. ಪಿ.ಆರ್.ತಿಪ್ಪೇಸ್ವಾಮಿ ಅವರ ಪ್ರಧಾನ ಸಂಪಾದನ ಗ್ರಂಥವಾದ "ಚಿತ್ರಕಲಾ ಪ್ರಪಂಚ"ದಲ್ಲಿ[೪೨] ಬಿ.ವಿ.ಕೆ. ಶಾಸ್ತ್ರೀಯವರು "ಕನ್ನಡ ಸಾಹಿತ್ಯದಲ್ಲಿ ದೃಶ್ಯಕಲೆ"[೪೩], ರಸಯೋಗಿ(ಗೆಳಯರ ಗುಂಪು)ಯವರು "ಕನ್ನಡ ಸಾಹಿತ್ಯದಲ್ಲಿ ಕರ್ನಾಟಕ ಚಿತ್ರಕಲೆ"[೪೪], ಎಚ್.ಆರ್. ರಘುನಾಥಭಟ್‌ರವರು "ಧವಳ ಗ್ರಂಥಗಳಲ್ಲಿ ಹೊಯ್ಸಳ ಚಿತ್ರಕಲೆ"[೪೫] ಎಂಬ ಲೇಖನಗಳಲ್ಲಿ ಜೈನ ಚಿತ್ರಕಲೆಯ ಕುರಿತು ಪ್ರಸ್ತಾಪಿಸುತ್ತಾ ಕರ್ನಾಟಕದ ಜೈನ ಚಿತ್ರಕಲೆ, ಜೈನ ಸಾಹಿತ್ಯ ಮತ್ತು ಇತಿಹಾಸವನ್ನು ಕಟ್ಟಿಕೊಡುವ ರೀತಿಯಲ್ಲಿ ಲೇಖನ ಮಂಡಿಸಿದ್ದಾರೆ.

---

೩೫. ಮಿರ್ಜಿ ಅಣ್ಣಾರಾಯ: ಜೈನಧರ್ಮ ಪು. ೫೨೭ ಶಾಂತಿ ಸೇವಾಸದನ ಸೇಡಬಾಳ ೧೯೫೨

೩೬. ಮಿರ್ಜಿ ಅಣ್ಣಾರಾಯ: (ಮೂಲ ಹಿಂದಿ) ಹೀರಾಲಾಲ ಜೈನ ಅನು."ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ" ಪು.೩೪೫ ಶಾಂತಿ ಸೇವಾ ಸದನ ಸೇಡಬಾಳ ೧೯೭೧

೩೭. ಡಾ.ಶಿವರಾಮ ಕಾರಂತರು: ಕರ್ನಾಟಕದಲ್ಲಿ ಚಿತ್ರಕಲೆ ಪು.೩೭ ಪ್ರಸಾರಂಗ ಮೈ.ವಿ.ವಿ ೧೧೩

೩೮. ಎಸ್.ಎಮ್.ಶಿರಹಟ್ಟಿ ಚಿತ್ರಕಲೆ ಸ.ಪ್ರ, ಪು೩೮ ವಿಜಯಕಲಾ ಮಂದಿರ ಗದಗ ೧೯೭೨

೩೯. ಹಂಪ ನಾಗರಾಜ್ಯಯ: ಯಕ್ಷ ಯಕ್ಷಿಯರು ಪು.೮೩ ಚಂದ್ರಸಾಗರವರ್ಣಿ ಗ್ರಂಥಮಾಲೆ ಬೆಂಗಳೂರು. ೧೯೭೬

೪೦. ಡಾ.ಸಿಂದಗಿ ರಾಜಶೇಖರ: ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ: ಪು.೨೦೫ ಸುಜಾತ ಪಬ್ಲಕೇಶನ್ ಧಾರವಾಡ. ೧೯೮೮

೪೧. ಡಾ.ಬಿಕೆ.ಹೀರೆಮಠ: ಕನ್ನಡ ಹಸ್ತಪ್ರತಿ ಒಂದು ಅಧ್ಯಾಯನ ಪು.೧೫೯ ವೀರಶೈವ ಅಧ್ಯಯನ ವೇದಿಕೆ. ತಾ.ಮುದೋಳ ಜಿ.ಬಿಜಾಪೂರ. ೧೯೯೨

೪೨. ಪು.ಸಂ. ವಿ.ಆರ್.ತಿಪ್ಪೇಸ್ವಾಮಿ: ಚಿತ್ರಕಲಾ ಪ್ರಪಂಚ, ಕರ್ನಾಟಕ ಲಲಿತಕಲಾ ಅಕಾಡೆಮಿ. ಬೆಂಗಳೂರು. ೧೯೯೩

೪೩. ಬಿ.ವಿ.ಕೆ.ಶಾಸ್ತ್ರೀ : ಕನ್ನಡ ಸಾಹಿತ್ಯದಲ್ಲಿ ದೃಶ್ಯಕಲೆ, ಚಿತ್ರಕಲಾ ಪ್ರಪಂಚ, ಸಂ.ಪಿ.ಆರ್.ತಿಪ್ಪೇಸ್ವಾಮಿ, ಪು.ಸಂ.೧೬೩

೪೪. ರಸಯೋಗಿ(ಗೆಳೆಯರ ಗುಂಪು) : ಕನ್ನಡ ಸಾಹಿತ್ಯದಲ್ಲಿ ಕರ್ನಾಟಕದ ಚಿತ್ರಕಲೆ, ಚಿತ್ರಕಲಾ ಪ್ರಪಂಚ, ಸಂ.ಪಿ.ಆರ್.ತಿಪ್ಪೇಸ್ವಾಮಿ, ಪು.ಸಂ.೧೭೫

೪೫. ಎಚ್.ಆರ್.ರಘುನಾಥ ಭಟ್ :ಟ್ಧವಳ ಗ್ರಂಥಗಳಲ್ಲಿ ಹೊಯ್ಸಳ ಚಿತ್ರಕಲೆ, ಚಿತ್ರಕಲಾ ಪ್ರಪಂಚ, ಸಂ.ಪಿ.ಆರ್.ತಿಪ್ಪೇಸ್ವಾಮಿ, ಪು.ಸಂ.೨೨೭



ಡಾ.ದೇವರಕೊಂಡಾರೆಡ್ಡಿಯವರು "ಶ್ರವಣಬೆಳಗೊಳದ ಬಸದಿಗಳ ವಾಸ್ತುಶಿಲ್ಪ" ಎಂಬ ಪುಸ್ತಕದಲ್ಲಿ ಶ್ರವಣಬೆಳಗೊಳದ ಬಸದಿಗಳ ಹಾಗೂ ಮಠಗಳಲ್ಲಿನ ಭಿತ್ತಿ ಚಿತ್ರಗಳನ್ನು ಪರಿಚಯಿಸಿದ್ದಾರೆ.[೪೬] ಬಿ.ಪಿ. ಬಾಯಿರಿಯವರ "ಭಾರತೀಯ ಚಿತ್ರಕಲೆ"[೪೭] ಹಾಗೂ "ಜಾಗತಿಕ ಚಿತ್ರಕಲೆ"[೪೮] ಎಂಬ ಈ ಎರಡು ಪುಸ್ತಕಗಳಲ್ಲಿ ಜೈನ ಚಿತ್ರಕಲೆ ಕುರಿತಂತೆ ದಕ್ಷಿಣ ಭಾರತೀಯ ಹಾಗೂ ಉತ್ತರ ಭಾರತೀಯ ಜೈನಕಲೆಯನ್ನು ಕುರಿತು ತೌಲನಿಕವಾಗಿ ವಿವರಿಸಿದ್ದಾರೆ.

ಡಾ.ಎಚ್. ತಿಪ್ಪೇರುದ್ರಸ್ವಾಮಿಯವರ "ಕರ್ನಾಟಕ ಸಂಸ್ಕೃತಿ ಸಮೀಕ್ಷೆ"[೪೯]ಯ ಅಧ್ಯಾಯ ಒಂಬತ್ತರಲ್ಲಿ ಮೈಸೂರು ಚಿತ್ರಕಲಾ ಶೈಲಿಯ ಭಾಗವಾಗಿರುವ ಶ್ರವಣಬೆಳಗೊಳದ ಮಠದ ಭಿತ್ತಿಚಿತ್ರಗಳ ಕುರಿತು ಸಮಗ್ರವಾದ ವಿವರಣೆಯನ್ನು ನೀಡಿದ್ದಾರೆ. ಡಾ.ಅ.ಲ.ನರಸಿಂಹನ್‌ವರ "ಕರ್ನಾಟಕ ಭಿತ್ತಿಚಿತ್ರ ಪರಂಪರೆ"[೫೦] ಎಂಬ ಹೊತ್ತಿಗೆಯಲ್ಲಿ ಕರ್ನಾಟಕದ ಜೈನ ಚಿತ್ರಕಲೆಯನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಡಾ.ಅ.ಲ.ನರಸಿಂಹನ್‌ರವರು ಕನ್ನಡ ವಿಶ್ವವಿದ್ಯಾಲಯದ ವಿಶ್ವಕೋಶ 'ಧರ್ಮ'ಸಂಪುಟ[೫೧]ದಲ್ಲಿ, ಕರ್ನಾಟಕದ ಕರಕುಶಲ ಕಲೆಗಳು[೫೨] ಈ ಎರಡು ಗ್ರಂಥಗಳಲ್ಲಿ ಜೈನ ವಾಸ್ತುಶಿಲ್ಪ, ಭಿತ್ತಿಚಿತ್ರ ಹಾಗೂ ಹಸ್ತಪ್ರತಿ ಚಿತ್ರಗಳನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಎನ್.ಮರಿಶಾಮಾಚಾರ್ ಅವರ 'ದೃಶ್ಯಕಲಾ'[೫೩] ಎಂಬ ಗ್ರಂಥದಲ್ಲಿ ಜೈನ ಕಲೆಯನ್ನು ಕುರಿತು ಚರ್ಚಿಸಿ, ಈ ಜೈನ ಸಾಹಿತ್ಯದಲ್ಲಿ ಬರುವ ಅನೇಕ ವಿವರಗಳನ್ನು ಸಂದರ್ಭೋಚಿತವಾಗಿ ವಿವರಿಸಿದ್ದಾರೆ.

ಡಾ.ಎಸ್.ಡಿ. ಶೆಟ್ಟಿಯವರು 'ಚಂದ್ರಪ್ರಭ'[೫೪] ಪುಸ್ತಕದಲ್ಲಿ ದಕ್ಷಿಣ ಕನ್ನಡ ಪ್ರದೇಶಗಳ ಜೈನ ಬಸದಿ ಹಾಗೂ ಮಠ, ಜೈನ ಶ್ರಾವಕರ ಮನೆಯಲ್ಲಿನ ಜೈನ ವಾಸ್ತುಕಲೆ. ಮೂರ್ತಿಕಲೆ ಮತ್ತು ಚಿತ್ರಕಲೆ, ತೀರ್ಥಂಕರರ ಮೂರ್ತಿಶಿಲ್ಪ ಹಾಗೂ ಭಿತ್ತಿಚಿತ್ರಗಳ ಹಾಗೂ ಹಸ್ತಪ್ರತಿಗಳ ಕುರಿತು ವಿವರಿಸಿದ್ದಾರೆ. ಡಾ.ಎಸ್.ಸಿ.ಪಾಟೀಲರವರ "ಕರ್ನಾಟಕ ಜನಪದ ಚಿತ್ರಕಲೆ"[೫೫] ಎಂಬ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಜೈನ ಹಸ್ತಪ್ರತಿಯ ಚಿತ್ರಕಲೆಯನ್ನು ಕುರಿತು ವಿವರಿಸಿದ್ದಾರೆ. ಅವರದೇ ಆದ "ವರ್ಣ ಸಂಚಯ"[೫೬] (ಚಿತ್ರಕಲೆಯನ್ನು ಕುರಿತ ಸಂಶೋಧನ ಲೇಖನಗಳ ಸಂಗ್ರಹ)ದಲ್ಲಿ ಸಹ ಜೈನಕಲೆಯನ್ನು ಕುರಿತು ಸಂಕ್ಷಿಪ್ತವಾಗಿ ಪ್ರಸ್ತಾಪಿಸಿದ್ದಾರೆ.

ಡಾ.ಬಿ.ಕೆ.ಹಿರೇಮಠರವರ 'ಸೃಷ್ಟಿ' (ಲೇಖನಗಳ ಸಂಕಲನ–೧) ಪುಸ್ತಕದಲ್ಲಿ ಜೈನ ಬಸದಿ, ಸಾಹಿತ್ಯ ಮತ್ತು ಚಿತ್ರಸಾಹಿತ್ಯವನ್ನು ಕುರಿತಂತೆ ವಿವರಿಸಿದ್ದಾರೆ[೫೭] ಅವರದೇ ಆದ ಅಭಿನಂದನ ಗ್ರಂಥ "ನಿಜದ ನೆಲೆ"[೫೮]ಯಲ್ಲಿ

---

೪೬. ಡಾ.ದೇವರ ಕೊಂಡಾರೆಡ್ಡಿ: ಶ್ರವಣಬೆಳಗೋಳದ ಬಸದಿಗಳು ವಾಸ್ತಶಿಲ್ಪ: ಚಂದ್ರಗುಪ್ತ ಗ್ರಂಥಮಾಲೆ, ಶ್ರವಣಬೆಳಗೋಳ. ೧೯೯೩

೪೭. ಬಿ.ಪಿ.ಬಾಯರಿ : ಭಾರತೀಯ ಚಿತ್ರಕಲೆ, ಪ್ರತಿಭಾ ಗ್ರಂಥಮಾಲೆ (ಸಮಾಜ ಪುಸ್ತಕಾಲಯ)ಧಾರವಾಡ. ೧೯೭೨

೪೮. ಬಿ.ಪಿ.ಬಾಯರಿ : ಜಾಗತಿಕ ಚಿತ್ರಕಲೆ, ಪ್ರತಿಭಾ ಗ್ರಂಥಮಾಲೆ (ಸಮಾಜ ಪುಸ್ತಕಾಲಯ) ಧಾರವಾಡ. ೧೯೯೫

೪೯. ಡಾ.ಎಚ್.ತಿಪ್ಪೇರುದ್ರಸ್ವಾಮಿ: ಕರ್ನಾಟಕದ ಸಂಸ್ಕೃತಿ ಸಮೀಕ್ಷೆ ಪು.೭೫೧ ಡಿ.ಕೆ.ಮೂರ್ತಿ ಕೃಷ್ಣಮೂರ್ತಿಪುರಂ ಮೈಸೂರು ೧೯೯೬

೫೦. ಡಾ.ಅ.ಲ.ನರಸಿಂಹನ್: ಕರ್ನಾಟಕ ಭಿತ್ತಿಚಿತ್ರ ಪರಂಪರೆ. ಪು.೫೯ ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. ೧೯೯೮

೫೧. ಡಾ.ಅ.ಲ.ನರಸಿಂಹನ್: ಧರ್ಮ ೩ ಸಂ.ರೆಹಮತ್ ತರೀಕರೆ ಪು.೧೦೬ ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦

೫೨. ಡಾ.ಅ.ಲ.ನರಸಿಂಹನ್ ಕರ್ನಾಟಕದ ಕರಕುಶಲಕಲೆ ಸಂ.ಡಾ. ಕರೀಗೌಡ ಬೀಚನಹಳ್ಳಿ ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.೨೦೦೦

೫೩. ಎನ್.ಮರಿಶಾಮಾಚಾರ್: ದೃಶ್ಯಕಲಾ ಪು.೧ ಸಿ.ಎಂ.ಎಸ್,ಪ್ರಕಾಶನ ಬೆಂಗಳೂರು. ೨೦೦೬

೫೪. ಎಸ್.ಡಿ.ಶೆಟ್ಟಿ: ಚಂದ್ರಪ್ರಭ. ಸಂ.ಪ್ರೊ.ಎಚ್.ಪ್ರಭಾಕರ್ ಪು.೧೭೨ ಶ್ರೀ ಚಂದ್ರಪ್ರಭಾ ಸ್ವಾಮಿ ಬಸದಿ ಧರ್ಮಸಂಪ್ರೋಕ್ಷಣ ಪ್ರತಿಷ್ಠಾಪನಾ ಮಹೋತ್ಸವ ಸಮಿತಿ, ಶ್ರೀಕ್ಷೇತ್ರ ಧರ್ಮಸ್ಥಳ–೨೦೦೧

೫೫. ಡಾ.ಎಸ್.ಸಿ.ಪಾಟೀಲ: ಕರ್ನಾಟಕದ ಜನಪದ ಚಿತ್ರಕಲೆ: ವೀರಶೈವ ವಿದ್ಯಾವರ್ಧಕ ಸಂಸ್ಥೆ ಗದಗ ೧೯೯೩

೫೬. ಡಾ.ಎಸ್.ಸಿ.ಪಾಟೀಲ: ವರ್ಣ ಸಂಚಯ, ಪು.೭೮ ವಿಜಯ ಚಿತ್ರಕಲಾ ಮಹಾವಿದ್ಯಾಲಯ. ಇಲ್ಲಕಲ್ಲ.೨೦೦೧

೫೭. ಡಾ.ಬಿ.ಕೆಹೀರೇಮಠ: ಸೃಷ್ಟಿ (ಲೇಖನ ಸಂಕಲನ ೦೨) ಪು.೧೪೪ ಬಾಪೂಜಿ ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ರಿ) ಬಾಗಲಕೋಟ ೨೦೦೩

೫೮. ಡಾ.ಎಸ್.ಸಿ.ಪಾಟೀಲ/ಸತ್ಯಾನಂದ ಪಾತ್ರೋಟ : ಸಂ, ನಿಜದ ನೆಲೆ, ಬಸವೇಶ್ವರ ವಿದ್ಯವರ್ಧಕ ಸಂಘ, ಬಾಗಲಕೋಟೆ



ಜೈನ ಸಾಹಿತ್ಯ ಚಿತ್ರಕಲೆ[೫೯] ಕುರಿತಂತೆ ಡಾ.ಚೆನ್ನಕ್ಕ ಪಾವಟೆಯವರು ಹಾಗೂ ಜೈನ ಹಸ್ತಪ್ರತಿ ಚಿತ್ರಕಲೆ[೬೦] ಕುರಿತಂತೆ ಡಾ.ವೈ.ಸಿ. ಭಾನುಮತಿಯವರು ಸಾಹಿತ್ಯಾತ್ಮಕವಾಗಿ ಚಿತ್ರಕಲೆಯ ದೃಷ್ಟಿಯಿಂದ ಕೂಡಿದ ಬಿಡಿ ಲೇಖನಗಳನ್ನು ಕಾಣಬಹುದಾಗಿದೆ. ಇದೇ ರೀತಿ ಡಾ. ಹೆಚ್.ಎನ್. ಚಿತ್ರಗಾರ ಅವರು ತಮ್ಮ "ಕರ್ನಾಟಕ ಹಸ್ತಪ್ರತಿ ಚಿತ್ರಕಲೆ"[೬೧] ಒಂದು ಅಧ್ಯಯನ ಮಹಾಪ್ರಬಂಧದಲ್ಲಿ ಜೈನ ಚಿತ್ರಕಲೆಯನ್ನು ಕುರಿತು ಪ್ರಾಸಂಗಿಕವಾಗಿ ಅಧ್ಯಯನ ಮಾಡಿದ್ದಾರೆ.

ಇದೇ ರೀತಿ ಇನ್ನೂ ಕೆಲವು ಗ್ರಂಥಗಳಲ್ಲಿ ಸಾಂದರ್ಭಿಕವಾಗಿ ಜೈನ ಚಿತ್ರಕ್ಲಲೆಯನ್ನು ಕುರಿತು ವಿವರಿಸಿದ್ದು ಕಂಡುಬರುತ್ತದೆ. ಹಾಗೂ ಕೆಲವು ಲೇಖನಗಳನ್ನು ಹೊರತುಪಡಿಸಿದರೆ ಕರ್ನಾಟಕದ ಜೈನ ಚಿತ್ರಕಲೆಯನ್ನು ಕುರಿತಾದ ಸಮಗ್ರವಾದ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದು. ಈ ಕೊರತೆಯನ್ನು ತುಂಬಲು ಪ್ರಸ್ತುತ ಅಧ್ಯಯನವನ್ನು ಮಾಡುವ ಉದ್ದೇಶವನ್ನು ಹೊಂದಲಾಗಿದೆ.

**ಅಧ್ಯಯನದ ಸ್ವರೂಪ**

ಪ್ರಸ್ತುತ ಅಧ್ಯಯನವನ್ನು ಒಟ್ಟು ಎಂಟು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡಿದ್ದು ಪ್ರತಿಯೊಂದು ಅಧ್ಯಾಯವು ವಿಸ್ತೃತವಾದ ವಿವರಣೆಯನ್ನೊಳಗೊಂಡಿದೆ.

ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆಯನ್ನೊಳಗೊಂಡಿದೆ.

ಎರಡನೆಯ ಅಧ್ಯಾಯವು ಕರ್ನಾಟಕದ ಜೈನ ಚಿತ್ರಕಲೆಯ ಸಾಹಿತ್ಯದ ಐತಿಹಾಸಿಕ ನೆಲೆ–ಹಿನ್ನೆಲೆ ಕುರಿತಾಗಿದ್ದು, ಜೈನಸಾಹಿತ್ಯ ಕೃತಿಗಳಲ್ಲಿ ಚಿತ್ರಕಲೆ ಕುರಿತು ಬಂದ ಉಲ್ಲೇಖಗಳ ಚರ್ಚೆಯನ್ನು ಹಾಗೂ ಜೈನ ಚಿತ್ರಕಲೆಯ ಇತಿಹಾಸವನ್ನು ಸಾಹಿತ್ಯದ ಮೂಲಕ ಕಟ್ಟಿಕೊಡುವ ಪ್ರಯತ್ನವನ್ನು ಪ್ರಸ್ತುತ ಅಧ್ಯಾಯದಲ್ಲಿ ಮಾಡಲಾಗಿದೆ.

ಮೂರನೆಯ ಅಧ್ಯಾಯವು ಜೈನ ಭಿತ್ತಿ ಚಿತ್ರಕಲೆಯನ್ನು ಕುರಿತಾಗಿದ್ದು, ಜೈನ ಬಸದಿ ಮತ್ತು ಮಠಗಳು ಹಾಗೂ ಜೈನ ಶ್ರಾವಕರ ಮನೆಗಳಲ್ಲಿ ಚಿತ್ರಿತಗೊಂಡ ಭಿತ್ತಿಚಿತ್ರಗಳ ಕುರಿತು ಅಧ್ಯಯನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯವು ಜೈನ ಹಸ್ತಪ್ರತಿ ಚಿತ್ರಕಲೆಯನ್ನು ಕುರಿತಾಗಿದ್ದು, ಜೈನ ಮಠದ ಹಸ್ತಪ್ರತಿ ಭಂಡಾರಗಳಲ್ಲಿರುವ 'ಧವಲಾ, ಜಯಧವಲಾ, ಮಹಾಧವಲಾ' ಹಾಗೂ ಪ್ರತಿಷ್ಠಾ ತಿಲಕ, ಸಾಳ್ವ ಭಾರತ, ಮಹಾಪುರಾಣ, ತ್ರಿಲೋಕ ಸಾರ ಈ ಮುಂತಾದ ಹಸ್ತಪ್ರತಿಗಳಲ್ಲಿ ಕಂಡುಬರುವ ಚಿತ್ರಗಳಲ್ಲಿನ ತಾಂತ್ರಿಕ ಅಂಶಗಳು, ಆಕಾರಗಳು, ರೇಖಾ ವಿನ್ಯಾಸ, ನಿಲುವು, ಬಣ್ಣ ಹಾಗೂ ಸಂಕೇತಗಳನ್ನು ದೃಶ್ಯಾತ್ಮಕ ನೆಲೆಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಐದನೆಯ ಅಧ್ಯಾಯವು ಜೈನ ಧರ್ಮದ ಸಂಕೀರ್ಣ ಮಾಧ್ಯಮದ ಚಿತ್ರಕಲೆಯ ಕುರಿತಾಗಿರುವುದರಿಂದ ಇಲ್ಲಿ ತೀರ್ಥಂಕರರ ಯಕ್ಷ–ಯಕ್ಷಿಣಿಯರ, ಚಿತ್ರಗಳನ್ನು ಗಾರೆ, ಕಾಷ್ಠ ಹಾಗೂ ಚಿತ್ರಪಟ, ಲೆಪ್ಪದ, ಶಿಲಾ ಮಾಧ್ಯಮದ ಶಿಲ್ಪಗಳನ್ನು ಕುರಿತಾಗಿ ಈ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

ಆರನೆಯ ಅಧ್ಯಾಯವು ಜೈನ ಚಿತ್ರಕಲೆಯ ಮೇಲಾದ ಪ್ರಭಾವ, ಪ್ರೇರಣೆಯನ್ನು ಹಾಗೂ ಅವುಗಳಲ್ಲಿ ಅನುಸರಿಸಿಕೊಂಡ ಶೈಲಿ ಮತ್ತು ತಂತ್ರಗಾರಿಕೆಯನ್ನು ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ. ಇಂತಹ ಹಿನ್ನೆಲೆಯಲ್ಲಿ

---

೫೯. ಡಾ.ಚನ್ನಪ್ಪ ಪಾವಟೆ: ನಿಜದ ನೆಲೆ ಸಂ.ಡಾ.ಎಸ್.ಸಿ.ಪಾಟೀಲ, ಸತ್ಯಾನಂದ ಪಾತ್ರೋಟಿ ಪು.೧೦೫, ಬಸವೇಶ್ವರ ವಿದ್ಯಾವರ್ಧಕ ಸಂಘ ಬಾಗಲಕೋಟ ೨೦೦೩

೬೦. ಡಾ.ವೈ.ಸಿ.ಭಾನುಮತಿ:ನಿಜದ ನೆಲೆ ಸಂ.ಡಾ.ಎಸ್.ಸಿ.ಪಾಟೀಲ, ಸತ್ಯಾನಂದ ಪಾತ್ರೋಟಿ ಪು.೫೨ ಬಸವೇಶ್ವರ ವಿದ್ಯಾವರ್ಧಕ ಸಂಘ ಬಾಗಲಕೋಟ ೨೦೦೩

೬೧. ಎಚ್.ಎನ್.ಚಿತ್ರಗಾರ:ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಅ.ಪ್ರ.ಪಿ.ಎಚ್.ಡಿ ಪ್ರಬಂಧ ಕ.ವಿ.ವಿ ಹಂಪಿ. ೨೦೦೫



ಜೈನಚಿತ್ರಕಲೆಯ ತಾಂತ್ರಿಕ ಅಂಶಗಳನ್ನೊಳಗೊಂಡ ಆಕಾರಗಳ ರೇಖಾ ವಿನ್ಯಾಸ ನಿಲುವು ಇತ್ಯಾದಿಗಳನ್ನು, ಜೈನ ಪಂಥದ ಒಳ ಪ್ರಭೇದಗಳಾದ ದಿಗಂಬರ ಮತ್ತು ಶ್ವೇತಾಂಬರ ಪಂಥಗಳಲ್ಲಿರುವ ವ್ಯತ್ಯಾಸ, ತೀರ್ಥಂಕರರಿಗೆ ಇರುವ ಬಣ್ಣ ಮತ್ತು ಸಂಕೇತಗಳ ಬದಲಾವಣೆಗಳನ್ನು, ಅಜಂತಾ ಮತ್ತು ಇತರ ಶೈಲಿಯ ಪ್ರಭಾವಗಳನ್ನು ಇದರಲ್ಲಿ ಗುರುತಿಸಿಕೊಂಡು ಪ್ರಸ್ತುತ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಏಳನೆಯ ಅಧ್ಯಾಯವು ಕರ್ನಾಟಕದಲ್ಲಿರುವ ಜೈನ ಚಿತ್ರಗಳ ಸ್ಥಿತಿ–ಗತಿಯೊಂದಿಗೆ ಅವುಗಳಿಗೆ ಒದಗಿದ ಆಪತ್ತುಗಳನ್ನು ಮತ್ತು ಆ ಆಪತ್ತುಗಳಿಂದ ಸಂರಕ್ಷಿಸಬೇಕಾದಂತಹ ವೈಜ್ಞಾನಿಕ ಕ್ರಮಗಳನ್ನು ಕುರಿತು ಪ್ರಸ್ತುತ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಎಂಟನೆಯ ಅಧ್ಯಾಯವು ಸಮಾರೋಪವಾಗಿದ್ದು ಮೇಲ್ಕಾಣಿಸಿದ ಎಲ್ಲಾ ಅಧ್ಯಾಯಗಳಲ್ಲಿನ ಫಲಿತಗಳನ್ನು ಸಮೀಕ್ಷಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಈ ಅಧ್ಯಯನವು ಕರ್ನಾಟಕದ ಜೈನಚಿತ್ರಕಲೆಯನ್ನು ಕುರಿತಾಗಿರುವುದರಿಂದ ಜೈನಚಿತ್ರಗಳು ಕಂಡು ಬರುವ ಅಥವಾ ಸಂಗ್ರಹಗೊಂಡಿರುವ ಪ್ರದೇಶಗಳ ವ್ಯಾಪ್ತಿಯನ್ನು ಹೊಂದಿದೆ. ಜೈನ ಧರ್ಮವು ಕ್ರಿಸ್ತ ಪೂರ್ವದಿಂದಲೂ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದು, ಈ ಪ್ರಾಂತ್ಯಗಳು ದಿಗಂಬರ ಸಂಪ್ರದಾಯಕ್ಕೆ ಪ್ರಾಚೀನ ಕಾಲದಿಂದಲೂ ಮುಖ್ಯ ಸ್ಥಾನವಾಗಿದೆ. ಇಂತಹ ಜೈನ ಚಿತ್ರಗಳ ಸಂಗ್ರಹವಿರುವಂತಹ ಪ್ರದೇಶಗಳಾದ ಶ್ರವಣಬೆಳಗೊಳದ ಶ್ರೀಮಠ, ಮೂಡಬಿದರೆಯ ಜೈನಮಠ, ಲೆಪ್ಪದಬಸದಿ ಮತ್ತು ಕಾರ್ಕಳದ ಚತುರ್ಮುಖ ಬಸದಿಯ ಬಳಿ ಚಂದ್ರಪ್ರಭಾ ಸ್ವಾಮಿಯವರ ಜೈನ ಮಠ, ಕಾರ್ಕಳಕ್ಕೆ ಹತ್ತು ಕಿ.ಮೀ ದೂರದಲ್ಲಿರುವ ಬಜಗೋಳಿಯ ಜೈನ ಶ್ರಾವಕ ಸುಬ್ಬಯ್ಯ ಶಾಸ್ತ್ರಿಗಳ ಮನೆ ಹಾಗೂ ನೆಲ್ಲಿಕಾರಿನ ಜೈನ ಪೇಟೆಯಲ್ಲಿರುವ ಪಂಡಿತರ ಮನೆ ಹಾಗೂ ದೊಡ್ಡಮನೆ, ಹೊಯ್ಸಳರ ಕಾಲದಲ್ಲಿ ರಚಿತವಾದ ಜೈನ ದೇವಾಲಯಗಳಾದ ಚಿಕ್ಕಮಗಳೂರ ಬಳಿಯ ಅಂಗಡಿಯ ವಾಸಂತಿಕಾ ದೇವಾಲಯ, ಕೊಲ್ಲಾಪುರದ ಶ್ರೀಲಕ್ಷ್ಮೀ ಸೇನ ಭಟ್ಟಾರಕರಮಠ ಹಾಗೂ ಬೆಂಗಳೂರ ವಿಶ್ವವಿದ್ಯಾನಿಲಯದ ಹಸ್ತಪ್ರತಿ ಭಂಡಾರ, ಕರ್ನಾಟಕ ವಿ.ವಿ. ಧಾರವಾಡ, ಕನ್ನಡ ವಿ.ವಿ. ಹಂಪಿ, ಶಿವಯೋಗ ಮಂದಿರ, ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರ, ಇತ್ಯಾದಿ ನೆಲೆಗಳನ್ನೊಳಗೊಂಡಿದೆ. ಮೇಲಿನ ನೆಲೆಗಳನ್ನು ಉಲ್ಲೇಖಿಸಿರುವ ನೆಲೆಗಳ ವ್ಯಾಪ್ತಿಯಾದ ಕರ್ನಾಟಕವನ್ನು ಗಮನದಲ್ಲಿಟ್ಟಿಕೊಂಡು ಪ್ರಸ್ತುತ ಅಧ್ಯಯನದಲ್ಲಿ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡಿದೆ. ಹೀಗೆ ಕೇಂದ್ರ ಸ್ಥಾನವಾದ ಕರ್ನಾಟಕ ಜೈನ ಚಿತ್ರಕಲೆಯೂ ರಾಷ್ಟ್ರ ಹಾಗೂ ಅಂತರಾಷ್ಟ್ರೀಯ, ಖಾಸಗಿ ಹಾಗೂ ಸರಕಾರಿ ಸಂಗ್ರಹಾಲಯಗಳಲ್ಲಿ ಜೈನ ಚಿತ್ರಗಳ ಸಂಗ್ರಹಗಳಿದ್ದು ಅವುಗಳನ್ನು ಪೂರಕವಾಗಿ ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

**ಅಧ್ಯಯನದ ವಿಧಾನ**

ಅಧ್ಯಯನಕ್ಕೆ ಎರಡು ರೀತಿಯ ವಿಧಾನಗಳನ್ನು ಬಳಸಿಕೊಳ್ಳಲಾಗಿದೆ. ಅವು ಕೆಳಗಿನಂತಿವೆ.

೧. ಮೂಲ ಆಕರ ಸಾಮಗ್ರಿಗಳು ೨. ಆನುಷಂಗಿಕ ಆಕರ ಸಾಮಗ್ರಿಗಳು

**೧. ಮೂಲ ಆಕರ ಸಾಮಗ್ರಿಗಳು**

ಚಿತ್ರಕಲಾ ಸಂಶೋಧನ ಅಧ್ಯಯನದ ಮೂಲಕ ಆಕರ ಸಾಮ್ರಗಿಗಳಲ್ಲಿ ಮುಖ್ಯವಾದುದು ಕ್ಷೇತ್ರಕಾರ್ಯ. ಕರ್ನಾಟಕ ಜೈನ ಧರ್ಮವನ್ನಾಧರಿಸಿ ಹಾಗೂ ಚಿತ್ರಗಳನ್ನು ಆಧರಿಸಿ ಕಲೆಗೆ ಪೂರಕವಾಗಿ ಜೈನ ಧಾರ್ಮಿಕ



ಕ್ಷೇತ್ರಗಳನ್ನು ಮತ್ತು ಜೈನ ಬಸದಿಗಳನ್ನು ಗಮನದಲ್ಲಿಟ್ಟುಕೊಂಡು ಕ್ಷೇತ್ರಕಾರ್ಯವನ್ನು ಸಂದರ್ಶನ, ಛಾಯಾಚಿತ್ರಣ, ಸಂಗ್ರಹಿಸುವ ಹಾಗೂ ಜೈನ ಶ್ರಾವಕರ ಮನೆ, ಮಠ, ಬಸದಿ ದೇವಾಲಯಗಳು ಇತ್ಯಾದಿ ಕ್ಷೇತ್ರಗಳಿಗೆ ಭೇಟಿ ನೀಡಿ ಕೆಳಗೆ ತಿಳಿಸಿದ ವಿವರಣೆಗಳ ರೀತಿಯಲ್ಲಿ ಸಂಶೋಧನ ಅಧ್ಯಯನಕ್ಕೆ ಸಂಬಂಧಪಟ್ಟಂತಹ ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಸಂದರ್ಶನ**

ವಿಶೇಷವಾಗಿ ಕರ್ನಾಟಕ ವ್ಯಾಪ್ತಿಗೆ ಸಂಬಂಧಿಸಿದ ಜೈನ ಧಾರ್ಮಿಕ ಕ್ಷೇತ್ರಗಳನ್ನು ಸಂದರ್ಶನ ಮಾಡಿ ಜೈನ ಬಸದಿಗಳ ಇತಿಹಾಸದೊಂದಿಗೆ ಆಯಾ ಕಾಲದ ಅರಸರು ಜೈನ ಧರ್ಮಕ್ಕೆ ನೀಡಿದ, ಅಲ್ಲದೇ ಜೈನ ಚಿತ್ರಕಲೆಯನ್ನು ಬೆಳಸಿ ಪೋಷಿಸಿದ ಅನೇಕ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಜೈನ ಚಿತ್ರಕಲೆಯ ಕುರಿತು ಹೆಚ್ಚಿನ ವಿಷಯಗಳನ್ನು ತಿಳಿದುಕೊಂಡಿರುವ ನಾಡಿನ ಪ್ರಮುಖ ವಿದ್ವಾಂಸರನ್ನು ಸಂದರ್ಶಸಿದ್ದು ಕೆಲವೊಂದು ಸಂದರ್ಭದಲ್ಲಿ ಪತ್ರದೊಂದಿಗೆ ಸಂಪರ್ಕಿಸಿದ್ದು, ಅಮೂಲ್ಯ ಮಾಹಿತಿಯನ್ನು ಸಂಗ್ರಹಿಸಿ ಪ್ರಸ್ತುತ ಅಧ್ಯಯನದಲ್ಲಿ ಸಂದರ್ಭಾನುಸಾರವಾಗಿ ಬಳಸಿಕೊಳ್ಳಲಾಗಿದೆ.

**ಛಾಯಾಚಿತ್ರಣ**

ವಿಶೇಷವಾಗಿ ಜೈನ ಬಸದಿ, ಜೈನ ದೇವಾಲಯ, ಜೈನಮಠ ಜೈನಶ್ರಾವಕರ ಮನೆಗಳಲ್ಲಿ ಮತ್ತು ವಸ್ತು ಸಂಗ್ರಹಾಲಯಗಳನ್ನು ಹೊಂದಿರುವಂತಹ ಪ್ರದೇಶಗಳಿಗೆ ಹೋಗಿ ಅಧ್ಯಯನದ ವಸ್ತುವಿಷಯಕ್ಕೆ ಸಂಬಂಧಿಸಿದಂತೆ ಛಾಯಾ ಚಿತ್ರಣಮಾಡಿಕೊಳ್ಳಲಾಗಿದೆ. ಜೊತೆಗೆ ಜೈನ ಕಲಾಕೃತಿಗಳು ಮುಖ್ಯವಾಗಿ ದಕ್ಷಿಣ ಕರ್ನಾಟಕದಲ್ಲಿದ್ದು, ಆ ಎಲ್ಲ ಸ್ಥಳಗಳ ಕ್ಷೇತ್ರಕಾರ್ಯ ಕೈಗೊಳ್ಳಲಾಗಿದೆ. ಅಲ್ಲಿರುವ ಮೂಲ ಕಲಾಕೃತಿಗಳ ಛಾಯಾಚಿತ್ರಣ ಮಾಡಲಾಗಿದೆ. ಅದರಲ್ಲಿ ಭಿತ್ತಿ ಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಸಂಕೀರ್ಣ ಮಾಧ್ಯಮದಲ್ಲಿ ಮೂಡಿಬಂದಿರುವ ಚಿತ್ರಗಳು ಅಲ್ಲದೇ, ಇತರ ಕಲಾ ಶೈಲಿಗಳ ಪ್ರಭಾವದಿಂದ ರಚನೆಗೊಂಡ ಕಲಾಕೃತಿಗಳನ್ನು ವರ್ಗೀಕರಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಆನುಷಂಗಿಕ ಆಕರ ಸಾಮಗ್ರಿಗಳು**

ಈ ಕಿರು ಸಂಶೋಧನಾ ಪ್ರಬಂಧದಲ್ಲಿ ಪ್ರಕಟಿತ, ಅಪ್ರಕಟಿತ ಕೃತಿಗಳು, ನಿಘಂಟುಗಳು, ಗೆಝುಟೀಯರಗಳು, ವಿಶ್ವಕೋಶಗಳು, ಜೈನ ಚಿತ್ರಗಳಿಗೆ ಸಂಬಂಧಪಟ್ಟಂತಹ ಲೇಖನಗಳು ಹೆಚ್ಚಿನ ಮಾಹಿತಿಗೆಂದೂ ಜಿಲ್ಲಾಕೇಂದ್ರ ಗ್ರಂಥಾಲಯಗಳು ಹಾಗೂ ವಿಶ್ವವಿದ್ಯಾನಿಲಯಗಳ ಗ್ರಂಥಾಲಯಗಳು ಪ್ರಮುಖ ನಗರಗಳಲ್ಲಿ ಇರುವ ವಸ್ತು ಸಂಗ್ರಹಾಲಯಕ್ಕೆ ಭೇಟಿಕೊಟ್ಟು ಅಲ್ಲಿರುವ ಪ್ರಮುಖ ಗ್ರಂಥಗಳನ್ನು ಅಭ್ಯಾಸಿಸಿ ನಕಲು ಪ್ರತಿಗಳನ್ನು ಸಂಗ್ರಹಿಸಿಕೊಂಡು ಹೆಚ್ಚಿನ ಮಾಹಿತಿಗಾಗಿ ಅಂತರಜಾಲದ ಹುಡುಕಾಟದಲ್ಲಿ ಕರ್ನಾಟಕದ ಜೈನ ಚಿತ್ರಕಲೆಗೆ ಸಂಬಂಧಿಸಿದಂತೆ ಹತ್ತು ಹಲವು ವಿಷಯಗಳನ್ನು ಸಂಗ್ರಹಿಸಿಕೊಂಡು ಈ ಕಿರು ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

*****



ಹಿಂಸಾಮೂಲವಾದ ಯಜ್ಞಗಳನ್ನು ಪ್ರತಿಭಟಿಸಿದ ಜೈನಧರ್ಮವು ಅಹಿಂಸೆಗೆ ಪ್ರಥಮ ಆದ್ಯತೆಯನ್ನು ನೀಡಿತು. "ಅಹಿಂಸಾ ಪರಮೋಧರ್ಮ" ಎನ್ನುವುದು ಇದರ ಧ್ಯೇಯವಾಕ್ಯ ಈ ಅಹಿಂಸೆಯನ್ನೊಳಗೊಂಡಂತೆ ಸತ್ಯ ಆಸ್ತೇಯ, ಅಪರಿಗ್ರಹ, ಬ್ರಹ್ಮಚರ್ಯ ಇವು ಪಂಚಾಣುವ್ರತಗಳು, ಈ ಧರ್ಮದ ನೈತಿಕ ಸಾಧನೆಯ ನೆಲೆಗಟ್ಟು, ಎಲ್ಲಾ ಜೀವಿಗಳು, ಸಮಾನ ಅವುಗಳಲ್ಲಿ ಉಚ್ಚ ನೀಚವೆಂಬ ಕಲ್ಪನೆಯೇ ಹಿಂಸೆಯ ಮೂಲ. ಎಲ್ಲಾ ಜೀವಿಗಳಿಗೂ, ತಮ್ಮ ಜೀವನ ಪ್ರೀಯವಾಗಿದೆ. ಎಲ್ಲರೂ ಸುಖವಾಗಿರಲು ಬಯಸುತ್ತಾರೆ. ಅದಕ್ಕಾಗಿ ಯಾವ ಪ್ರಾಣಿಗಳಿಗೂ ಹಿಂಸೆಯನ್ನು ನೀಡಕೂಡದು. ಇವು ಈ ಧರ್ಮದ ಮೂಲ ತತ್ವಗಳಾಗಿವೆ. ಆತ್ಮ, ಜೀವ, ಜಗತ್ತು ಇವುಗಳ ತತ್ವವಿವೇಚನೆಗಳೊಡನೆ ಸೃಷ್ಟಿಯ ವರ್ಣನೆ, ಲೋಕೋಪಕಾರ, ಕರ್ಮ ಬಂಧನ ಮುಂತಾದ ಗಹನವಾದ ವಿಚಾರಗಳ ನಿರೂಪಣೆಯೂ ಜೈನ ಧರ್ಮ ಶಾಸ್ತ್ರಗಳಲ್ಲಿ ಪ್ರತಿಪಾದಿತವಾಗಿವೆ.[೧]

ಕರ್ನಾಟಕದಲ್ಲಿ ಜೈನಧರ್ಮವು ಕ್ರಿಸ್ತಪೂರ್ವಕಾಲದಿಂದಲೇ ಹರಡಿರಬೇಕೆಂಬುದಕ್ಕೆ ಹಲವು ಶಾಸನ ಮತ್ತು ಸಾಹಿತ್ಯಿಕ ಆಧಾರಗಳು ದೊರೆಯುತ್ತವೆ. ಉತ್ತರ ಭಾರತದಲ್ಲಿ ಈ ಧರ್ಮವು ಉಗಮವಾದುದಾದರೂ ಕರ್ನಾಟಕದಲ್ಲಿ ಪ್ರಚಾರಗೊಂಡದಂದಿನಿಂದ ಇಲ್ಲಿನ ಸಾಹಿತ್ಯ, ಕಲೆ, ಭಾಷೆ, ವಿದ್ಯಾಪ್ರಸಾರ ಹಾಗೂ ಸಾಮಾನ್ಯ ಜನರ ಜೀವನ ವಿಧಾನ, ನೈತಿಕ ಮೌಲ್ಯಗಳ ಪ್ರತಿಪಾದನೆಗಳಲ್ಲಿ ಪ್ರಮುಖ ಪಾತ್ರವನ್ನು ಈ ಧರ್ಮ ವಹಿಸಿದೆ. ಜೈನ ತೀರ್ಥಂಕರರೆಲ್ಲರೂ ಉತ್ತರ ಭಾರತದಲ್ಲಿ ಜನಿಸಿ, ಧರ್ಮಪ್ರಚಾರ ಮಾಡಿದರೂ, ಜೈನಶಾಸ್ತ್ರ ಗ್ರಂಥಗಳು ರಚಿಸಿದ ಆಚಾರ್ಯರುಗಳಲ್ಲಿ ಹೆಚ್ಚಿನವರು ಕರ್ನಾಟಕದವರು. ಕರ್ನಾಟಕಕ್ಕೆ ಜೈನಧರ್ಮದ ಆಗಮದ ಕಾಲವನ್ನು ಎಲ್ಲಾ ವಿದ್ವಾಂಸರು ಚಂದ್ರಗುಪ್ತ ಮತ್ತು ಭದ್ರಬಾಹು ಮುನಿಗಳ ಆಗಮನದ ಘಟನೆಯೊಡನೆ ಹೇಳುತ್ತಾರೆ. ಕ್ರಿ.ಪೂ.ಕಾಲದಲ್ಲಿ ಭದ್ರಬಾಹು ಭಟ್ಟಾರಕರು ಉಜ್ಜಯನಿಯಲ್ಲಿದ್ದಾಗ, ಉತ್ತರ ದೇಶದಲ್ಲಿ ಹನ್ನೆರಡು ವರ್ಷಗಳ ಕಾಲ ಕ್ಷಾಮವುಂಟಾಗುತ್ತದೆಂಬುದನ್ನು ಅರಿತು ಚಂದ್ರಗುಪ್ತ ಮೊದಲಾದ ಶಿಷ್ಯರೊಡಗೂಡಿ ದಕ್ಷಿಣಕ್ಕೆ ಬಂದು ಕಳ್ಬಪ್ಪು ನಾಡಿನಲ್ಲಿ (ಶ್ರವಣಬೆಳಗೊಳದಲ್ಲಿ) ನೆಲೆನಿಂತರೆಂದು ಹೇಳಲಾಗುತ್ತದೆ. ಈ ಘಟನೆಯು ಕನ್ನಡದ ವಡ್ಡಾರಾಧನೆ, ಸಂಸ್ಕೃತದ ಹರೀಕ್ಷೇಣ, ಬೃಹತ್ಕಥೆ ಮೊದಲಾದ ಗ್ರಂಥಗಳಲ್ಲೂ, ಶ್ರವಣಬೆಳಗೊಳದ ಕೆಲವು ಪ್ರಾಚೀನ ಶಾಸನಗಳಲ್ಲೂ, ಯಕ್ತವಾಗಿದೆ. ಭದ್ರಬಾಹುವಿನೊಡನೆ ಬಂದ ಚಂದ್ರಗುಪ್ತನು ಮೌರ್ಯವಂಶದ

೦೧. ಡಾ.ಎಸ್.ಡಿ.ಶೆಟ್ಟಿ : ಜೈನ ಬಸದಿಗಳು, ಪು.ಸಂ.೨



ಸ್ಥಾಪಕನೆಂದು ಕೆಲವು ವಿದ್ವಾಂಸರು ಭಾವಿಸಿದ್ದಾರೆ. ಮತ್ತೆ ಕೆಲವರು ಅಶೋಕನ ಮೊಮ್ಮಗ ಸಂಪ್ರತಿ ಚಂದ್ರಗುಪ್ತ (ಕ್ರಿ.ಶ.೨ನೇ ಶತಮಾನ) ನೆಂದು, ನಂದ ವಂಶದ ಚಂದ್ರಗುಪ್ತನೆಂದೂ (ಕ್ರಿ.ಶ.೪ನೇಯ ಶತಮಾನ) ಭಾವಿಸುತ್ತಾರೆ. ಜೊತೆಗೆ ಭದ್ರಬಾಹು ಚಂದ್ರಗುಪ್ತರ ಆಗಮನಕ್ಕೆ ಮುಂಚೆಯೇ ಜೈನ ಧರ್ಮವು ಕರ್ನಾಟಕದಲ್ಲಿ ಇದ್ದಿರಬೇಕೆಂಬ ಊಹೆಯೂ ಇದೆ. ಅಂತೂ ಹೆಚ್ಚಿನ ವಿದ್ವಾಂಸರು ನಿರ್ಧರಿಸಿರುವಂತೆ ಕ್ರಿ.ಪೂ.೩ನೇ ಶತಮಾನದ ಆದಿಭಾಗದಲ್ಲಿ ಜೈನಧರ್ಮವು ಕರ್ನಾಟಕಕ್ಕೆ ಬಂದಿರಬೇಕೆಂದು ನಾವು ಭಾವಿಸಬಹುದಾಗಿದೆ. ಕರ್ನಾಟಕದ ರಾಜಮನೆತನಗಳ ಮೇಲೆ ಜೈನಾಚಾರ್ಯರು ತಮ್ಮ ಪ್ರಭಾವವನ್ನು ಬೀರುತ್ತಾ ಬಂದಿದ್ದಾರೆ. ಇದರಿಂದ ಅನೇಕ ರಾಜಮಹಾರಾಜರು ಜೈನಧರ್ಮವನ್ನು ಸ್ವೀಕರಿಸಿ ಅದನ್ನು ಪೋಷಿಸಿದರು. ಹೀಗಾಗಿ ಕನ್ನಡ ನಾಡಿನ ಸಂಸ್ಕೃತಿಯ ವಿಕಾಸದಲ್ಲಿ ಜೈನಧರ್ಮದ ಕೊಡುಗೆ ಅನನ್ಯವಾದುದು.

ಪ್ರಾಚೀನ ಕರ್ನಾಟಕದ ಶ್ರವಣಬೆಳಗೊಳ, ಬನವಾಸಿ, ಕೊಪ್ಪಳ, ಹಲಸಿ, ವನಸೋಗೆ ಮೊದಲಾದ ಜೈನ ಕೇಂದ್ರಗಳು ಪ್ರವರ್ಧಮಾನಕ್ಕೆ ಬಂದವು. ವಿವಿಧ ಶಾಖೆಯ ಮುನಿಸಂಘಗಳು ಕಾರ್ಯ ತತ್ಪರವಾದವು ಕ್ರಿ.ಶ. ಆರಂಭದ ಕಾಲದಿಂದಲೂ ಈ ಧರ್ಮಕ್ಕೆ ರಾಜಾಶ್ರಯ ದೊರೆತು, ನಿರಂತರ ಬೆಳವಣಿಗೆ ಹೊಂದುತ್ತಾ ಬಂದಿತು. ಗಂಗ, ಕದಂಬ, ರಾಷ್ಟ್ರಕೂಟ, ಚಾಲುಕ್ಯ, ಹೊಯ್ಸಳ, ವಿಜಯನಗರ ರಾಜವಂಶಗಳ ಪ್ರೋತ್ಸಾಹ ದೊರೆತು. ಕರ್ನಾಟಕದ ವರ್ಚಸ್ವೀ ಧರ್ಮವಾಗಿ ಮುನ್ನೆಲೆಗೆ ಬಂದಿತು.

ಕರ್ನಾಟಕದಲ್ಲಿ ಜೈನ ಧರ್ಮದ ಅನುಯಾಯಿಗಳ ಹಾಗೂ ಜಿನ ಧರ್ಮದ ಚಟುವಟಿಕೆಗಳ ಕೇಂದ್ರಗಳಾಗಿ ಬಸದಿಗಳು, ಮಠಗಳು ಕಾರ್ಯಮಾಡಿವೆ. ಜೈನ ಧರ್ಮಕ್ಕೆ ಸಂಬಂಧಿಸಿದ ಮೂರ್ತಿಶಿಲ್ಪ, ವಾಸ್ತುಶಿಲ್ಪ, ಸಾಹಿತ್ಯ, ಚಿತ್ರಕಲೆ ಮುಂತಾದವು ಹೆಚ್ಚಲಾರಂಭಿಸಿದವು. ಜೈನ ಧರ್ಮವನ್ನು ಬೋಧಿಸಿದ ತೀರ್ಥಂಕರರು ದಿವ್ಯತ್ವವನ್ನು ಪಡೆದ ಮಾನವರಾದರು. ಕಾಲಕ್ರಮದಲ್ಲಿ ದೇವತಾ ಪುರುಷರಾಗಿ ದೇವರಂತೆ ಆರಾಧಿಸಲ್ಪಡುವ ವ್ಯಕ್ತಿಗಳಾದರು. ಈ ತೀರ್ಥಂಕರರಿಗಾಗಿ ದೇವಾಲಯಗಳು ನಿರ್ಮಾಣಗೊಂಡವು ಜೈನಮುನಿಗಳ ವಾಸಕ್ಕೆ ಈ ದೇವಾಲಯಗಳು ಬಳಕೆಯಾಗತೊಡಗಿದಂತೆ ಆ 'ವಸತಿ' ಗಳು-'ಬಸದಿ'ಗಳಾದವು ಶಾಸನಗಳಲ್ಲಿ ಸಿಗುವ ಮಾಹಿತಿಗಳನ್ನು ನೋಡಿದರೆ, ಜೈನ ಮುನಿಗಳಿಗಾಗಿಯೂ ಆಲಯುಗಳನ್ನು ನಿರ್ಮಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಸಂಸ್ಕೃತದ 'ವಸತಿ' ಯು 'ಬಸದಿ'ಯೆಂಬ ರೂಪವನ್ನು ಪಡೆದುಕೊಂಡಿದೆ.[೨] ಕೊಪ್ಪಳ, ಸ್ತಿವನಿಧಿ, ಪಲಾಸಿಕ, ಬಾಬಾನಗರ, ವಿಜಾಪೂರ, ಮುಳಗುಂದ, ಲಕ್ಷ್ಮೇಶ್ವರ, ಮುಳಖೇಡ, ಸೇಡಬಾಳ ಮುಂತಾದವು ಉತ್ತರ ಕರ್ನಾಟಕದ ಸ್ಥಳಗಳಾಗಿವೆ./ಶ್ರವಣಬೆಳಗೊಳ, ಹೊಂಬುಜ, ಮೂಡಬಿದಿರೆ, ಕಾರ್ಕಳ, ವೇಣೂರು, ಧರ್ಮಸ್ಥಳ, ಸಿಂಹನಗದ್ದೆ ಮುಂತಾದ ದಕ್ಷಿಣಕನ್ನಡ ಜಿಲ್ಲೆಯ ಸ್ಥಳಗಳು ದಕ್ಷಿಣಕನ್ನಡ ಜಿಲ್ಲೆಯೊಂದರಲ್ಲಿಯೇ ಸುಮಾರು ಎರಡುನೂರಕ್ಕಿಂತಲೂ ಹೆಚ್ಚು ಜಿನ ಬಸದಿಗಳಿರುವುದು ಗಮನಾರ್ಹವಾಗಿದೆ.

ಭೋಗಾ ಭೋಗದ ಅಸ್ಥಿರತೆಯಲ್ಲಿಯೇ ತ್ಯಾಗದ ಎಳೆಗಳನ್ನು ಕಾಣುವ ಜೈನಧರ್ಮವು ತನ್ನ ಸಾಂಸ್ಕೃತಿಕ ಮುಖಗಳೆನಿಸಿದ ಸಾಹಿತ್ಯ-ಕಲೆಗಳನ್ನು ಕಡೆಗೆಣಿಸಿದ್ದು ಕಂಡು ಬರುವದಿಲ್ಲ. ಜಿನಮಂದಿರ ನಿರ್ಮಾಣ ಜಿನಬಿಂಬ ತೀರ್ಥಂಕರ ಬಾಹುಬಲಿ-ಯಕ್ಷ-ಯಕ್ಷಿಯರ ದೇವಾಲಯ ನಿರ್ಮಾಣ, ಮೂರ್ತಿಪ್ರತಿಷ್ಠಾಪನೆ ಬಸದಿ ಮಠಗಳ ಗೋಡೆ-ಛತ್ತುಗಳ ವರ್ಣಚಿತ್ರ ಅಲಂಕಾರಣ ಲೌಕಿಕ ಆಗಮಿಕ ಕಾವ್ಯಗಳ ರಚನೆ ಶಾಸ್ತ್ರ-ಸಿದ್ಧಾಂತ-ತಾತ್ವಿಕ ಕೃತಿಗಳ ರಚನೆ ಇವೆಲ್ಲವುಗಳು ಏಕಕಾಲಕ್ಕೆ ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಟಿವಟಿಕೆಗಳಾಗಿವೆ. ಇಂತ ಚಟುವಟಿಕೆಗಳಲ್ಲಿ ಬಸದಿಗಳೇ ಪ್ರಮುಖ ಕೇಂದ್ರಗಳೆನಿಸಿದವು. ಈ ಹಿನ್ನೆಲೆಯಲ್ಲಿ ಬಸದಿಗಳು ಪೋಷಿಸಿಕೊಂಡು ಬಂದ ಸಾಹಿತ್ಯ ಮತ್ತು ಚಿತ್ರಕಲೆ ಈ ಧರ್ಮದ ಗಮನಾರ್ಹವಾದ ಕೊಡುಗೆಗಳಾಗಿವೆ.

---

೦೨. ಡಾ.ಎಸ್.ಡಿ.ಶೆಟ್ಟಿ : ಜೈನ ಬಸದಿಗಳು, ಪು.ಸಂ.೩



ಬಸದಿಗಳು ಪೋಷಿಸುತ್ತಾ ಬಂದ ಸಾಹಿತ್ಯವನ್ನು ಕಾವ್ಯ ಸಾಹಿತ್ಯ, ಶಾಸ್ತ್ರಸಾಹಿತ್ಯ ಎಂಬುದಾಗಿ ವಿಂಗಡಿಸಿಕೊಳ್ಳಬಹುದು. ಕಾವ್ಯ ಎಂಬುದು ಲೌಕಿಕ ಮತ್ತು ಆಗಮಿಕ ವಸ್ತುವನ್ನು ಒಳಗೊಂಡು ಕಾವ್ಯಧರ್ಮ ಧರ್ಮಗಳೆರಡನ್ನು ಪ್ರತಿಬಿಂಬಿಸುವವಂಥದು. ಶಾಸ್ತ್ರ ಎಂಬುದು ತತ್ವ, ಸಿದ್ಧಾಂತ ನೋಂಪಿಗಳಿಗೆ ಸಂಬಂಧಿಸಿದ ಧರ್ಮದ ತಿಳುವಳಿಕೆ ಮತ್ತು ಆಚರಣೆ ಕುರಿತಾದುದು. ಬಸದಿಗಳು ಈ ಎರಡು ಬಗೆಯ ಸಾಹಿತ್ಯವನ್ನು ಇಹ-ಪರ ಜೀವನದ ಉತ್ಕರ್ಷೆಗಾಗಿ ಪೋಷಿಸಿಕೊಂಡು ಬಂದುದು ತಿಳಿಯುತ್ತದೆ.[೩]

ಮೂಲತಃ ಜೈನಮುನಿಗಳಿಗೆ ಆಶ್ರಯಗಳಾಗಿ, ಚಾತುರ್ಮಾಸ್ಯಗಳ ವಸತಿಗಾಗಿ ನಿರ್ಮಿತವಾದ ಈ ಬಸದಿಗಳು ಮುಂದೆ ಧರ್ಮೀಯರ ಅಧ್ಯಯನ, ಅಧ್ಯಾಪನ, ವಾಚನ, ಲೇಖನ ಮತ್ತು ಧರ್ಮ ಶ್ರವಣಾದಿಗಳ ನೆಲೆಗಾಗಿ ರೂಪಗೊಂಡು ಜೈನ ಸಮುದಾಯದ ಸರ್ವತೋಮುಖವಾದ ಅಭಿವೃದ್ಧಿ ಕಾರ್ಯಗಳಿಗೆ ಮಧ್ಯಬಿಂದುವೆನಿಸಿದವು. ಇಲ್ಲಿ ಜರುಗುತ್ತಲಿದ್ದ ಧಾರ್ಮಿಕ ಸಮಾಜಿಕ ಕಾರ್ಯಗಳಲ್ಲಿ ಕಾವ್ಯ-ಶಾಸ್ತ್ರ-ಸಿದ್ಧಾಂತ ಗ್ರಂಥಗಳ ವ್ಯವಸ್ಥಿತವಾದ ಹಸ್ತಪ್ರತಿ ಭಂಡಾರದ ನಿರ್ಮಾಣವು ಪ್ರಮುಖವೆನಿಸುತ್ತದೆ.

ಸರ್ವಕಲೆಗೂ ಆಧಾರ ಭೂತವಾದುದೆಂದು ಭಾವಿಸುವ ಚಿತ್ರಕಲೆಯು ಲಲಿತಕಲೆಗಳಲ್ಲಿ ಒಂದು. ಜೈನ ಪರಂಪರೆಯಲ್ಲಿ ಸ್ವತಃ ಆದಿಜಿನನೇ ಚೌಷಷ್ಠಿ ಕಲೆಗಳ ಪ್ರವರ್ತಕನು. ಜೈನ ಕವಿಗಳಾದ ವಡ್ಡಾರಾಧನಕಾರ, ಪಂಪ, ನಯಸೇನಾದಿಗಳಲ್ಲಿ ಕವಿಗಳಲ್ಲಿ ಚಿತ್ರಕಲೆಯ ಪ್ರಾಸ್ತಾಪವಿದೆ.[೪] ಇವರು "ಚಿತ್ರಕರ್ಮ ಪತ್ರಚ್ಛೇದ" ಎಂದಿರುವುದು ಚಿತ್ರಕಲೆಯನ್ನು ಕುರಿತಾಗಿರುವುದನ್ನು ಕಾಣಬಹುದು.

ಪುರಾತನ ಪ್ರಕೃತ ಭಾಷೆಯ ಗ್ರಂಥಗಳು ಸಾಮಾನ್ಯವಾಗಿ ಜೈನ ಗ್ರಂಥಗಳಾಗಿವೆ. ೧೧ನೆಯ ಶತಮಾನದವರೆಗೆ ಪ್ರಾಕೃತವು ಜೈನರ ಪವಿತ್ರ ಭಾಷೆಯಾಗಿತ್ತು. ಪ್ರಾಕೃತ ಭಾಷೆಯು ಸಹ ದೇಶ ಭಾಷೆಯಾಗಿತ್ತು. ಆದಕಾರಣ ಧರ್ಮಪ್ರಚಾರಕ್ಕೆ ಪ್ರಾಕೃತ ಭಾಷೆ ಮಾಧ್ಯಮವಾಗಿರಬಹುದು. ಕರ್ನಾಟಕಕ್ಕೆ ಪರಿಚಿತವಾಗಿದ್ದ ಪ್ರಾಕೃತ ಭಾಷೆಯು ಅನೇಕ ಹಸ್ತಪ್ರತಿಗಳನ್ನು ಹೊಂದಿದ್ದು. ಕರ್ನಾಟಕದ ಜೈನ ಚಿತ್ರಕಲೆಯ ಇತಿಹಾಸವನ್ನು ಕಟ್ಟಿಕೊಡಲು ಇವು ಸಹಾಯಕವಾಗುತ್ತವೆ. ಈ ಪ್ರಕೃತ ಭಾಷೆಯು ಉತ್ತರ ದಕ್ಷಿಣ ಮತ್ತು ಪೂರ್ವ ಪಶ್ಚಿಮ ಭಾರತದ ಭಾಗಗಳನ್ನು ಒಂದುಗೂಡಿಸಿದ್ದಲ್ಲದೆ. ಕರ್ನಾಟಕದ ಹಸ್ತಪ್ರತಿಗಳು ವಿಭಿನ್ನವಾಗಿ ಮೂಡಿ ಬರಲು ಕಾರಣೀಭೂತವಾಗಿರುವಂತೆಯೇ ಅತ್ಯಮೋಘವಾದ ಜೈನ ಚಿತ್ರಕಲೆಯ ಹಸ್ತಪ್ರತಿಗಳು ಕರ್ನಾಟಕದ ಜೈನ ಚಿತ್ರಕಲೆ ಪ್ರವರ್ಧಮಾನಕ್ಕೆ ಬರಲು ಕಾರಣೀಭೂತವಾಗಿದೆ.

ಜೈನ ಧರ್ಮಗ್ರಂಥಗಳಾಗಿರುವ ತ್ರೈಲೋಕ್ಯ, ಪ್ರಜ್ಞಾಪತಿ, ಸರ್ವನಂದಿ, ಅನುಪ್ರೇಕ್ಷಾ, ದರ್ಶಾನಸಾರ, ಜ್ಞಾನ ಚಂದ್ರಚರಿತೆ, ಪರಮಾತ್ಮ ಪ್ರಕಾಶ, ಸಮಧರ್ಮ ದೋಹಾ ಗ್ರಂಥಗಳು ಪ್ರಾಕೃತದಲ್ಲಿದ್ದು ಈ ಗ್ರಂಥಗಳನ್ನು ಅನ್ಯಧರ್ಮಿಯರು ನೋಡಕೂಡದು ಎನ್ನುವ ಧಾರ್ಮಿಕ ವಿಧಿಯ ಕಾರಣದಿಂದಾಗಿ ಅವುಗಳನ್ನು ಸಾಮಾನ್ಯ ಓದುಗರ ಕೈಗಳಿಗೆ ಲಭ್ಯವಾಗುವುದಿಲ್ಲವಾಗಿವೆ.[೫]

ಪಂಪನ ಕಾಲದ ಪೂರ್ವ ಕಾಲವೂ ಸಾಹಿತ್ಯ ಸಮೃದ್ಧವಾದ ಕಾಲವಾಗಿತ್ತು. ಕರ್ನಾಟಕದ ಪರಿಸರದಲ್ಲಿ ಅನೇಕ ಕವಿಗಳ ಚರಿತ್ರೆ ಇದ್ದರೂ ಅವು ಸಂರಕ್ಷಣೆಯ ಮಾರ್ಗವನ್ನು ಕಾಣದೆ ಕಾಲನದಾಳಿಗೆ ತುತ್ತಾಗಿ ಕಣ್ಮರೆಯಾಗಿವೆ. ಈ ಯುಗದಲ್ಲಿ ಚಿತ್ರ, ವಾಸ್ತುಶಿಲ್ಪ ಕುರಿತು ಅನೇಕ ಗ್ರಂಥಗಳು ಹೊರ ಬಂದಿವೆ. ಈ ಯುಗವನ್ನು ಕುರಿತು ಡಾ. ಎಂ.ಎಂ.ಕಲಬುರ್ಗಿಯವರು ಈ ರೀತಿಯಾಗಿ ಹೇಳುತ್ತಾರೆ. ಕನ್ನಡ ಸಾಹಿತ್ಯವನ್ನು

---

೦೩. ಡಾ.ಬಿ.ಕೆ.ಹಿರೇಮಠ : ಸೃಷ್ಟಿ, ಪು.ಸಂ.೧೪೬

೦೪. -ಅದೇ- ಪು.ಸಂ.೫೪

೦೫. -ಅದೇ- ಪು.ಸಂ.೫೫



ಅಜ್ಞಾತಯುಗವೆಂದು ಪರಿಗಣಿಸಲಾಗಿದೆ. ಇದನ್ನು ಪಂಪನ ಪೂರ್ವಯುಗ, ಪಂಪನ ನಂತರ ಯುಗವೆಂದು ಕರೆಯಬಹುದು. ಅಜ್ಞಾತ ಯುಗದ ಒಂದೂ ಕೃತಿಸಿಕ್ಕಿಲ್ಲ. ಆದರೆ ಆ ಹೊತ್ತಿಗಾಗಲೇ ಟೀಕೆ ವ್ಯಾಖ್ಯಾನಗಳಿಗೆ ಉದಾಹರಣೆಗೆ ಶ್ಯಾಮಕುಂದಾಚಾರ್ಯ, ತೊಂಬಳೂಚಾರ್ಯರ ಉಭಯ ಸಿದ್ಧಾಂತ ವ್ಯಾಖ್ಯಾನ ಅನಾಮಧೇಯನ ತತ್ವಾರ್ಥ ಸೂತ್ರ, ಸೂತ್ರ ವ್ಯಾಖ್ಯಾನಗಳೆಂಬ ಹೆಸರುಗಳು ಕೇಳಿಬರುತ್ತವೆಯೇಹೊರತು ಹಸ್ತಪ್ರತಿಗಳು ಸಿಕ್ಕಿಲ್ಲವೆಂದೂ ಅಭಿಪ್ರಾಯಪಡುತ್ತಾರೆ.[೬]

ಈ ಯುಗದಲ್ಲಿ ಚಿತ್ರಕಲೆಯ ಹಿನ್ನಲೆಯೊಂದಿಗೆ ವಾಸ್ತು, ಶಿಲ್ಪ, ಮೂರ್ತಿಶಿಲ್ಪದಂತಹ ವಿಷಯಗಳ ಕುರಿತು ಅನೇಕ ವಿದ್ವಾಂಸರು, ಆಗಮಿಕ ಶಾಸ್ತ್ರಜ್ಞರು ಚಿಂತನೆಗೈದ ಕ್ರಮಕ್ಕಾಗಿಯೇ ಸಂಸ್ಕೃತ, ಪ್ರಾಕೃತ ಮತ್ತು ಕನ್ನಡದ ಗ್ರಂಥಗಳಲ್ಲಿ ಜೈನ ಚಿತ್ರಕಲೆಯ ವಿವರಗಳು ಸಿಗುತ್ತವೆ. ಮನಸಾರ, ಮನುಷ್ಯಾಲಯ-ಚಂದಿಕೆ, ಅಂಕಭೋದಿನಿ, ಸುಪ್ರಬೇದಾಗಮ, ವಾಸ್ತುವಿದ್ಯಾ ಬೃಹತ್ಸಂಹಿತಾ, ಶಿಲ್ಪರತ್ನ ಮಯಾಮತ, ಕಾಶ್ಯಪ ಶಿಲ್ಪ, ತಂತ್ರ ಸಮುಚ್ಚಯ, ಅಂಶ ಮದ್ವೇದಾಗಮ ವಾಸ್ತು ರತ್ನಾವಳೀ, ಕಾಮಿಕಾಗಮ ಪ್ರತಿಮಾ ಲಕ್ಷಣ, ಪ್ರತಿಮಾಮಾನ ಲಕ್ಷಣ, ರೂಪಮಂಡನ, ವಾಸ್ತುಮಂಡನ ಇತ್ಯಾದಿ ಗ್ರಂಥಗಳು ವಾಸ್ತುಶಿಲ್ಪ ಶಾಸ್ತ್ರವನ್ನು ವಿವರಿಸುತ್ತವೆ. ಕೌಟಿಲ್ಯನ ಅರ್ಥಶಾಸ್ತ್ರವೂ ವಾಸ್ತುಶಿಲ್ಪ ವಿಷಯವನ್ನೊಳಗೊಂಡಿದೆ. ಅಂದಿನ ಕಲಾವಿದರು ಶುಷ್ಕ ನಯಮಾಂಧರಾಗದೆ ಸೌಂದರ್ಯಾಭಿರುಚಿ ರಸಜ್ಞತೆಗಳಿಗೆ ಮಹತ್ವ ನೀಡಿದವರಾಗಿದ್ದಾರೆ.[೭]

ಒಂಭತ್ತನೆಯ ಶತಮಾನದ ಕನ್ನಡ ನಾಡಿನ ಬಹುದೊಡ್ಡ ಕೃತಿಯಾದ ಕಲ್ಯಾಣ ಚಾಲುಕ್ಯರ ಕಾಲದ ವಡ್ಡಾರಾಧನೆ ಗ್ರಂಥವನ್ನು ಶ್ರೀ.ಡಿ.ಎಲ್.ನರಸಿಂಹಾಚಾರ್ಯರು ೧೯೪೦ರಲ್ಲಿ ಇದನ್ನು ಬೆಳಕಿಗೆ ತಂದರು. ಇದರ ಕವಿಕಾಲಗಳ ವಿಷಯವಾಗಿ ಭಿನ್ನ ಅಭಿಪ್ರಾಯಗಳಿವೆ. ಸುಮಾರು ೯ನೆಯ ಶತಮಾನದಲ್ಲಿ ಶಿವಕೋಟಿಯಂಬುವವನು ಈ ಗ್ರಂಥವನ್ನು ರಚಿಸಿದನೆಂದು ಅಭಿಪ್ರಾಯಪಡಲಾಗಿದೆ. ಇದರಲ್ಲಿ ೧೬ಜನ ಜೈನಯತಿಗಳ ಮತ್ತು ಶಿಲ್ಪ ವಾಸ್ತುವಿನ ವರ್ಣಚಿತ್ರಗಳಿವೆ. ವರ್ಣವಿವರಗಳೊಂದಿಗೆ ದೇಹದ ತಾಳಮಾನ ದೇಹಮಾನ ಮತ್ತು ವರ್ಣಗಳ ಕುರಿತು ಈ ಗ್ರಂಥದಲ್ಲಿ ಚರ್ಚಿಸಲಾಗಿದೆ.[೮] ಪೂರ್ವಭಾರತದ ಜೈನ ಕೃತಿಗಳಲ್ಲಿ ಕಾಣುವ ಕಲಾತ್ಮಕ ಹಸ್ತಪ್ರತಿಯೂ ಇದಾಗಿರುತ್ತದೆ.

ಕ್ರಿ.ಶ. ೧೦ನೆಯ ಶತಮಾನದಲ್ಲಿ ರಚನೆಯಾದ ಸಾಹಿತ್ಯವು ಆ ಕಾಲದ ಹಸ್ತಪ್ರತಿ ಚಿತ್ರಕಲೆಯನ್ನು ತಿಳಿಸಿಕೊಡುತ್ತದೆ. ವಿದ್ವಾಂಸರ ಅಭಿಪ್ರಾಯದಂತೆ ಕ್ರಿ.ಶ. ೯೨೦ರ ಸುಮಾರಿನಲ್ಲಿ ಬದುಕ್ಕಿದ್ದ ಶಿವಕೊಟ್ಯಾಚಾರ್ಯ ಬರೆದಿರುವನೆಂದು ತಿಳಿಯಲಾಗಿರುವ ವಡ್ಡಾರಾಧನೆ ಗ್ರಂಥದ ಸುಕುಮಾರ ಸ್ವಾಮಿ, ಕೌಶಲಸ್ವಾಮಿ, ಸನತಕುಮಾರ ಚಕ್ರವರ್ತಿ, ಸಿರಿವಿಣ್ಣ, ಗುರುದತ್ತ ಮತ್ತು ಭಟ್ಟಾರಕರಂತಹ ಕವಿಗಳ ಕಥೆಗಳಲ್ಲಿ ಚಿತ್ರರಚನೆ ಚಿತ್ರರಚನಾ ಸಾಮಗ್ರಿ ಚಿತ್ರಕಾರನ ಕೌಶಲ್ಯ, ಚಿತ್ರವಿಮರ್ಶೆ ಮುಂತಾದ ಉಲ್ಲೇಖಗಳು ಕಂಡುಬರುತ್ತವೆ. ವಡ್ಡಾರಾಧನೆಯ ಸುಕೌಶಳಸ್ವಾಮಿ ಕಥೆಯಲ್ಲಿನ ಸುಕೇಶನಿಯ ಕರುಮಾಡದ ಗೋಡೆಗಳ ಮೇಲೆಲ್ಲ ಅರಸನು ಚಿತ್ತಾರಿಗರಿಂದ ಚಿತ್ರ ಬರೆಯಿಸುತ್ತಾನೆ. ಹಿಂದಿನ ಜನ್ಮದ ಘಟನೆಗಳನ್ನು ನೆನೆದು ಸುಕೇಶನಿ ಸ್ವತಃ ಚಿತ್ರ ಬರೆಯುತ್ತಾಳೆ ಎಂಬ ವಿಷಯಗಳು ಹೇಳಲಾಗಿದೆ.[೯]

ಹತ್ತನೆಯ ಶತಮಾನವು ಕನ್ನಡ ಸಾಹಿತ್ಯದ ಸಮಗ್ರ ಕನ್ನಡ ನಾಡಿನ ಸಾಂಸ್ಕೃತಿಕ ಸುವರ್ಣಯುಗ ಕನ್ನಡ ನಾಡಿನ ಸಾಹಿತ್ಯ, ಸಂಸ್ಕೃತಿಗಳ ವೈಭವವನ್ನು ಈ ಕಾಲದಲ್ಲಿ ಕಾಣಬಹುದು. ಪ್ರತಿಭಾಶಾಲಿಗಳಾದ ಅನೇಕ ಕವಿಪುಂಗವರು ಜನಿಸಿ ಕನ್ನಡ ಕಾವ್ಯರತ್ನಗಳನ್ನು ನಿರ್ಮಿಸಿದ ಈ ಯುಗವನ್ನು ಕನ್ನಡ ನಾಡಿನ ಕಾವ್ಯಗಳ

---

೦೬. ಎನ್.ಮರಿಶಾಮಾಚಾರ್ : ಸಾಹಿತ್ಯದಲ್ಲಿ ಚಿತ್ರಕಲೆ,ಪು.ಸಂ.೩೬

೦೭. ಡಾ.ಎಂ.ಕಲಬುರ್ಗಿ : ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು, ಪು.ಸಂ.೧೦೦

೦೮. ಡಾ.ಎಚ್.ಎನ್.ಚಿತ್ರಗಾರ : ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಪು.ಸಂ.೪೫

೦೯. -ಅದೇ- ಪು.ಸಂ.೪೭



ಯುಗ ಸರ್ವತೋಮುಖ ಏಳಿಗೆಗೆ ಸಾಧಿಸಿದ ಸುವರ್ಣಯುಗ ಈ ಯುಗದ ಕವಿಗಳು ಸಾಹಿತ್ಯ ವಲಯಕ್ಕಷ್ಟೇ ಸೀಮಿತಗೊಳ್ಳದೆ, ಸಾಹಿತ್ಯದ ಮೂಲಕ ನಾಡಿನ ಚಿತ್ರ, ಸಂಗೀತ, ಶಿಲ್ಪ ಮತ್ತು ಚಾರಿತ್ರಿಕ ವಲಯಗಳನ್ನು ಚರ್ಚಿಸಿದರು. ಚಿತ್ರಕಲೆಯ ಇತಿಹಾಸದ ಕಾಲ ಗರ್ಭದಲ್ಲಿ ಅಡಗಿ ಕುಳಿತಿದ್ದು ಅನೇಕ ಚಿತ್ರಕಲಾ ಪ್ರಕಾರಗಳನ್ನು ಪರಿಚಯಿಸಿದಂತೆ ಕರ್ನಾಟಕದ ಜೈನ ಚಿತ್ರಕಲೆಯ ಇತಿಹಾಸವನ್ನು ಗಟ್ಟಿಗೊಳಿಸಲು ದಿಟ್ಟವಾದ ಕೊಡುಗೆಯಾಗಿದೆ.

ಪಂಪಯುಗದಲ್ಲಿ ಬರುವ ಹಲವಾರು ಕಾವ್ಯಗಳ ಕರ್ತೃಗಳು ತಮ್ಮ ಕಾವ್ಯಗಳಲ್ಲಿ ಚಿತ್ರಕಲೆಯ ಕುರಿತು ಉಲ್ಲೇಖಿಸುವುದರೊಂದಿಗೆ ಚಿತ್ರಕಲೆಯ ಕುರಿತು ನೇರ ಚರ್ಚೆಯನ್ನು ಮಾಡಿದ್ದಾರೆ. ಆ ಎಲ್ಲ ಕವಿಪುಂಗವರು ಕಂಡಂತೆ ಕರ್ನಾಟಕದ ಜೈನ ಚಿತ್ರಕಲೆ ಇತಿಹಾಸವನ್ನು ಕಟ್ಟಿಕೊಡುವ ಯತ್ನವನ್ನು ಇಲ್ಲಿ ಮಾಡಲಾಗಿದೆ. ಕನ್ನಡ ಕಾವ್ಯ ಪರಂಪರೆಯಲ್ಲಿ ಕವಿ ಪಂಪ, ಕವಿ ಪೊನ್ನ, ನಾಗಚಂದ್ರ, ಚಾವುಂಡರಾಯ, ನಯಸೇನ ಅನಂತನಾಥರು ಚಿತ್ರಕಲೆಗೆ ಮಾನ್ಯತೆ ಇತ್ತವರು. ಕವಿರಾಜಮಾರ್ಗ ವಡ್ಡಾರಾಧನೆಗಳಿಗೆ ಸಂದರ್ಭೋಚಿತ ಪ್ರಸಂಗನ್ನಾಯ್ದು ಚಿತ್ರಕಲೆ ಅಭಿವ್ಯಕ್ತಗೊಂಡಿದೆ.

"ಭಾವ ವಿಲಸತ್ವರ್ಣ ಕ್ರಮವೃತ್ತಿಯಿಂದ ಪ್ರಕಟ ಮಾಡಿದ ಪೇಳ್ದ ಚಿತ್ರಕೃತಿ" ಎಂಬ ಉಲ್ಲೇಖ ಕವಿರಾಜಮಾರ್ಗದಲ್ಲಿದೆ. ವಡ್ಡಾರಾಧನೆ "ನವ ಯೌವನೆಯರಾದ ವಾಮರಥನ ಅಷ್ಟಕುಮಾರಿಯರು" ಅಕ್ಷರಾಲೇಖ್ಯ ಗಣಿತ ಗಾಂಧರ್ವ ನೃತ್ಯ ಚಿತ್ರಕರ್ಮ ಪತ್ರಚ್ಛೇದಮೆಂದಿವು ಚತುಷಷ್ಠಿ ಕೆಳಗಳೊಳಾದಮಾನುಂ ಕುಶಲೆಯರ್" ಎಂದು ಹೊಗಳಿರುವುದು ಕಂಡು ಬರುತ್ತದೆ.[೧೦]

ವಿಕ್ರಮಾರ್ಜುನ ವಿಜಯದಲ್ಲಿ ಕವಿ ಪಂಪ ಚಿತ್ರಕಲೆಯ ಬಗ್ಗೆ "ಸಾಮಂತ ಚೂಡಾಮಣಿಯ ಮಯ್ಯ ಬಣ್ಣಂ ವಿಧಾನ್ಯನೆಂಬ ಚಿತ್ತಾರಿಯ ವರ್ಣಕ್ರಮಂಗೆಯ್ದು ಕದಳಿಗರ್ಭಶ್ಯಾಮವೆಂಬ ಬಣ್ಣದಂತಾದುದು" ಎಂದು ಅರ್ಜುನನ್ನು ವರ್ಣಿಸಿರುವದುಂಟು. ಅಂತೆಯೇ ಅರ್ಜುನನು ತನ್ನ ಬಾಲ್ಯ ಕಾಲದಲ್ಲಿ "ಚಿತ್ರಕರ್ಮ ಪತ್ರಚ್ಛೇದ ಗೃಹಗತಿ ರತ್ನ ಪರೀಕ್ಷಗಳೊಳಂ ಸರ್ವಜ್ಞಂ ಮಹೇನ್ದ್ರಂ ಜಾಣನಂ" ಎಂದು ಕರೆಯಿಸಿಕೊಂಡಿರುವನು.[೧೧]

ಕವಿ ಪಂಪನ ಇನ್ನೊಂದು ಕೃತಿ ಆದಿಪುರಾಣ ಅದರ ಭಾವಾಬವಳಿಯೊಂದರಲ್ಲಿ ಪತಿಪತ್ನಿಯರು ಹಿಂದಣ ಜನ್ಮದ ಕಥೆಯನ್ನು ಚಿತ್ರರೂಪದಲ್ಲಿ ಬರೆದು ಆ ಮೂಲಕ ಮರುಜನ್ಮದಲ್ಲಿ ಒಂದುಗೂಡಿದ ಚಿತ್ರಪಟದ ಪ್ರಸ್ತಾಪವಿದೆ. ಇದನ್ನು ಗಮನಿಸಿದರೆ ಚಿತ್ರಕಲೆಯ ಮಹತ್ವ ಅರ್ಥವಾಗದಿರದು. ಪಂಪನು ಹಾಕಿಕೊಟ್ಟ ಈ ಮಾರ್ಗದಲ್ಲಿಯೇ ಅನಂತರದ ಅನೇಕ ಜೈನ ಕವಿಗಳು ನಡೆದರು, ಪೊನ್ನ ಮಹಾಕವಿಯು ಪಂಪನ ಸಮಕಾಲೀನನಾದವನು ರಾಷ್ಟ್ರಕೂಟ ಚಕ್ರವರ್ತಿಯಾದ ಮೂರನೆಯ ಕೃಷ್ಣನಿಂದ ಕವಿಚಕ್ರವರ್ತಿ ಎಂಬ ಬಿರುದನ್ನು ಪಡೆದನು. ಜೈನಧರ್ಮದಲ್ಲಿ ವಿಶೇಷ ಪರಿಣಿತನಾದವನು ತನ್ನ ಕಾಲದಲ್ಲಿ ಬಹು ಗೌರವಕ್ಕೆ ಪಾತ್ರನಾಗಿದ್ದಿರಬೇಕು ಈತನ ಭಾವಸ್ಥಿರತೆ, ರಾಮಾಭ್ಯುದಯ, ಶಾಂತಿ ಪುರಾಣವನ್ನೇ ದಾನಚಿಂತಾಮಣಿ ಅತ್ತಿಮಬ್ಬೆಯು ಸಾವಿರ ಪ್ರತಿಮಾಡಿಸಿ ಹಂಚಿದಳೆಂಬುದು ಸರ್ವವಿಧಿತ, ಈತ ತನ್ನ ಕಾವ್ಯವಾದ ಶಾಂತಿ ಪುರಾಣದಲ್ಲಿ ಹೀಗೆ ಚಿತ್ರಕಲೆಯನ್ನು ಕುರಿತು ಹೇಳಿಕೊಂಡಿದ್ದಾನೆ.[೧೨]

ನಯಮಳವಟ್ಟಿ ಪಚ್ಚ ಸಹಕಾರದೊಳಿಂಗುಳಕಂ ತಳರ್ತ ಶೋ
ಕೆಯೊಳರಿದಾಳ ಮುಳ್ಳಲರ್ದ ಸೆಂಪಗೆಯೋಳ್ ಕಡುಗರ್ಪು ಭೃಂಗಕೋ
ಟಿಯೊಳೆಸಿದಿರ್ದ ನೀಲಗಿರಿ ಮಲ್ಲಿಗೆಯಾಳ್ ಸಮನಾಗೆ ಚೀರಘು
ಟ್ಟಿಯ ಬರೆದಿಟ್ಟ ಬನಕ್ಕಣೆಯಾಯ್ತು ಬನಂ ವಿದೇಹಿದೊಲ್

**–ಶಾಂತಿಪುರಾಣ**[೧೩]

---

೧೦. ಡಾ.ಎಚ್.ಎನ್.ಚಿತ್ರಗಾರ : ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಪು.ಸಂ.೪೮

೧೧. ಡಾ.ಚೆನ್ನಕ್ಕ ಪಾವಟೆ : ನಿಜದ ನೆಲೆ, ಪು.ಸಂ.೧೦೬

೧೨. –ಅದೇ– ಪು.ಸಂ.೧೦೭



ಪೊನ್ನ ಕವಿ ತನ್ನ ಕಾವ್ಯದಲ್ಲಿ ಚಿತ್ರಕಲೆಯನ್ನು ಸಾಹಿತ್ಯಕ್ಕೆ ಸಮವರ್ತೀಯಾಗಿ ಬಳಸಿಕೊಂಡಿರುವಂತೆಯೇ ಇತನು ಚಿತ್ರಕಲಾ ಲೋಕಕ್ಕೆ ಮಾಡಿದ ಬಹುದೊಡ್ಡ ಉಪಕಾರವೆಂದರೆ ಅಜ್ಞಾತವಾಗಿ ಉಳಿದಿದ್ದ ಕರ್ನಾಟಕ ಚಿತ್ರಕಲಾ ಇತಿಹಾಸದಲ್ಲಿ 'ಚೀರಘಟ್ಟಿ' ಎಂಬ ಒಬ್ಬ ಕಲಾವಿನನ್ನು ಕುರಿತು ಚರ್ಚಿಸಿದ್ದಾನೆ.[೧೪]

ರಾಷ್ಟ್ರಕೂಟರ ಚಕ್ರವರ್ತಿ ಮೂರನೇ ಕೃಷ್ಣನ ಆಸ್ಥಾನದಲ್ಲಿದ್ದ ಪೊನ್ನ ಕ್ರಿ.ಶ. ೯೫೦ರಲ್ಲಿ ಬರೆದ ಶಾಂತಿಪುರಾಣದಲ್ಲಿ ಅನೇಕ ಹಸ್ತಪ್ರತಿಗಳ ಚಿತ್ರಗಳನ್ನು ಬರೆದ ಉಲ್ಲೇಖ ದೊರೆತಿವೆ. ಮನೆಯೊಳಗೆ, ಚಿತ್ರಶಾಲೆಯೊಳಗೆ ಚಿತ್ರ ಬರೆದ ವಿವರಣೆ ಇದೆ. ಚೀರಘಟ್ಟಿ ವಿಶ್ವಕರ್ಮರೆಂಬ ಚಿತ್ರಕಲಾವಿದರ ಬಗೆಗೂ ಪಂಚವಿಧ ವರ್ಣ ಇತ್ಯಾದಿಗಳ ಕುರಿತು ಪೊನ್ನ ಪ್ರಸ್ತಾಪಿಸುತ್ತಾನೆ. ಪೊನ್ನನ ಸಮಕಾಲೀನನಾದ ರನ್ನನಿಂದ "ಅಜಿತನಾಥ ಪುರಾಣ" ರಚನೆಗೊಂಡಿದೆ. ಪ್ರಾಚೀನ ಕನ್ನಡ ಸಾಹಿತ್ಯದ ಮತ್ತು ಅದ್ವೀತಿಯ ಪಂಪ ಯುಗದ ಕೊನೆಯ ಕವಿ ಚಿತ್ರಕಲೆಗೆ ಹೆಚ್ಚಿನ ಮಹತ್ವ ಕೊಟ್ಟ ಪ್ರಾಕೃತ ಕವಿ ಅಭಿನವ ಪಂಪ-ನಾಗಚಂದ್ರ ಹೃದಯ ಸಾಕ್ಷಿಯಾಗಿ ಸಮಾಜವನ್ನು ಆತ್ಮಸಾಕ್ಷಿಯಾಗಿ ಸೃಷ್ಟಿಸಿದ ಕವಿಯೀತ. ತನ್ನ ಮಲ್ಲಿನಾಥ ಪುರಾಣದಲ್ಲಿ ನಿತ್ಯನೂತನ ನಿಸರ್ಗ ವರ್ಣನೆ ಬಿಸಿಲು-ಬೆಳೆದಿಂಗಳು ಕತ್ತಲೆ-ಬೆಳಕು-ಸೂರ್ಯೋದಯ ಸೂರ್ಯಾಸ್ತಗಳನ್ನು ಸೃಷ್ಟಿಯ ನಿತ್ಯ ಪರಿವರ್ತನಶೀಲ ವ್ಯಾಪಾರದ ಒಳತಿರುವುಗಳು ಹೊಸದೆನ್ನುವಂತೆ ವರ್ಣಿಸಿರುವನು. ಸೂರ್ಯೋದಯ ಸೂರ್ಯಾಸ್ತಗಳ ನವೀನ ಮತ್ತು ಜೀವಂತ ವರ್ಣನೆಗಳು ನಾಗಚಂದ್ರನಂತಹ ಕವಿಯನ್ನು ಹೊರತುಪಡಿಸಿ, ಕನ್ನಡದ ಬೇರೆ ಕವಿಗಳಲ್ಲಿ ಕಾಣುವುದು ಅಪರೂಪ.[೧೫]

ಜೈನಪುರಾಣಗಳ ಮಾಲಿಕೆಯಲ್ಲಿ ಯಾವ ಪುರಾಣದಲ್ಲಿಯೂ ಇಷ್ಟು ದಟ್ಟವಾಗಿ ಕಾಣಿಸಿಕೊಳ್ಳದ ಚಿತ್ರಕಲೆ ನಾಗಚಂದ್ರನ ಮಲ್ಲಿನಾಥ ಪುರಾಣದಲ್ಲಿ ಚಿತ್ತಾಕರ್ಷಕವಾಗಿ ಒಂದು ಕಾವ್ಯ ಕಲೆಗಟ್ಟಿ ನಿಂತಿದೆ. ನಾಗಚಂದ್ರನಲ್ಲಿ ಕಾವ್ಯಕಲೆಯಷ್ಟೇ ಚಿತ್ರಕಲೆಯೂ ಶ್ರೀಮಂತಿಕೆ ಪಡೆದಿದೆ. ಕಾವ್ಯದ ಒಟ್ಟಂದ ಕಡೆದಂತೆ ಪ್ರತ್ಯಂಗಗಳನ್ನು ಅನುಗೊಳಿಸುವ ಚೈತನ್ಯಶೀಲ ಕಲೆ ಕನ್ನಡ ಕವಿ ಪಂಪನಂತೆ ಅಭಿನವ ಪಂಪ ನಾಗಚಂದ್ರನಲ್ಲಿಯೂ ಕೆಲವೆಡೆ ಪ್ರತಿಫಲಿಸಿದೆ ಎಂಬುದಕ್ಕೆ ಇದು ಒಳ್ಳೆಯ ಉದಾಹರಣೆಗಳಿವೆ. ಇಡೀ ಕಾವ್ಯದ ಒಡಲಲ್ಲಿ ಬಣ್ಣ ಬಣ್ಣದ ಚಿತ್ರಗಳನ್ನು ಬಿಡಿಸುತ್ತ ಹೋಗಿದ್ದರೂ ಸಂಗೀತ ಮತ್ತು ನರ್ತನಗಳಂತೆ ಚಿತ್ರಪಟ ದರ್ಶನದ ಒಂದು ಹೊಸ ಪ್ರಸಂಗವನ್ನೇ ನಿರ್ಮಿಸಿಕೊಂಡಿದ್ದಾನೆ. ಇದರಿಂದ ತೀರ್ಥಂಕರರ ಲೌಕಿಕ ಜೀವನದ ಕಾವ್ಯ ಮಹೋತ್ಸವದಲ್ಲಿ ಒಂದು ಪ್ರಬುದ್ಧ ಚಿತ್ರ ಪ್ರದರ್ಶನವನ್ನೇರ್ಪಡಿಸಿದಂತಾಗಿದೆ. ಶಬ್ದ ಚಿತ್ರಗಳ ಜೊತೆ ಬಿಡಿಸಿದ ಈ ವರ್ಣಚಿತ್ರಗಳಿಂದಾಗಿ ಮಲ್ಲಿನಾಥ ಪುರಾಣ ಎರಡು ಕಲಾಕೃತಿಗಳ ಸುಂದರ ಸಂಪುಟವೆನಿಸಿದೆ.[೧೬]

ಹೀಗೆ ಪುರಾಣದ ಗರಿಗರಿಯಲ್ಲಿ ಕಾವ್ಯದ ಕಣ್ಣುಗಳನ್ನು ಬಿಡಿಸುತ್ತ ಹೋಗಿ "ಕಾವ್ಯಧರ್ಮಮಂ ಧರ್ಮಮುಮಂ" ಮೇಳೈಸಿದ್ದಾನೆ. ಇಂಥ ಚಿತ್ರಕಲೆಯ ವರ್ಣವೈವಿಧ್ಯತೆ ಅಭಿವ್ಯಕ್ತಿಪಡಿಸುವ ಕನ್ನಡದ ಶ್ರೇಷ್ಠ ದರ್ಜೆಯ ಉತ್ಕೃಷ್ಟ ಜೈನ ಪುರಾಣಗಳೆಂದರೆ ಕವಿ ಪಂಪನ ಆದಿಪುರಾಣ, ವಿಕ್ರಮಾರ್ಜುನ ವಿಜಯ, ಕವಿ ಜನ್ನನ ಯಶೋಧರ ಚರಿತ, ಅನಂತನಾಥ ಪುರಾಣ, ಕವಿ ನಾಗಚಂದ್ರನ ಮಲ್ಲಿನಾಥ ಪುರಾಣ ಮತ್ತು ರಾಮಚಂದ್ರ ಚರಿತ ಪುರಾಣಗಳೆಂದು ಸ್ಪಷ್ಟವಾಗಿ ಹೇಳಬಹುದು. ಇತರ ಜೈನಕೃತಿಗಳಲ್ಲಿ ಅಲ್ಪ ಸ್ವಲ್ಪ ಮಾಹಿತಿಗಳೂ ದೊರಕುವುದುಂಟು. ಅಭಿನವ ಪಂಪನೆನಿಸಿದ ನಾಗಚಂದ್ರನ ರಾಮಚಂದ್ರ ಚರಿತ ಪುರಾಣದಲ್ಲಿ ನಾರದನು ಸೀತೆಯ ಚಿತ್ರರೂಪದಲ್ಲಿ ಚಿತ್ರರೂಪವನ್ನು ವರ್ಣಿಸಿದ ಪ್ರಸಂಗವಿದೆ. ಈ ಕಾಲದಲ್ಲಿ ಭಿತ್ತಿ ಮತ್ತು ಫಲಕಗಳ ಮೇಲೆ ಅಲ್ಲದೆ ದುಕೂಲ(ಬಟ್ಟೆ) ದ ಮೇಲೆಯೂ ಅಪೂರ್ವ ಚಿತ್ರ ಬಿಡಿಸುತ್ತಿದ್ದ ಬಗ್ಗೆ ವಿವರಗಳಿರುವದನ್ನು ಕಾಣಬಹುದು.

---

೧೩. ಡಾ.ಚೆನ್ನಕ್ಕ ಪಾವಟೆ : ನಿಜದ ನೆಲೆ, ಪು.ಸಂ.೧೦೭

೧೪. ಡಾ.ಎಚ್.ಎನ್.ಚಿತ್ರಗಾರ : ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಪು.ಸಂ.೫೦

೧೫. ಬಿ.ವಿ.ಕೆ.ಶಾಸ್ತ್ರೀ : ಚಿತ್ರಕಲಾ ಪ್ರಪಂಚ, ಪು.ಸಂ.೧೭೧

೧೬. ಡಾ.ಚೆನ್ನಕ್ಕ ಪಾವಟೆ : ನಿಜದ ನೆಲೆ, ಪು.ಸಂ.೧೦೭



ಪಂಪ ಯುಗಾತೀತ ಕವಿಪಂಪೋತ್ತರ ಯುಗದಲ್ಲಿ ಪಂಪನ ಪ್ರಭಾವವೂ ಸಾಹಿತ್ಯವಲಯದಲ್ಲಿ ಇನ್ನೂ ಪ್ರಕಾಶಮಾನವಾಗಿ ಬೆಳಗುತ್ತಿದೆ. ಪಂಪ, ಪೊನ್ನರ ತರುವಾಯ ಪ್ರಸಿದ್ಧಿಗೆ ಬಂದ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನಗಳಿಸಿದವನು. ಚಾವುಂಡರಾಯ (ಕ್ರಿ.ಶ.೯೭೮) ಪಂಪನಂತೆ ಈತನೂ ಆಡಳಿತರಂಗದ ಅನುಭವವುಳ್ಳ ಕವಿ ಗಂಗಕುಲದ ರಾಜಮಲ್ಲನ (ಕ್ರಿ.ಶ.೯೭೪-೯೮೪) ಮಂತ್ರಿಯಾಗಿಯೂ ಸೇನಾನಿಯಾಗಿಯು ಪ್ರಸಿದ್ಧಿಗೆ ಬಂದಿದ್ದಲ್ಲದೇ ಶ್ರವಣಬೆಳಗೋಳದಲ್ಲಿ ಗೋಮ್ಮಟೇಶ್ವರನ ಲೋಕೋತ್ತರ ವಿಗ್ರಹವನ್ನು ನಿರ್ಮಿಸಿದ ಕೀರ್ತಿ ಈತನಿಗೆ ಸಲ್ಲುತ್ತದೆ. ಇತನ ಚಾವುಂಡರಾಯ ಪುರಾಣದಲ್ಲಿ ಗೋಮ್ಮಟೇಶ್ವರನ ಪ್ರತಿಮಾಶಾಸ್ತ್ರವು, ಭಾವ ಭಂಗಿ ಧೀರೋದಾತ್ತ ನಿಲುವುಗಳು ಗೋಚರವಾಗುವಂತೆ ಕಲಾತ್ಮಕ ವಿವರಗಳು ದೊರೆಯುತ್ತವೆಯಲ್ಲದೆ, ಜೈನಾಗಮದರ್ಶನದ ತ್ರಿಲೋಕಸಾರದಲ್ಲಿ ಅಲ್ಲಲ್ಲಿ ಬರುವ ಮಾನಸ್ಥಂಭ ಚೈತಾಲ್ಯಯಗಳ ವಿವರಣೆಯೂ ಈ ಗ್ರಂಥದಲ್ಲಿ ದೊರೆಯುವುದು. ಜೈನ ಹಸ್ತಪ್ರತಿ ಗ್ರಂಥಗಳು ಕೇವಲ ಧಾರ್ಮಿಕ ಗ್ರಂಥಗಳಾಗಿರದೇ ಕಲಾವಂತಿಕೆಯೊಂದಿಗೆ ಸಮೃದ್ಧವಾದ ಸಾಂಸ್ಕೃತಿಕವಾದ ಉನ್ನತ ಗ್ರಂಥಗಳಾಗಿವೆ ಎಂಬುದು ಗಮನಿಸಬಹುದಾದ ಅಂಶವಾಗಿದೆ.

ಸುಮಾರು (ಕ್ರಿ.ಶ.೧೧೦೦) ನಯಸೇನನ ಧರ್ಮಾಮೃತ ನಾಣ್ನುಡಿ ದೇಸಿವೆತ್ತ ಪೊಸನುಡಿ' ಯಿಂದ ಬೆರೆತ ಮಹತ್ವದ ಕೃತಿ ಇದರಲ್ಲಿ ಕಂಡುಬರುವ ಚಿತ್ರಕಲೆಗಳ ಪ್ರಸ್ತಾಪ ಮಹತ್ವಪೂರ್ಣವಾದುದು. ವಜ್ರಕುಮಾರರು ಜೈನೋಪಾಧ್ಯಾಯರ ಬಳಿಯಲ್ಲಿ 'ಅಕ್ಷರ ಗಣಿತ ಗಾಂಧರ್ವ ಚಿತ್ರಕರ್ಮ ಪತ್ರಛೇದಾದಿ ಸಪ್ತತಿಕಳೆಗಳೊಳಂ ಚತುಷಷ್ಠಿ ಕಳಾಗುಣಂಗಳೂಳ್ ಸಂದಿತ್ತ ನಾದನೆಂದು ನಯಸೇನನು ಹೇಳಿದ್ದು. ಚಿತ್ರಕರ್ಮವೆಂದರೆ ಚಿತ್ರಕಲೆ ಇದರಲ್ಲಿ ಚಿತ್ರಬರೆಯುವುದು ಚಿತ್ರಕೋರೆಯುವುದು ಮತ್ತು ಬಣ್ಣ ಕೊಡುವುದು ಸಮಾವೇಶವಾಗುತ್ತದೆ. ಎಲ್ಲ ಮೂಲಭೂತವಾದುದೆಂದು ಚಿತ್ರಕಲೆಗೆ ಅಗ್ರಸ್ಥಾನವಿದೆ. ಕೇರಿಲ್ಲದ ಚಿತ್ರಂ ಬರೆವನೆಂಬ ಇತ್ಯಾದಿ ನಯಸೇನನ ಉಕ್ತಿಗಳು ಈ ಕಾಲದಲ್ಲಿ ಗೋಡೆಗಳ ಮೇಲು ನುಣುಪಾದ ಕಲ್ಲುಗಳ ಮೇಲೆಯೂ ಚಿತ್ರ ಬರೆಯುತ್ತಿದ್ದನು ಸೂಚಿಸಿದೆ. ಜೈನಗ್ರಂಥಗಳು ಕೆಲವು ೭೪ ಕಲೆಗಳನ್ನು ಹೆಸರಿಸಿದೆ. ನಯಸೇನ ೬೪ ಕಲೆಗಳ ಬಗ್ಗೆ ತಿಳಿಸಿರುವನು.

ಕರ್ನಾಟಕ ಕಲಾಭಂಡಾರಕ್ಕೆ ಜೈನರು ಕೊಟ್ಟ ಕೊಡುಗೆ ತುಂಬ ವೈಭವೋಪೇತವಾಗಿದ್ದು. ಕ್ರಿ.ಶ.೧೨ನೆಯ ಶತಮಾನದಲ್ಲಿ ಕೈಬರಹದ ಚಿತ್ರಿತ ಧವಲತ್ರಯವು ಧವಲ ಜಯಧವಲ ಮತ್ತು ಮಹಾಧವಲ (ಮಹಾಬಂಧ) ಎಂಬ ಮೂರು ಪ್ರತ್ಯೇಕ ಸಂಪುಟಗಳಿಂದೊಡಗೂಡಿದ ವಿಖ್ಯಾತ ಗ್ರಂಥವಾಗಿದೆ. ಮೂಲ 'ಶಟ್ಬಂಡಾಗಮ' ಎಂಬ ಜೈನಗ್ರಂಥಧ ಮೇಲೆ ವೀರಸೇನ ಬರೆದ ವ್ಯಾಖ್ಯಾನವೇ ಧವಲತ್ರಯ ಮೂಲತಃ ರಾಷ್ಟ್ರಕೂಟ ಅಮೋಘವರ್ಷನ ಕಾಲದ್ದೆಂದು ಹೇಳಲಾದ ಧವಳತ್ರಯ ಗ್ರಂಥಗಳು ಹೊಯ್ಸಳ ಕಾಲದಲ್ಲಿ (ಕ್ರಿ.ಶ. ೧೨ನೇಯ ಶತಮಾನದಲ್ಲಿ) ಗೇರುಸೋಪ್ಪೆಯಲ್ಲಿ ಸಿದ್ಧಗೊಂಡಿತ್ತು ಎಂದು ತಿಳಿದು ಬರುತ್ತದೆ.[೧೭] ಗ್ರಂಥದ ಕೊನೆಯಲ್ಲಿ ಕಾಣಸಿಗುವ ಕನ್ನಡದ ಉಲ್ಲೇಖವನ್ನಿಲ್ಲಿ ಗಮನಿಸಬಹುದು. ದಿಗಂಬರ ಜೈನ ಪರಂಪರೆಯಲ್ಲಿ ವರ್ಣಿಸಿರುವ ವರ್ಧಮಾನ ಮಹಾವೀರ ಭೋದಿಸಿದ ಹನ್ನೆರಡು ಸಿದ್ಧಾಂತಗಳನ್ನು ಇಂದ್ರಭೂತಿ ಗೌತಮ ಕ್ರೋಢಿಕರಿಸಿದ ನಂತರ ಗುಣಧರ (ಕ್ರಿ.ಶ.೧ನೇಯ ಶತಮಾನ) ಹಾಗೂ ಧರಸೇನ (ಕ್ರಿ.ಶ.೧ನೇಯ ಶತಮಾನ) ಎಂಬ ಶ್ರೇಷ್ಠ ಜೈನಾಚಾರ್ಯರು ಬರೆದ" ಕಷಾಯ ಪಾವುಡ" ಮತ್ತು 'ಶಟ್ಬಂಡಾಗಮ್' ಎಂಬ ಗ್ರಂಥದಲ್ಲಿ ಈ ದ್ವಾದಶ ಸಿದ್ಧಾಂತಗಳಿವೆ. ಇವುಗಳಲ್ಲಿ 'ಶಟ್ಬಂಡಾಗಮ' ದ ಬಗೆಗೆ ಬರೆದ ವ್ಯಾಖ್ಯಾನವೇ ಈ 'ಧವಲಗ್ರಂಥ' ವಾಗಿದೆ. ಈ ಹಸ್ತಪ್ರತಿಗಳು ಮೂಡಬಿದಿರೆಯ ಸಿದ್ಧಾಂತ ಬಸದಿಯಲ್ಲಿರುವವು. ಈ ಗ್ರಂಥಗಳ ವಿಷಯ ನಿರೂಪಣೆ ಚಿತ್ರರಚನೆಗೆ ವಿಶಾಲವಾದ ತಾಳೆಗೆರೆ ಆಯ್ಕೆಮಾಡಿ ಅದರ ಮೇಲೆ ಚಿತ್ರಗಳನ್ನು ಬರೆಯಲಾಗಿದೆ.

ಚಿತ್ರಗಳಲ್ಲಿ ಈಗಲೂ ಕಂಡುಬರುವ ಅಚ್ಚಳಿಯದ ವರ್ಣಚಿತ್ರಗಳ ಪ್ರಖರತೆ ಅಂದಿನ ಹೊಯ್ಸಳ ಕಲಾವಿದರ ವರ್ಣಮಿಶ್ರಣ ಕೌಶಲ್ಯ ಮತ್ತು ಕಲಾನೈಪುಣ್ಯತೆಯನ್ನು ಪ್ರತಿಬಿಂಬಿಸುವಂತಿವೆ. ಚಿತ್ರಗಳ ಅಂಚುಗಳಲ್ಲಿ ಬಿಡಿಸಿರುವ

---

೧೭ ಡಾ.ಚೆನ್ನಕ್ಕ ಪಾವಟೆ : ನಿಜದ ನೆಲೆ, ಪು.ಸಂ.೧೯



ವಿನ್ಯಾಸ ಮತ್ತು ರೇಖೆಗಳ ಲಾಸ್ಯ ಲಾಲಿತ್ಯಗಳು ಬೇಲೂರು ದೇವಾಲಯದ ತಾಮ್ರಪಟಗಳನ್ನುಬಹುವಾಗಿ ಹೋಲುವುದರಿಂದ ಈ ಚಿತ್ರಪಟಗಳನ್ನು ತಾಳೇಗರಿ ಗ್ರಂಥಗಳಲ್ಲಿ ಹೊಯ್ಸಳ ಕಾಲದಲ್ಲಿ ಅಳವಡಿಸಿರಬೇಕೆನಿಸುತ್ತದೆ.

ತಾಳೆಯೋಲೆಗಳ ಮೇಲೆ ರಚಿಸಿದ ವರ್ಣಚಿತ್ರಗಳು ತುಂಬ ಅಪರೂಪದ 'ಧವಲಾ' ಧರ್ಮಗ್ರಂಥಗಳು ಜೈನಮತೀಯರ ಶಾಸ್ತ್ರದಾನದ ಶ್ರೇಷ್ಠ ಉದಾಹರಣೆಗಳು 'ಧವಲಾ' ಗ್ರಂಥದ ಪ್ರತಿಯನ್ನು ದೇವಿಯಕ್ಕನೆಂಬ ಜೈನ ಮಹಿಳೆ ಶ್ರುತ ಪಂಚಮಿಯ ವ್ರತ ನೋನ್ತು ಬನ್ನಿಗೆರೆಯ ಉತ್ತುಂಗ ಚೈತ್ಯಾಲಯದ ಆಚಾರ್ಯ ಶುಭಚಂದ್ರ ಸಿದ್ಧಾನ್ತದೇವರಿಗೆ ಜಯಧವಲ ಅಣ್ಣಶ್ರೇಷ್ಠಿಯಿಂದ ಪದ್ಮಸೇನ ಮುನೀಂದ್ರರಿಗೆ, ಮಹಾಧವಲವು ಶ್ರೀಮತಿಯ ಶ್ರೀ ಪಂಚಮಿಯ ಉದ್ಯಾಪನೆಯ ನಂತರದಲ್ಲಿ ಮಾಘನಂದಿ ಆಚಾರ್ಯರಿಗೆ ಭಕ್ತಿಪೂರ್ಣವಾಗಿ ಕೊಡಮಾಡಿದ ಅಮೂಲ್ಯ ಶಾಸ್ತ್ರದಾನದ ದಾಖಲೆಗಳು. ದಾನವಾಗಿ ಕೊಡಬೇಕಾದ ಗ್ರಂಥಗಳನ್ನು ಉತ್ಕೃಷ್ಟ ಚಿತ್ರರಚನೆಗಳಿಂದ ಅಲಂಕಾರಣಗೊಳಿಸಿ ನೀಡಿದುದು ದಾನಿಗಳ ಧರ್ಮಶ್ರದ್ಧೆಗೆ ಕಲಾಭಿರುಚಿಗೆ ಸಾಕ್ಷಿಯೆನಿಸಿವೆ.

೧೫-೧೬ ನೆಯ ಶತಮಾನಕ್ಕೆ ಸೇರಿರಬಹುದಾದ 'ತ್ರಿಲೋಕ ಸಾರ' ದ ಹಸ್ತಪ್ರತಿಯ ಓಲೆಗರಿಗಳ ಮೇಲೆ ಚಿತ್ರಗಳಿವೆ. ಇದರಲ್ಲಿ ಜೈನಬಸದಿ, ಮಾನಸ್ಥಂಭ ಸ್ಥಂಭದ ಪೀಠ, ಸ್ಥಂಭದ ಮೇಲಿನ ಮಂಟಪ ಇವುಗಳನ್ನು ತುಂಬ ಸ್ಪಷ್ಟವಾಗಿ ಬಿಡಿಸಲಾಗಿದೆ. ಪ್ರಸ್ತುತ ಈ ಹಸ್ತಪ್ರತಿಯು ಶ್ರವಣಬೆಳಗೊಳದ ಶ್ರೀ ಜೈನ ಮಠದ ಹಸ್ತಪ್ರತಿ ಭಂಡಾರದಲ್ಲಿದೆ. ಹಾಗೂ ಕೋಲ್ಲಾಪುರದ ಶ್ರೀ ಲಕ್ಷ್ಮೀಸೇನ ಭಟ್ಟಾರಕರ ಮಠದ ಸಂಗ್ರಹದಲ್ಲಿರುವ ಶಾಂತಿಕೀರ್ತಿಯ "ಚತುರ್ವಿಂಶತಿ ತೀರ್ಥಂಕರ ಪುರಾಣ"ದ ಎರಡು ಅಪೂರ್ವ ಕಾಗದ ಹಸ್ತಪ್ರತಿಗಳು ಈ ಸಂಗ್ರಹದಲ್ಲಿನ 'ಪ್ರತಿಷ್ಠಾತಿಲಕ'ವೂ ಕೂಡಾ ವಿಪೂಲ ಚಿತ್ರರಚನೆಯ ಕೋಶವಾಗಿದ್ದು ಬಸದಿಗಳಲ್ಲಿನ ಮೂರ್ತಿಗಳ ಪೂಜೆ ಸಮಾರಂಭಗಳ ವಿಧಿವಿಧಾನಗಳನ್ನು ವರ್ಣಚಿತ್ರರೂಪದಲ್ಲಿ ರಚಿಸಲಾಗಿದೆ. ಈ ಹಸ್ತಪ್ರತಿಗಳು ಕಾಗದ ಹಸ್ತಪ್ರತಿಗಳಾಗಿದ್ದು ಇವುಗಳ ಕಾಲಮಾನ ತಿಳಿದು ಬಂದಿಲ್ಲ ಬಹುಶಃ ೧೭ನೆಯ ಶತಮಾನದ ನಂತರ ಈ ಹಸ್ತಪ್ರತಿಗಳ ರಚನೆಯಾಗಿರಬಹುದು.

ಹೀಗೆ ಒಂದೆಡೆ ಭಕ್ತಿ, ಸಮಯನಿಷ್ಠೆ ಜ್ಞಾನಾರ್ಜನೆ, ಜ್ಞಾನ, ರಕ್ಷಣೆ ಕರ್ಮೋಪಶಮನ, ಪುಣ್ಯ ಸಂಪಾದನೆ ಹಾಗೂ ದಾನದ ಹಂಬಲಗಳ ಹಿನ್ನೆಲೆಯಲ್ಲಿ ವರ್ಧಮಾನ ಚರಿತೆ, ಪದ್ಮಾವತಿ ಚರಿತೆ, ಧರ್ಮಪರೀಕ್ಷೆ, ಚಂದ್ರಪ್ರಭ ಪುರಾಣ, ಪಂಪ ರಾಮಾಯಣ, ಸನತ್ಕುಮಾರ ಚರಿತೆ, ಚಂಪೂ ಭಾರತ, ಜ್ಞಾನ ಚಂದ್ರನ ಚರಿತೆ, ವಡ್ಡಾರಾಧನೆ, ಧನ್ಯಕುಮಾರ ಚರಿತೆ, ಜಿನದತ್ತರಾಯನ ಚರಿತೆ, ಚಂದನಾಂಬಿಕೆಯ ಕಥೆ, ನೇಮಿಜಿನೇಶ ಸಂಗತಿ, ಭರತೇಶ ವೈಭವ, ಮಹಾಪುರಾಣ, ನೇಮಿನಾಥ ಪುರಾಣ, ವರ್ಧಮಾನ ಪುರಾಣ, ಅನಂತನಾಥ ಪುರಾಣ, ಪಾರ್ಶ್ವನಾಥ ಪುರಾಣ ಮುಂತಾದವುಗಳೊಂದಿಗೆ ಸಾಮಾಜಿಕ ಕೃತಿಗಳಾದ ಅನುಪ್ರೇಕ್ಷೆ, ದಶಭಕ್ತಿ, ನೋಂಪಿ ಕಥೆ, ಸಜ್ಜನ ಚಿತ್ತ ವಲ್ಲಭ, ಅಬ್ಧಿಕಲ್ಪ, ಪುಣ್ಯಾಶ್ರವ, ದ್ವಾರಶಾನುಪ್ರೇಕ್ಷೆ, ರತ್ನಕರಂಡಕ, ಪ್ರಾಭೃತಕತ್ರಯ, ಶ್ರಾವಕಾಚಾರ, ಪಂಚಪರಮೇಷ್ಠಿಗಳ ವ್ಯಾಖ್ಯಾನ ಮುಂತಾದವುಗಳನ್ನು ಲೌಕಿಕ ಸಂಪತ್ತನ್ನು ಹೊಂದಲು. ಭರತೇಶ್ವರ ಚರಿತ್ರೆ ಲೀಲಾವತಿ, ಶ್ರೀ ಪಾಲಚರಿತೆ, ನಾಗಕುಮಾರ ಚರಿತೆ, ಮುಂತಾದ ಕೃತಿಗಳಲ್ಲಿ ಕನ್ನಡ ಕವಿಗಳ ಶ್ರದ್ಧೆ, ತಾಳ್ಮೆ ಭಕ್ತಿ, ಪ್ರತಿಭೆ, ಕಲ್ಪನೆಯಿಂದ ರಚಿಸಿದ್ದು ಗಮನಾರ್ಹವೆನ್ನಬಹುದು.

ಜೈನ ಸಾಹಿತ್ಯದಲ್ಲಿ ಚಿತ್ರಕಲೆಯ ವಿವರಗಳು ಕಂಡು ಬಂದ ಕಾಲದಲ್ಲಿಯೇ ಜೈನರಲ್ಲಿ ಚಿತ್ರಕಲೆಯನ್ನು ರಚಿಸುವ ಪರಿಕಲ್ಪನೆ ಬೆಳೆದುಬಂತು. ಚಿತ್ರ ಸಾಹಿತ್ಯ ಪೋಷಣೆ ಕುರಿತಂತೆ ಉಲ್ಲೇಖಗಳು ಸಿಕ್ಕುವುದು ವಿರಳ ಆದರೂ ಜೈನಬಸದಿಗಳು ಹಾಗೂ ಮಠಗಳಲ್ಲಿನ ವರ್ಣಚಿತ್ರಗಳು ಅಲ್ಲಿಲ್ಲ ದೊರಕುವ ಹಸ್ತಪ್ರತಿಗಳಲ್ಲಿನ ಪತ್ರ-ಫಲಕ ಚಿತ್ರ ರಚನೆಗಳು ಸಾಕ್ಷಿ ನುಡಿಯುತ್ತವೆ. ಒಟ್ಟಿನಲ್ಲಿ ಜೈನ ಸಾಹಿತ್ಯದಲ್ಲಿ ಚಿತ್ರಕಲೆ ವರ್ಣಚಿತ್ರಗಳಿಂದಾಗಿ ಚಾರಿತ್ರಿಕ ಸಾಂಸ್ಕೃತಿಕ ಮತ್ತು ಕಲಾಪರಂಪರೆಯ ಮೌಲ್ಯ ತಿಳಿಸುವಂತಿದೆ.



### ಜೈನ ಚಿತ್ರಕಲೆಯ ವರ್ಗೀಕರಣ

ಧರ್ಮ ಆಧಾರಿತವಾಗಿ ಬೆಳೆವಣೆಗೆಗೊಂಡ ಕರ್ನಾಟಕದ ಜೈನಚಿತ್ರಕಲೆಯ ಸಾಹಿತ್ಯಿಕ ಐತಿಹಾಸಿಕ ನೆಲೆ-ಹಿನ್ನೆಲೆಗಳನ್ನು ಆಧರಿಸಿ ಕರ್ನಾಟಕದ ವ್ಯಾಪ್ತಿಯನ್ನು ಹೊಂದಿದೆ. ಕರ್ನಾಟಕದ ಜೈನ ಚಿತ್ರಕಲೆಯನ್ನು ಪ್ರಮುಖವಾಗಿ ಮೂರು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ೧. ಭಿತ್ತಿಚಿತ್ರಕಲೆ ೨. ಹಸ್ತಪ್ರತಿಚಿತ್ರಕಲೆ ೩. ಸಂಕೀರ್ಣ ಮಾಧ್ಯಮದ ಚಿತ್ರಕಲೆಯನ್ನಾಗಿ ವಿಭಾಗಿಸಲಾಗಿದೆ. ಮೊದಲನೆಯ ಭಾಗದಲ್ಲಿ ಜೈನಭಿತ್ತಿಚಿತ್ರಕಲೆಯನ್ನು ಮೂರು ಭಾಗಗಳನ್ನು ವಿಭಜಿಸಿದ್ದು. ೧. ಬಸದಿಯ ಭಿತ್ತಿಚಿತ್ರಗಳು ೨.ಮಠದ ಭಿತ್ತಿಚಿತ್ರಗಳು ೩. ಜೈನಶ್ರಾವಕರ ಮನೆಯ ಭಿತ್ತಿಚಿತ್ರಗಳನ್ನು ಕುರಿತಾಗಿ ಈ ಅಧ್ಯಾಯದಲ್ಲಿ ಬರುತ್ತದೆ. ೨. ಜೈನಹಸ್ತಪ್ರತಿ ಚಿತ್ರಕಲೆಯನ್ನು ಎರಡು ಭಾಗಗಳನ್ನಾಗಿ ವಿಂಗಡಿಸಿಕೊಂಡು ೧. ತಾಳೆಗರಿಯ ಮೇಲಿನ ಚಿತ್ರಕಲೆ ಮತ್ತು ೨.ಕಾಗದ ಹಸ್ತಪ್ರತಿ ಮೇಲಿನ ಚಿತ್ರಕಲೆಯನ್ನು ಕುರಿತು ಚರ್ಚಿಸಲಾಗಿದೆ. ೩.ಭಾಗವು ಜೈನ ಸಂಕೀರ್ಣ ಮಾಧ್ಯಮದ ಚಿತ್ರಕಲೆ ಎಂದು ಗುರುತಿಸಲಾಗಿದೆ. ಇಲ್ಲಿ ಪಟಚಿತ್ರ, ಮರ ಮಾಧ್ಯಮ, ಲೆಪ್ಪ ಮಾಧ್ಯಮ ಹಾಗೂ ಗಾರೆ ಮಾಧ್ಯಮದ ಚಿತ್ರಕಲೆಯು ಬರುತ್ತದೆ. ಈ ವರ್ಗೀಕರಣದ ಹಿನ್ನೆಲೆಯಲ್ಲಿ ಜೈನ ಚಿತ್ರಕಲೆಯನ್ನು ವಿವರವಾಗಿ ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

*****



ಭಿತ್ತಿ ಚಿತ್ರಣವನ್ನು ಆಂಗ್ಲ ಭಾಷೆಯಲ್ಲಿ "Mural Painting' ಎಂದು ಕರೆಯಲಾಗಿದೆ. ಈ 'Mural' ಶಬ್ದವು ಲ್ಯಾಟಿನ್ ಭಾಷೆಯ ಮ್ಯೂರಸ್ (Muras) ದಿಂದ ಮೂಡಿಬಂದಿದೆ. 'Muras' ನ ಅರ್ಥವು ಗೋಡೆ ಎಂದಾಗುವುದು.[೧] ಗೋಡೆಯ ಮೇಲೆ ಬಣ್ಣದಿಂದ ಬರೆದ ಚಿತ್ರ ಮತ್ತು ಕೆತ್ತಿ ಕೊರೆದ ಅಂಟಿಸಿ ಹೀಗೆ ಇತರ ಯಾವುದೇ ವಿಧಾನದಿಂದ ಗೋಡೆಯ ಮೇಲೆ ರೂಪಿಸಿದ ಚಿತ್ರಗಳು 'Mural' ವ್ಯಾಪ್ತಿಯಲ್ಲಿ ಬರುತ್ತವೆ. ಎಂದು ಕೇಂಬ್ರಿಡ್ಜ್ ವಿಶ್ವಕೋಶ ತಿಳಿಸುತ್ತದೆ.[೨] ಗೋಡೆ ಮತ್ತು ಮೇಲ್ಛಾವಣಿಗಳನ್ನು ವರ್ಣಚಿತ್ರಗಳಿಂದ ಅಲಂಕರಿಸುವ ವಿಧಾನವನ್ನು ಭಿತ್ತಿಚಿತ್ರಕಲೆ ಎಂದು ಆಕ್ಸಫರ್ಡ್ ಶಬ್ದಕೋಶದಲ್ಲಿ ಹೇಳಲಾಗಿದೆ.[೩] ಗೋಡೆಗಳ ಮೇಲ್ಛಾವಣಿ ಮತ್ತು ಗುಹೆಗಳನ್ನು ಪ್ರಸ್ಕೋಸುಕ್ಕೋ ಟೆಂಪರಾ, ತೈಲವರ್ಣ ಇಲ್ಲವೇ ಎನ್‌ಕ್ಯಾಷ್ಟಿಕ್ ವಿಧಾನಗಳಿಂದ ಚಿತ್ರರಚಿಸಿ ಅಲಂಕರಿಸುವ ವಿಧಾನವನ್ನು ಸಹ ಭಿತ್ತಿ ಚಿತ್ರಕಲೆ (Mural Painting) ಎಂದು ಮಾನ್‌ಸ್ಟರ್ಸ್ ನ್ಯೂವರ್ಲ್ಡ್ ಸೈಕ್ಲೋಪಿಡಿಯಾ ಪರಿಗಣಿಸುತ್ತದೆ.[೪] ಗೋಡೆ ಮತ್ತು ಮೇಲ್ಛಾವಣಿಗಳ ಮೇಲೆ ವರ್ಣದಿಂದ ರಚಿಸಿದ ಚಿತ್ರಗಳು ಮತ್ತು ಬಣ್ಣದ ಕಲ್ಲಿನ ತುಂಡುಗಳನ್ನು ಅಂಟಿಸಿರೂಪಿಸಿದ ಮೊಸಾಯಿಕ್ ಚಿತ್ರಗಳು ಭಿತ್ತಿಚಿತ್ರಗಳ ವ್ಯಾಪ್ತಿಯಲ್ಲಿ ಒಳಗೊಳ್ಳುತ್ತವೆ ಎಂದು ಬ್ರಿಟಾನಿಕಾ ಎನ್‌ಸೈಕ್ಲೋಪಿಡಿಯಾ ಹೇಳುತ್ತದೆ.[೫]

ನಮ್ಮ ಭಾರತೀಯ ಪ್ರಾಚೀನ ಶಿಲ್ಪ ಶಾಸ್ತ್ರಗಳೂ ಭಿತ್ತಿಚಿತ್ರದ ರಚನಾಕ್ರಮಗಳ ಬಗೆಗೆ ತಮ್ಮದೇ ವಿವರಣೆಗಳನ್ನು ಕೊಟ್ಟಿವೆ. ವಿಷ್ಣುಧರ್ಮೋತ್ತರ, ಮಾನಸೋಲ್ಲಾಸ, ಅಪರಾಜೀನ ಪುಚ್ಛ, ಶಿಲ್ಪರತ್ನ, ಸಮರಾಂಗಣ ಸೂತ್ರಧಾರ ಮುಂತಾದ ಗ್ರಂಥಗಳಲ್ಲಿ ಗೋಡೆಯ ಮೇಲ್ಛಾವಣಿ ಅಥವಾ ವಾಸ್ತುವಿನ ಯಾವುದೇ ಭಾಗದಲ್ಲಿ ಗಾರೆ ಲೇಪನ ಮಾಡಿ ಅದರ ಮೇಲೆ ಚಿತ್ರ ರಚನೆ ಮಾಡುವುದನ್ನು 'ಭಿತ್ತಿಚಿತ್ರ' ಎಂದು ಉಲ್ಲೇಖಿಸಲಾಗಿದೆ. ಅಲ್ಲದೇ ಚಿತ್ರ ಬರೆಯಲಾಗುವ ಮೂಲಾಧಾರ ಮತ್ತು ಚಿತ್ರಣಕ್ಕಾಗಿ ಲೇಪಿಸುವ ಗಾರೆ ಮಿಶ್ರಣ 'ಭಿತ್ತಿ' ಎಂದು ಕರೆಯಲಾಗಿದೆ.[೬]

---

೦೧. ಜಯಂತ ಚಕ್ರಚರ್ತಿ ಟೆಕ್ನಿಕ್ಸ್ ಇನ್ ಇಂಡಿಯನ್ ಮ್ಯೂರಲ್ ಪೇಂಟಿಂಗ್ಸ್ :ಪು.೧೨
೦೨. ಡೇವಿಡ್ ಕ್ರಿಸ್ಪಲ್ ದಿಕ್ಯಾಂಬ್ರಿಜ್ ಎನ್ ಸೈಕ್ಲೋಪಿಡಿಯಾ: ಪು.೮೨೨
೦೩. ದಿ ಆಕ್ಸಪೋರ್ಡ ಇಂಗ್ಲೀಷ ಡಿಕ್ಷನರಿ: ವ್ಹಾಲ್ಯುಮ್–: ೧೦ ಪು.೧೦೬
೦೪. ವೆಬ್‌ಸ್ಟರ್ಸ್ ನ್ಯೂವರ್ಲ್ಡ ಎನ್‌ಸೈಕ್ಲೋಪಿಡಿಯಾ: ಪು.೭೭೨
೦೫. ಜಯಂತ ಚಕ್ರಚರ್ತಿ ಟೆಕ್ನಿಕ್ಸ್ ಇನ್ ಇಂಡಿಯನ್ ಮ್ಯೂರಲ್ ಪೇಂಟಿಂಗ್ಸ್ :ಪು.೬೦
೦೬. –ಅದೇ– ಪು.೬೦



ಭಾರತದ ಭಿತ್ತಿಚಿತ್ರ ಪರಂಪರೆಯಲ್ಲಿ ಬೌದ್ಧರ ಮೊದಲಿಗರು ಅನಂತರದ ಆ ಶ್ರೇಯಸ್ಸು ಜೈನರಿಗೆ ಸಲ್ಲುತ್ತದೆ. ಸಮತಟ್ಟಾದ ಗೋಡೆಯ ಮೇಲೆ ಬರೆದ ಚಿತ್ರಗಳನ್ನು ಭಿತ್ತಿಚಿತ್ರಗಳೆಂದು, ದೇವಾಲಯದ ಗೋಡೆ ಕಂಬ ಮುಂತಾದ ಭಾಗಗಳಲ್ಲಿನ ಮೂರ್ತಿಶಿಲ್ಪಗಳನ್ನು ವರ್ಣರಂಜಿತವನ್ನಾಗಿ ಮಾಡುತ್ತಿರವುದನ್ನು 'ವರ್ಣಲೇಕ್ಯ' ಕಲೆಯಂದು ಕರೆಯಬಹುದು. ಇಂಥ ಕಲಾಕೃತಿಗಳನ್ನೊಳಗೊಂಡ ಜೈನ ಬಸದಿ ಜೈನ ಶ್ರಾವಕರ ಮನೆ ಹಾಗೂ ಮಠಗಳು ಕರ್ನಾಟಕದಲ್ಲಿ ಒಂದು ಕಾಲಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಇದ್ದಿರಬೇಕು. ಹಾಗೆಂದೇ ಜೈನಕಾವ್ಯಗಳಲ್ಲಿ ಚಿತ್ರರಚನೆ, ಚಿತ್ರರಚನಾ ಸಾಮಗ್ರಿ, ಚಿತ್ರಕಾರನ ಕೌಶಲ್ಯ, ಚಿತ್ರ ವಿಮರ್ಶೆ ಮುಂತಾದ ವಿಷಯಗಳ ಉಲ್ಲೇಖಗಳು ಕಂಡು ಬರುತ್ತವೆ. ವಡ್ಡಾರಾದನೆ ಸುಕೌಶಳಸ್ವಾಮಿ ಕಥೆಯಲ್ಲಿನ ಸುಕೇಶನಿಯು ಕರುಮೋಡದ ಗೋಡೆಗಳ ಮೇಲೆಲ್ಲ ಅರಸು ಚಿತ್ತಾರಗಳಿಂದ ಚಿತ್ರ ಬರೆಯಿಸುತ್ತಾನೆ. ಹಿಂದಿನ ಜನ್ಮದ ಘಟನೆಗಳನ್ನು ನೆನೆದು ಸುಕೇಶಿಸಿ ಸ್ವತಃ ಚಿತ್ರ ಬರೆಯುತ್ತಾಳೆ.[೭]

ಕವಿ ಪಂಪನು ಆದಿ ಪುರಾಣದಲ್ಲಿ 'ಚಿತ್ರಶಾಲೆ'ಯ ಕುರಿತು ಹೇಳುತ್ತಾನೆ. ಅಲ್ಲದೇ ಸಮಾನ ತಳದಲ್ಲಿ 'ನಿಮ್ನ ಘನೋನ್ನತಿ' ಗಳನ್ನು ತೋರುವ ಚಿತ್ರಕಾರನ ನೈಪುಣ್ಯತೆಯ ಬಗ್ಗೆಯೂ ಹೇಳುತ್ತಾನೆ. ಪೋನ್ನನು ಚೀರಗಟ್ಟಿ ವಿಶ್ವಕರ್ಮರೆಂಬ ಚಿತ್ರಕಾರರ ಬಗ್ಗೆ ಹೇಳುತ್ತ ಚಿತ್ರಶಾಲೆಯ ಗೃಹಾಂಗಗಳಲ್ಲಿ ಒಂದೆಂಬುದನ್ನು ತಿಳಿಸುತ್ತಾನೆ.[೮] ಒಂದನೆಯ ನಾಗವರ್ಮ, ನಾಗಚಂದ್ರಾದಿಗಳು ಚಿತ್ರಶಾಲೆ– ಭಿತ್ತಿಚಿತ್ರಗಳ ಬಗೆಗೆ ಉಲ್ಲೇಖಿಸುತ್ತಾರೆ. ಈ ಕವಿಗಳು ಕೊಡುವ ಭಿತ್ತಿಚಿತ್ರಾದಿಗಳ ವಿವರಗಳು ತಮ್ಮ ಸುತ್ತಲಿನ ಚಿತ್ರಕಲಾ ವೈಭವವನ್ನು ಕಂಡು ಹೇಳಿರಬೇಕೆನಿಸುತ್ತದೆ. ಇದನ್ನು ಸಮರ್ಥಿಸುವಂತೆ ಹನ್ನೆರಡನೆಯ ಶತಮಾನದ ಶಾಸನಗಳು "ಬಹು ಚಿತ್ರ ಭಿತ್ತಿಯಂ ನೋಡಿದರಂ ಮನಂಗೋಳಿಸುವ ಬಸದಿ" ಗಳನ್ನು ಬೆಳಗೋಳ ಮತ್ತು ಕೊಪ್ಪಳದಲ್ಲಿ ನಿರ್ಮಿಸಿದ್ದುದರ ಪ್ರಸ್ತಾಪ ಮಾಡಿದ್ದು ಗೊತ್ತಾಗುತ್ತದೆ.[೯] ಬೆಳಗೋಳದ ಚಂದ್ರಗಿರಿಯ ಮೇಲಿನ ಶಾಂತಿನಾಥ ಬಸದಿಯ ಒಳಛಾವಣೆಗಳು ಭಿತ್ತಿಚಿತ್ರಗಳನ್ನು ಒಳಗೊಂಡಿದ್ದವು ಎಂಬುದು ಅಲ್ಲಿನ ಅಳಿದುಳಿದ ಚಿತ್ರಗಳಿಂದ ಗೋತ್ತಾಗುತ್ತದೆ. ಬಹುಶಃ ಮೇಲಿನ ಶಾಸನವು ವರ್ಣಿಸಿದ ಬಸದಿಗಳಲ್ಲಿ ಇದು ಒಂದಾಗಿರಬಹುದು.ಕರ್ನಾಟಕದ ಜೈನ ಭಿತ್ತಿಚಿತ್ರದ ಇತಿಹಾಸವನ್ನು ಸಾಹಿತ್ಯದ ಹಿನ್ನೆಲೆಯಲ್ಲಿ ಕಾಣಬಹುದು.

ಈ ಪ್ರಕಾರ 'ಭಿತ್ತಿ ಚಿತ್ರಕಲೆ' ಎಂದರೆ ಗೋಡೆ ಮೇಲ್ಛಾವಣಿ ಹೀಗೆ ಕಟ್ಟಡದ ಯಾವುದೇ ಭಾಗವನ್ನು ವರ್ಣಚಿತ್ರದಿಂದ ಮತ್ತು ಉಬ್ಬು ಇಲ್ಲವೇ ತಗ್ಗು ಚಿತ್ರ ಇಲ್ಲವೇ ಮೊಸಾಯಿಕ್‌ನಂತಹ ಚಿತ್ರಗಳಿಂದ ಅಲಂಕರಿಸುವ ವಿಧಾನವೆಂದು ತಿಳಿಯಬಹುದು.

**ಭಿತ್ತಿಸಿದ್ಧತಾ ವಿಧಾನ**

ಭಿತ್ತಿಚಿತ್ರರಚನೆಯಲ್ಲಿ ಭಿತ್ತಿ ಸಿದ್ಧತೆ ಮಾಡುವುದು ಅತ್ಯಂತ ಪ್ರಮುಖ ಹಂತವಾಗಿದೆ. ಭಿತ್ತಿಸಿದ್ಧತೆಗೆ ಪ್ರಾಚೀನರು ತುಂಬ ಮಹತ್ವ ಕೊಡುತ್ತಿದ್ದರು. ವಿವಿಧ ವಸ್ತುಗಳನ್ನು ಉಪಯೋಗಿಸಿ ಭಿತ್ತಿಯನ್ನು ನಿರ್ಮಿಸಲಾಗುತ್ತದೆ. ಬೇರೆ ಬೇರೆ ಪ್ರಕಾರದ ಭಿತ್ತಿಚಿತ್ರಗಳನ್ನು ಸಿದ್ಧಗೊಳಿಸುವ ಕ್ರಿಯೆಯು ಹಂತ ಹಂತಗಳಲ್ಲಿ ನಡೆಯುತ್ತದೆ. ಭಿತ್ತಿ ನಿರ್ಮಾಣ ಕ್ರಿಯೆಯನ್ನು ಭಾರತೀಯ ಪ್ರಾಚೀನ ಗ್ರಂಥಗಳಲ್ಲಿ ವಿವರಿಸಲಾಗಿದೆ. ಕರ್ನಾಟಕದ ಜೈನ ಭಿತ್ತಿಚಿತ್ರಗಳಲ್ಲಿ ಪ್ರಮುಖವಾಗಿ ಮೂರು ಪ್ರಕಾರದ ಭಿತ್ತಿಗಳನ್ನು ಗುರುತಿಸಬಹುದು.

೧ .ಮಣ್ಣಿನ ಭಿತ್ತಿ, ೨. ಗಾರೆ ಭಿತ್ತಿ, ೩. ಮರದ ಭಿತ್ತಿ

---

೦೭. ಡಾ. ಬಿ.ಕೆ.ಹೀರೆಮಠ ಸೃಷ್ಟಿ: ಪು.೧೫೫
೦೮. ಶಾಂತಿ ಪುರಾಣ ಕ್ರಮವಾಗಿ ಆ: ೬.೮.೯ ಮತ್ತು ೧೦
೦೯. ಡಾ.ಎಂ ಚಿದಾನಂದಮೂರ್ತಿ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ: ಪು೪೬೦



**೧. ಮಣ್ಣಿನ ಭಿತ್ತಿ** : ಮಣ್ಣಿನ ಭಿತ್ತಿ ರಚಿಸುವ ವಿಧಾನವು ಈಜಿಪ್ತದಲ್ಲಿ ಕ್ರಿ.ಪೂ. ೨.೨೫೦೦ ವರ್ಷಗಳಿಗೂ ಮೊದಲೆ ಪ್ರಚಲಿತದಲ್ಲಿತ್ತು . ಭಾರತದ ಪ್ರಾಚೀನ ಮತ್ತು ಮಧ್ಯಯುಗೀನ ಭಿತ್ತಿಚಿತ್ರಗಳಲ್ಲಿ ಈ ವಿಧಾನ ಒಳಗೊಂಡಿದೆ. ಮಣ್ಣಿನ ಭಿತ್ತಿಯ ಒಂದರ ಮೇಲೊಂದರಂತೆ ಹಲವಾರು ಪದರುಗಳನ್ನು ಹೊಂದಿರುತ್ತದೆ. ಗೋಡೆಗೆ ಲೇಪಿಸಿದ ಮಣ್ಣಿನ ಭಿತ್ತಿಯು ಸೀಳದಂತೆ ಕಳಚಿ ಬೀಳದಂತೆ ಮಣ್ಣಿನಲ್ಲಿ ಒಣಹುಲ್ಲು ಹೊಟ್ಟು ಕೂದಲುಗಳಂತಹ ನಾರು ಪದಾರ್ಥಗಳನ್ನು ಸೇರಿಸಲಾಗುತ್ತದೆ. ಈ ನಾರು ಪದಾರ್ಥಗಳ ಮಿಶ್ರಣವು ಗಟ್ಟಿಯಾಗಿ ಕುಳಿತುಕೊಳ್ಳಲು ಸಹಾಯ ಮಾಡುತ್ತದೆ. ಆಕಳ ಸಗಣಿಯನ್ನು ಕೂಡ ಕೆಲವೊಂದು ಸಂದರ್ಭದಲ್ಲಿ ಇದರಲ್ಲಿ ಸೇರಿಸುವುದುಂಟು ಆದರೆ ಸಗಣಿಯನ್ನು ಸೇರಿಸುವುದರಿಂದ ಭಿತ್ತಿಯು ಮಿಶ್ರಣದ ಮೆದುತನ ಹೆಚ್ಚಾಗುತ್ತದೆ ಮತ್ತು ಇದರಿಂದ ಭಿತ್ತಿಯು ಕೀಟಗಳ ದಾಳಿಗೆ ಒಳಗಾಗುತ್ತದೆ. ಕಾರಣ ಸಗಣಿಯು ಒಂದು ಸಾವಯವ ವಸ್ತುವಾಗಿರುವುದರಿಂದ ಕೀಟಗಳಿಗೆ ಸಹಜ ಆಹಾರವಾಗುವುದಲ್ಲದೇ ಇದರಿಂದ ಭಿತ್ತಿಯು ಬಹುಬೇಗ ಶಕ್ತಿ ಹೀನವಾಗುತ್ತದೆ. ಎಂಬ ವಿವರಗಳಿಂದ ಮಣ್ಣಿನ ಭಿತ್ತಿಯಲ್ಲಿ ಸಗಣಿಯನ್ನು ಸೇರಿಸಿದರೆ ಅದರ ಆಯುಷ್ಯವು ಅಲ್ಪವಾದೆಂದು ತಿಳಿಯಬರುತ್ತದೆ. ಮಣ್ಣಿನ ಭಿತ್ತಿಯು ಅಜಂತಾ, ಭಾಗ, ಸಿತ್ತನಿವಾಸಲ್‌ಗಳಲ್ಲಿ ಕಂಡು ಬರುತ್ತದೆ ಎನ್ನಬಹುದು. ಕರ್ನಾಟಕದ ಜೈನ ಭಿತ್ತಿಚಿತ್ರಕಲೆಯಲ್ಲಿ ಮಣ್ಣಿನ ಭಿತ್ತಿಚಿತ್ರಗಳು ಕಾರ್ಕಳದ ಜೈನಮಠ, ಅಂಗಡಿಯ ವಾಸಂತಿಕಾ ದೇವಾಲಯ, ಮೂಡಬಿದಿರೆಯ ಜೈನಮಠದ ಗೋಡೆಗಳಲ್ಲಿ ಕಾಣಬಹುದು.

**೨. ಗಾರೆ ಭಿತ್ತಿ:** ಗಾರೆ ಭಿತ್ತಿ ರಚನೆಯಲ್ಲಿ ಸುಣ್ಣವು ಪ್ರಮುಖ ವಸ್ತು, ಅದರ ಜೊತೆಗೆ ಉಸುಕು, ಕಲ್ಲಿನ ಪುಡಿ, ವಜ್ರಸರಿ ಮುಂತಾದವುಗಳನ್ನು ಉಪಯೋಗಿಸಿಲಾಗುತ್ತದೆ. ಹಾಗೂ ಇವಲ್ಲದೇ ಜೊತೆಗೆ ಸೇರಿಸುವ ಪೂರಕ ವಸ್ತುಗಳೆಂದರೆ ಲೋಳಸರವೆಂಬ ಸಸ್ಯರೂಪ ಬೆಲ್ಲದಕಾಯಿ, ಅಂಟು ಮೊದಲಾದವು ಮಧ್ಯಯುಗೀನ ಹೊತ್ತಿಗೆ ಭಾರತದಲ್ಲಿ ಮಣ್ಣಿನ ಭಿತ್ತಿ ರಚನೆಯು ಕಡಿಮೆಯಾಗಿ ತದ ನಂತರ ಗಾರೆಭಿತ್ತಿ ಕಂಡು ಬರುತ್ತದೆ. ಕರ್ನಾಟಕದ ಜೈನ ಭಿತ್ತಿಗಳಲ್ಲಿ ಶ್ರವಣಬೆಳಗೋಳದ ಜೈನಮಠ ಮತ್ತು ಕತ್ತಲ ಬಸದಿ ಶ್ರವಣಬೆಳಗೋಳ, ಸುಬ್ಬಯ್ಯ ಶಾಸ್ತ್ರಗಳ ಮನೆ ನೆಲ್ಲಿಕಾರು ಹಾಗೂ ಅನೇಕ ಜೈನ ಶ್ರಾವಕರ ಮನೆಗಳಲ್ಲಿ ಚಿತ್ರಿಸಿರುವ ಭಿತ್ತಿ ಚಿತ್ರಗಳು ಗಾರೆ ಭಿತ್ತಿಯ ಮೇಲೆ ರಚಿಸಲಾದ ಭಿತ್ತಿಚಿತ್ರಗಳಾಗಿವೆ.

**೩. ಮರದಭಿತ್ತಿ:** ಮರದ ಮಾಧ್ಯಮದ ಮೇಲೆ ಭಿತ್ತಿಯನ್ನು ನಿರ್ಮಿಸುವಾಗ ಅದನ್ನು ಮೊದಲಿಗೆ ಸಂಸ್ಕರಣೆ ಮಾಡುತ್ತಾರೆ. ಆ ಮೇಲೆ ಉಸುಕು, ಕಪ್ಪೆಚಿಪ್ಪು, ಶಂಖ ಚೂರ್ಣ, ಸುಣ್ಣ, ಜಿಗುಟಾದ ಬಿಳಿಮಣ್ಣು, ನಾರು ಪದಾರ್ಥ ಮತ್ತು ಯೋಗ್ಯ ಅಂಟು ಪದಾರ್ಥಗಳನ್ನು ಬಳಸಿಕೊಂಡು ತಯಾರಿಸಿದ ಭಿತ್ತಿಯ ಲೇಪನವನ್ನು ಮರದ ಫಲಕಕ್ಕೆ ಲೇಪಿಸುತ್ತಾರೆ. ದಕ್ಷಿಣಕನ್ನಡದ ಮೂಡುಬದಿರೆಯ ಬಸದಿಗಳು ಹೆಚ್ಚು ಮರದ ಫಲಕಗಳಿಂದ ನಿರ್ಮಾಣಗೊಂಡಿವೆ. ಇವುಗಳ ಮೇಲೆ ಮರದ ಭಿತ್ತಿಯ ಕೆಲವು ಕುರುಹುಗಳನ್ನು ಕಾಣಬಹುದು.

ಹೀಗೆ ಅನೇಕ ಕಡೆಗಳಲ್ಲಿ ರಚನೆಗೊಂಡಿರುವ ಭಿತ್ತಿಚಿತ್ರಗಳಲ್ಲಿ ಭಿತ್ತಿಚಿತ್ರದ ರಚನಾ ವಿಧಾನವೂ ಅಷ್ಟೇ ಪ್ರಮುಖವಾದುದು, ಈ ಭಿತ್ತಿಚಿತ್ರ ರಚನಾ ವಿಧಾನಗಳಲ್ಲಿ ಪೂರ್ವಾಂಗ ಮತ್ತು ಉತ್ತರಾಂಗಗಳೆಂಬ ಎರಡು ವಿಧಗಳು. ಪೂರ್ವಾಂಗದಲ್ಲಿ ಚಿತ್ರದ ಪ್ರಮಾಣ ಅಳತೆ ವಿಧಾನ ಸೂತ್ರಗಳು, ನವಸ್ಥಾನಗಳು, ಚಿತ್ರದ ಷಡಂಗಗಳು ಹೀಗೆ ಚಿತ್ರರಚನೆಯ ಪೂರ್ವದಲ್ಲಿ ಕಲಾವಿದನು ಗಮನಿಸತಕ್ಕ ಅಂಶಗಳು ಒಳಗೊಳ್ಳುತ್ತವೆ. ಕಲಾವಿದನ ಮಾನಸಿಕ ಸಿದ್ಧತೆ ಇದಾಗಿದೆ. ಇನ್ನು ಉತ್ತರಾಂಗದಲ್ಲಿ ಪೂರ್ವಾಂಗದಲ್ಲಿ ನಡೆದ ಕ್ರಿಯೆಯು ಮುಂದಿನ ಭಾಗವೇ ಈ ಉತ್ತರಾಂಗದಲ್ಲಿರುತ್ತದೆ. ಇದರಲ್ಲಿ ಭಿತ್ತಿಚಿತ್ರ ರಚನಾ ವಿಧಾನ ಹಾಗೂ ಭಿತಿಚಿತ್ತ ರಚನಾ ಹಂತಗಳಿಂದ ವಿಭಜಿಸಿಕೊಂಡು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಭಿತ್ತಿಚಿತ್ರ ರಚನಾ ವಿಧಾನ ಭಿತ್ತಿಚಿತ್ರ ರಚನೆಯಲ್ಲಿ ಅನುಸರಿಸುವ ತಾಂತ್ರಿಕ ವಿಧಿ-ವಿಧಾನಗಳಿಂದ ಭಿತ್ತಿಚಿತ್ರ ರಚನಾ ವಿಧಾನವನ್ನು ಈ ಕೆಳಗಿನಂತೆ ವರ್ಗೀಕರಿಸಲಾಗಿದೆ.



೧. **ಫ್ರೆಸ್ಕೋಬಾನ್ ವಿಧಾನ** (Fresco buon)

೨. **ಫ್ರೆಸ್ಕೋ ಸೆಕ್ಕೋ ವಿಧಾನ** (Fresco- Secco)

೩. **ಟೆಂಪರಾ ವಿಧಾನ** (Tempera)

೪. **ಸ್ಗ್ರಾಫೀಟೋ ವಿಧಾನ** (Sqraffito) ಎಂದು ವರ್ಗೀಕರಿಸಲಾಗುತ್ತದೆ.

೧. **ಫ್ರೆಸ್ಕೋಬಾನ್ ವಿಧಾನ** (Fresco buon): ಭಿತ್ತಿ ಹಸಿ ಇರುವಾಗ ಚಿತ್ರರಚಿಸುವ ವಿಧಾನಕ್ಕೆ ಫ್ರೆಸ್ಕೋಬಾನ್ ವಿಧಾನ ಎನ್ನವರು. ಈ ವಿಧಾನದಲ್ಲಿ ಹಸಿಗಾರೆಯ ಮೇಲೆ ರಚಿಸಲಾಗುತ್ತದೆ. ಈ ತಂತ್ರಗಾರಿಕೆಯ ಕ್ರಿ.ಶ.೧೩೦೦೦ ಚಿತ್ರ ಸುಮಾರಿಗೆ ಇಟಲಿಯಲ್ಲಿ ಮೊದಲಿಗೆ ಬಳಕೆಗೆ ಬಂತು ಭಾರತಕ್ಕೆ ಈ ವಿಧಾನವು ಕ್ರಿ.ಶ. ೧೮– ೧೯ ನೇ ಶತಮಾನದ ಹೊತ್ತಿಗೆ ಪರಿಚಯವಾದಂತೆ ತಿಳಿದು ಬರುತ್ತದೆ. ಈ ವಿಧಾನವು ಮುಖ್ಯ ಕ್ರಮವೇನೆಂದರೆ ಹಸಿ ಗಾರೆ ಮೇಲೆ ಚಿತ್ರರಚಿಸ ಬೇಕಾಗಿರುವುದರಿಂದ ಕಲಾವಿದರು ತಮಗೆ ಒಂದು ದಿನದಲ್ಲಿ ಚಿತ್ರರಚನೆಗೆ ಅಗತ್ಯವಿರುವಷ್ಟೆ ಗಾರೆಯನ್ನು ಲೇಪಿಸಿಕೊಳ್ಳುವುದಾಗಿದೆ.

೨. **ಫ್ರೆಸ್ಕೋ ಸೆಕ್ಕೋ ವಿಧಾನ** (Fresco- Secco): ಭಿತ್ತಿ ಒಣಗಿದ ನಂತರ ಚಿತ್ರರಚಿಸುವ ವಿಧಾನಕ್ಕೆ ಫ್ರಸ್ಕೋ ಸೆಕ್ಕೋ ವಿಧಾನವು ಎಂದರ್ಥ, ಈ ವಿಧಾನದಲ್ಲಿ ಭಿತ್ತಿಯು ಒಣಗಿದ ನಂತರ ಚಿತ್ರರಚಿಸಲಾಗುತ್ತದೆ. ಲೇಪಿಸಿದ ಗಾರೆಯು ಒಣಗಿದ ನಂತರ ಇದೇ ಗಾರೆಯ ಮೇಲ್ಮೈಯನ್ನು ಸ್ವಚ್ಛವಾಗಿ ನೀರಿನಿಂದ ತೊಳೆದು ಆ ಮೇಲೆ ಕುದಿಸಿದ ಸುಣ್ಣವನ್ನು ಲೇಪಿಸಬೇಕು, ಈ ಸುಣ್ಣ ಲೇಪನವು ಪೂರ್ಣವಾಗಿ ಒಣಗಿದ ನಂತರ ಚಿತ್ರರಚನೆಯು ಪ್ರಾರಂಬಿಸಲಾಗುತ್ತದೆ.

೩. **ಟೆಂಪರಾ** (Tempera) 'ಟೆಂಪರಾ' ಎಂದರೆ ಹದವಾದ ಮಿಶ್ರಣ ಎಂದರ್ಥ ವರ್ಣಗಳನ್ನು ಉಚಿತ ಅಂಟು ದ್ರಾವಣದೊಡನೆ ಹದವಾಗಿ ಮಿಶ್ರಣ ಮಾಡಿ ಒಣಗಿದ ಗಾರೆಯ ಮೇಲೆ ಚಿತ್ರರಚಿಸುವ ವಿಧಾನ ಇದಾಗಿದೆ.

೪. **ಸ್ಗ್ರಾಫೀಟೋ** (Sqraffito) ಈ ವಿಧಾನದಲ್ಲಿ ಒಂದು ವರ್ಣದ ಭಿತ್ತಿಯ ಮೇಲೆ ಇನ್ನೊಂದು ವರ್ಣದ ಭಿತ್ತಿಯನ್ನು ಲೇಪಿಸಿ, ಅದು ಹಸಿ ಇರುವಾಗ ಮೇಲಿನ ಭಿತ್ತಿಯನ್ನು ಬೇಕಾದ ಆಕಾರಕ್ಕೆ ಕೊರೆದು ತೆಗೆದು ಚಿತ್ರ ಮೂಡಿಸುವುವಾಗಿದೆ. ಈ ವಿಧಾನವು ಕರ್ನಾಟಕದ ಕರಾವಳಿ ಪ್ರದೇಶದ ಕಾವಿ ಭಿತ್ತಿ ಚಿತ್ರರಚನಾ ವಿಧಾನವನ್ನು ಹೋಲುತ್ತದೆ.

**ಭಿತ್ತಿ ರಚನಾ ಹಂತ**

ಭಿತ್ತಿ ಚಿತ್ರ ಕಲಾವಿದರು ಚಿತ್ರರಚನೆ ಮಾಡುವಾಗ ಒಂದೇ ಹಂತದಲ್ಲಿ ಚಿತ್ರವನ್ನು ಪೂರ್ಣಗೊಳಿಸದೇ ಒಂದಾದ ಮೇಲೆ ಒಂದರಂತೆ ಹಲವು ಹಂತಗಳನ್ನು ಅನುಸರಿಸಿ ಚಿತ್ರರಚನೆ ಪೂರ್ಣಗೊಳಿಸುತ್ತಿದ್ದರು. ಭಿತ್ತಿಚಿತ್ರ ಕಲಾವಿದರು ಅನುಸರಿಸುವ ಚಿತ್ರರಚನಾ ಹಂತಗಳು ಯಾವಾಗಲೂ ನಿರ್ಧಿಷ್ಟವಾಗಿ ಹೀಗೆ ಎಂದು ಹೇಳಲು ಬರುವಂತಿರಲ್ಲಿಲ್ಲ ಆಯಾ ಕಲಾವಿದರನ್ನು ಅನುಸರಿಸಿ ಬದಲಾಗುತ್ತದೆ. ಈ ಚಿತ್ರ ರಚನಾ ಹಂತಗಳು ಹೆಚ್ಚಾಗಿ ಕಲಾವಿದರ ಕೌಶಲ್ಯ ಅನುಸರಿಸಿ ವ್ಯತ್ಯಾಸಗೊಳ್ಳುತ್ತವೆ.ಕರ್ನಾಟಕದ ಜೈನ ಭಿತ್ತಿಚಿತ್ರಕಲೆಯು ಕ್ರಿ.ಪೂ.೧೨ನೆಯ ಶತಮಾನದ ಅವಧಿಯಲ್ಲಿ ಪ್ರಾರಂಭವಾದಂತೆ ಕಂಡುಬರುತ್ತದೆ. ಏಕೆಂದರೆ ಧರ್ಮದ ಪ್ರಚಾರಪಡಿಸಲು ಹಾಗೂ ಧರ್ಮದ ಸಾರವನ್ನು ಚಿತ್ರದ ಮೂಲಕ ಪರಿಚಯಿಸಲು ವರ್ಣಚಿತ್ರವನ್ನು ಪ್ರಭಾವಶಾಲಿ ಮಾಧ್ಯಮವನ್ನಾಗಿ ಜೈನಧರ್ಮದಲ್ಲಿ ಬಳಸಿಕೊಳ್ಳಲಾಗಿದೆ.

ಕರ್ನಾಟಕದ ಜೈನ ಭಿತ್ತಿಚಿತ್ರಗಳ ರಚನೆಯ ಸಂದರ್ಭದಲ್ಲಿ ಭಿತ್ತಿಸಿದ್ಧತಾ ವಿಧಾನದಲ್ಲಿ ಹೆಚ್ಚಿನ ತಾಂತ್ರಿಕತೆಗಳು ಕಂಡು ಬರುವದಿಲ್ಲ. ಈ ಚಿತ್ರಗಳು ಕೆಲವು ಶತಮಾನದವರೆಗೆ ಇದ್ದು ನಂತರದಲ್ಲಿ ತನ್ನ ಸತ್ವವನ್ನು ಕಳೆದುಕೊಂಡು



ಗೋಡೆಯಿಂದ ಬೇರ್ಪಟ್ಟು ಉದುರಿಹೋಗುತ್ತಿತ್ತು. ಪ್ರಸ್ತುತ ಕೆಲವು ಚಿತ್ರಗಳು ಉದುರುಹೋಗಲು ಪ್ರಾರಂಭಿಸಿವೆ. ಆದರೂ ಹೆಚ್ಚಿನ ಚಿತ್ರಗಳು ಪ್ರಾಕೃತಿಕ ಆಪತ್ತಿನಿಂದಲೇ ನಾಶವಾಗಿವೆಯಂದು ಕಂಡುಬರುತ್ತವೆ.

ಕರ್ನಾಟಕದ ಅನೇಕ ಕಡೆಗಳಲ್ಲಿ ಕಂಡುಬರುವ ಜೈನಭಿತ್ತಿಚಿತ್ರಗಳನ್ನು ಮೂರು ರೀತಿಯಾಗಿ ವಿಂಗಡಿಸಿ ಅಧ್ಯಯನ ಮಾಡಲಾಗಿದೆ.

**೧. ಬಸದಿಯಲ್ಲಿನ ಭಿತ್ತಿಚಿತ್ರಗಳು**

**೨. ಜೈನ ಮಠಗಳಲ್ಲಿರುವ ಭಿತ್ತಿಚಿತ್ರಗಳು**

**೩. ಜೈನ ಶ್ರಾವಕರ ಮನೆಯಲ್ಲಿರುವ ಭಿತ್ತಿಚಿತ್ರಗಳು**

**೧. ಬಸದಿಯಲ್ಲಿರುವ ಭಿತ್ತಿಚಿತ್ರ ಗಳು**

**೧. ಕತ್ತಲ ಬಸದಿ:** ಶ್ರವಣಬೆಳಗೊಳದ ಚಿಕ್ಕ ಬೆಟ್ಟದ ಕತ್ತಲ ಬಸದಿಯಲ್ಲಿ ಯಾವಾಗಲೂ ಕತ್ತಲ ತುಂಬಿದ್ದು ಬೆಳಕಿನ ಪ್ರವೇಶ ದುಸ್ತರವಾಗಿದ್ದುದರಿಂದ ಇದಕ್ಕೆ ಕತ್ತಲ ಬಸದಿ ಎಂಬ ಹೆಸರು ಬಂದಿದೆ. ಈಗ ಬೆಳಕು ಬರುವಂತೆ ಮಾಡಿರುತ್ತಾರೆ. ಒಳಗೆ ಆದಿನಾಥನ ಬಿಂಬವಿದ್ದರೆ ಪೂರ್ವಾಭಿಮುಖವಾಗಿರುವ ಈ ಬಸದಿಯನ್ನು ಹೊಯ್ಸಳ ದೊರೆ ವಿಷ್ಣುವರ್ಧನ ದಂಡನಾಯಕನಾಗಿದ್ದ ಗಂಗರಾಜನು ಕ್ರಿ.ಶ. ೧೧೧೮ ರಲ್ಲಿ ತನ್ನ ತಾಯಿ ಪೋಚವ್ವೆಗಾಗಿ ಕಟ್ಟಿಸಿದನೆಂದು ಇಲ್ಲಿನ ಶಾಸನ ತಿಳಿಸುತ್ತದೆಯಾದರೂ ಈ ಬಸದಿ ಹೊಯ್ಸಳರಿಗಿಂತ ಹಿಂದಿನ ರಚನೆಯಂಬುದರಲ್ಲಿ ಸಂಶಯವಿಲ್ಲ ಅ.ಸುಂದರ ಅವರು ಇದರ ಕಂಬಗಳನ್ನು೯–೧೦ ಶತಮಾನಕ್ಕೆ ಸೇರಿಸುತ್ತಾರೆ. ಇದು ಇಟ್ಟಿಗೆಯ ಕಟ್ಟಡವಾಗಿದ್ದು ಪ್ರಾಚೀನ ಲಕ್ಷಣಗಳನ್ನು ಒಳಗೊಂಡಿರುವುದರಿಂದ ಈ ಬಸದಿಯ ಒಳರಚನೆ ಮತ್ತು ರಚನಾವಿನ್ಯಾಸವನ್ನು ಗಮನಿಸಿದಾಗ ಇದು ಕ್ರಿ.ಶ. ಸು.೯೫೦ರಲ್ಲಿ ರಚಿಸಿರಬೇಕೆನಿಸುತ್ತದೆ. ಕತ್ತಲ ಬಸದಿಯ ಹೊರ ಅದಿಷ್ಠಾನ ಮತ್ತು ಬಳಸಿದ ಸಾಮಗ್ರಿ ಯಾವುದೆಂದು ತಿಳಿಯುವುದಿಲ್ಲ. ಅನೇಕ ಬಿಡಿ ಕಲ್ಲುಗಳನ್ನು ಸೇರಿಸಿಸಿದ್ಧಗೊಳಿಸಿದ ವೇದಿಕೆಯಂತಹ ತಳಪಾಯವಿದ್ದು ಅದರ ಮೇಲೆ ಇಟ್ಟಿಗೆಯ ಸಾದಾ ಗೋಡೆ ಆರಂಭವಾಗುತ್ತದೆ. ಯಾವುದೇ ಅಲಂಕಾರವು ಕಂಡುಬರುವುದಿಲ್ಲ ಮೇಲೆಯೂ ಹಾಗೆಯೇ ಇದೆ. ಶಿಖರದ ತಳ ಭಾಗದಲ್ಲಿ ಮೊದಲು ಬಸದಿಯೊಂದಿದ್ದಿರಬೇಕು.

ಬಸದಿಯು ಸಾಧಾರಣ ರೀತಿಯ ಗರ್ಭಗೃಹವನ್ನು ಹೊಂದಿದ್ದು ಗರ್ಭಗೃಹವು ತೆರೆದ ಅಂತರಾಳವನ್ನು ಹೊಂದಿದೆ. ವಿಶಾಲವಾದ ನವರಂಗವಿದೆ. ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾಪಥವಿದ್ದು ಒಳಗೆ ಯಾವ ಅಲಂಕಾರವು ಇರುವದಿಲ್ಲ ಗರ್ಭಗೃಹದ ಒಳಗೋಡೆ ಬಹಳ ದಪ್ಪವಾಗಿದ್ದು ಗರ್ಭಗೃಹದ ಒಳಭಾಗ ಬಹು ಚಿಕ್ಕದಾಗಿದೆ. ಬಸದಿಯ ಮೇಲೆ ಶಿಖರವಿದೆ. ಗರ್ಭಗೃಹದ ಬಾಗಿಲವಾಡವು ಸರಳವಾಗಿದ್ದು ಮೇಲಿನ ಲಲಾಟ ವಿಶಾಲವಾದುದಾಗಿದ್ದು ನಾಲ್ಕು ರುದ್ರಕಾಂತ ಮಾದರಿಯ ಕಂಬಗಳನ್ನು ಇಲ್ಲಿ ಬಳಸದೆ ಇವು ಪ್ರಾರಂಭದಿಂದ ಅಂತ್ಯದವರೆಗೆ ವೃತ್ತಾಕಾರವಾಗಿದ್ದು, ವೃತ್ತಾಕಾರದ ಪೀಠಗಳನ್ನು ಹೊಂದಿವೆ. ಇವು ಚಾಮುಂಡರಾಯ ಬಸದಿಯ ವೃತ್ತಾರದ ಕಂಬಗಳನ್ನು ಹೋಲುತ್ತವೆ. ಮಧ್ಯದಲ್ಲಿನ ನಾಲ್ಕು ಕಂಬಗಳನ್ನು ಬಿಟ್ಟು ಸುತ್ತಲಿನ ೧೨ ಕಂಬಗಳಲ್ಲಿ ಗೋಡೆ ಕಡೆಯ ಎಂಟು ಕಂಬಗಳ ಮೂಲ ರಚನೆಯಲ್ಲಿ ಮೇಲಿನ ಕಂಬಗಳಿಂತಿದ್ದರೂ ಪಾದದಿಂದ ಕಂಬದ ಬೋದಿಗೆಯವರೆಗೆ ೧೬ ಮೂಲೆಗಳಿಂದ ಕೂಡಿದ್ದು ಸುಂದರ ವ್ಯಾಸವನ್ನು ಹೊಂದಿದೆ. ಮೇಲಿನ ಮುಚ್ಚಳವೂ ೧೬ ಮೂಲೆಯಲ್ಲಿದೆ ನವರಂಗದ ಮಧ್ಯದಲ್ಲಿನ ನಾಲ್ಕು ಪ್ರಧಾನ ಗಂಗರ ಕೆಲವು ಅಪರೂಪದ ಮಾದರಿಗಳಾಗಿವೆ. ನವರಂಗದ ಮಧ್ಯ ಇರುವ ಮುಚ್ಚಿಗೆಯಲ್ಲಿ ಅಗಲವಾದ ಪದ್ಮವಿದ್ದು ಪದ್ಮದ ಮಧ್ಯಭಾಗದ ಅಗಲವಾಗಿ ಚಪ್ಪಟೆಯಾಗಿದೆ. ಬಹುಶಃ ಇದರಲ್ಲಿ ಜಿನ ಚಿತ್ರವನ್ನೋ, ಧರಣೇಂದ್ರನ ಚಿತ್ರವನ್ನೋ ರಚಿಸಲು ಬಿಟ್ಟಿರಬೇಕೆಂದು



ಊಹಿಸರಬಹುದಾಗಿದೆ. ಸುತ್ತಲೂ ಎರಡು ಸುತ್ತಿನ ಪದ್ಮ ದಳಗಳಿಂದ ಅಲಂಕರಿಸಲಾಗಿದೆ. ಮುಚ್ಚಿಗೆಯಲ್ಲಿ ಹಸಿರು, ನಸುಗೆಂಪು, ಬಿಳಿ ಬಣ್ಣವನ್ನು ಬಳಸಿ ರಚಿಸಿದ ರೇಖಾ ಚಿತ್ರಗಳನ್ನು (ಡಿಸೈನ್) ಇಲ್ಲಿ ಕಾಣಬಹುದಾಗಿದೆ.[೧೦] ಅದು ಅಲ್ಲಲ್ಲಿ ಬಿದು ಹೋಗಿರುವ ಕಡೆಯಲ್ಲಿ ಒಳಪದರ ಹೊಯ್ಸಳರ ಕಾಲದ ವಿನ್ಯಾಸಗಳು ಕಂಡು ಬರುತ್ತವೆ. ಮೇಲಿನ ಪದರದ ಡಿಸೈನ್ ಚಿತ್ರಗಳನ್ನು ಸುಮಾರು ನೂರು ವರ್ಷಗಳ ಹಿಂದೆ ಮೈಸೂರು ಮನೆತನದ ದೇವಿರಮ್ಮಣ್ಣಿ ಹಾಗೂ ಕೆಂಪಮ್ಮಣ್ಣಿ ಬಸ್ತಿಯನ್ನು ಪುನರುತ್ಥಾನ ಮಾಡಿಸಿದ ಕಾಲದಲ್ಲಿ ಬರೆಯಿಸಿರಬೇಕು. ಆದರೆ ಈ ಬಸದಿಯಲ್ಲಿ ಅಲ್ಲಲ್ಲಿ ಮಾತ್ರ ಕೆಲವು ಬಣ್ಣಗಳ ತುಣುಕುಗಳನ್ನು ಕಾಣಬಹುದು. ಈ ಚಿತ್ರಗಳ ಕುರಿತು ಡಾ.ದೇವರ ಕೊಂಡಾರೆಡ್ಡಿ ಹಾಗೂ ಡಾ.ಅ.ಲ. ನರಸಿಂಹನ್‌ರವರು ವಿಶಾಲವಾಗಿರುವ ನವರಂಗದಲ್ಲಿ ೧೬ ಕಂಬಗಳ ಮೇಲೆ ಚಿತ್ರಗಳು ಇರುವುದಾಗಿ ಸ್ಪಷ್ಟಪಡಿಸುತ್ತಾರೆ.[೧೧]

### ೨. ಚಾಮುಂಡರಾಯ ಬಸದಿ (ನೇಮಿನಾಥ ಬಸದಿ)

ಶ್ರವಣಬೆಳಗೊಳದ ಚಿಕ್ಕಿ ಬೆಟ್ಟದಲ್ಲಿ ಪೂರ್ವಾಭಿಮುಖವಾಗಿರುವ ಬಸದಿಗಳಲ್ಲಿ ಈ ಬಸದಿಯೂ ಒಂದು. ಇದು ಗಂಗರ ಅಂತ್ಯ ಕಾಲದ ಹಾಗೂ ದ್ರಾವಿಡ ಮಾದರಿಯ ಸುಂದರವಾದ ಕಟ್ಟಡವಾಗಿದೆ. ಗಂಗರ ಸೇನಾಪತಿ ಚಾಮುಂಡರಾಯ ಇದರ ನಿರ್ಮಾತೃ ಗರ್ಭಗೃಹ ತೆರೆದ ಅಂತರಾಳವನ್ನು ನವರಂಗ ಹಾಗೂ ಮುಖ ಮಂಟಪವನ್ನು ಹೊಂದಿರುವ ಇದರ ಅಂತರಾಳ ಮತ್ತು ಗರ್ಭಗೃಹದ ಗೋಡೆಗಳು ಬಹು ದಪ್ಪವಾಗಿದೆ. ಕತ್ತಲೆಬಸದಿಯಂತೆ ಸಾಧಾರಣ ಕಟ್ಟಡವನ್ನು ನಿರ್ಮಿಸಲು ಹೋಗಿ ನಿರಾಧಾರ ಕಟ್ಟಡವಾಗಿರುತ್ತದೆ. ಆದರೆ ಮೇಲಿನ ಕಲ್ಲಿನ ಕಟ್ಟಡದ ತೂಕ ಹೊರಲು ಈ ಬಗೆಯ ರಚನೆಯು ಅಗತ್ಯವಿತ್ತು. ಬಸದಿಯ ಹೊರ ರಚನೆ ಆಯತಾಕಾರವಾಗಿದ್ದು ಮುಂಭಾಗದಲ್ಲಿ ಮುಖ ಮಂಟಪವಿದೆ.

ಚಾಮುಂಡರಾಯ ಬಸದಿಯ ನವರಂಗದ ಮುಚ್ಚಿಗೆಯಲ್ಲಿ ಅಗಲವಾದ ವೃತ್ತಾಕಾರದ ಪದ್ಮವಿದ್ದು ಅದರ ಮಧ್ಯಭಾಗವನ್ನು ವೃತ್ತಾಕಾರವಾಗಿದ್ದು ಕೆತ್ತನೆಗಳಿಲ್ಲದಾಗಿದೆ. ಬಹುಶಃ ಚಿತ್ರಸಲು ಈ ಭಾಗವನ್ನು ಹೀಗೆ ಖಾಲಿ ಬಿಟ್ಟಿರಬಹುದು.[೧೨] ದೇವಾಲಯದ ನವರಂಗದಲ್ಲಿ ರೇಖಾವಿನ್ಯಾಸದ ಬಣ್ಣದ ಚಿತ್ರಗಳಿದ್ದ ಗುರುತಿದೆ. ಅಲ್ಲಲ್ಲಿ ಮಾತ್ರ ಕೆಲವು ಬಣ್ಣಗಳ ಕಲೆಗಳನ್ನು ಕಾಣಬಹುದು. ಆದಕಾರಣ ಈ ಬಸದಿಯ ಭಿತ್ತಿ ಚಿತ್ರಗಳಿಂದ ಕೊಡಿರಬಹುದೆಂದು ಊಹಿಸಬಹುದು. ಈ ಬಸದಿಯ ಮುಂಬದಿಯ ತಳಪಾಯದ ಇಕ್ಕೆಲಗಳಲ್ಲಿ "ಚಾಮುಂಡರಾಯ ಮಾಡಿಸಿದಂ" ಎಂಬ ಶಾಸನಗಳಿವೆ. ಈ ಶಾಸನದ ಅಕ್ಷರಗಳು ೧೧ನೆಯ ಶತಮಾನದವಾಗಿರುವುದನ್ನು ಗಮನಿಸಬಹುದು.

### ೩. ಪಾರ್ಶ್ವನಾಥ ಬಸದಿ

ಶ್ರವಣಬೆಳಗೋಳದ ಚಂದ್ರಗಿರಿ ಚಿಕ್ಕಬೆಟ್ಟದ ಬಾಗಿಲಿನ ಎದುರಿಗೆ ಇರುವ ಕಟ್ಟಡವೇ ಪಾರ್ಶ್ವನಾಥ ಬಸದಿ ಅಥವಾ ಕಮಠ ಪಾರ್ಶ್ವನಾಥ ಬಸದಿ, ಎತ್ತರವಾಗಿರುವ ಬಸದಿಯ ಒಳಭಾಗದಲ್ಲಿ ಗರ್ಭಗೃಹ ಅಂತರಾಳ , ನವರಂಗ ಮತ್ತು ಮುಖಮಂಟಪವಿದೆ. ಗರ್ಭಗೃಹವು ಎತ್ತರವಾಗಿದ್ದು ಸು,' ೧೫'ಅಡಿ ಎತ್ತರದ ಪಾರ್ಶ್ವನಾಥನ ಬಳಪದ ಕಲ್ಲಿನ ಮೂರ್ತಿ ಇದೆ. ಪಾರ್ಶ್ವನಾಥ ಬಸದಿಯಲ್ಲಿನ ಬಣ್ಣದ ಶಾಸನದ ಪ್ರಕಾರ ಈ ಬಸದಿಯನ್ನು ಧಾಮನಂದಿ ತ್ರೈವಿದ್ಯ ದೇವರ ಶಿಷ್ಯರಾದ ಧಿನಕೀರ್ತಿದೇವರು ಮಾಡಿಸುತ್ತಾರೆ. ನಂತರದಲ್ಲಿ ನೃತ್ಯ ಮಂಟಪ ಅಥವಾ ನವರಂಗವನ್ನು ಸೇರಿಸಿರಬೇಕು, ನವರಂಗದ 'ಕಲ್ಲುಕಟ್ಟು' ಮತ್ತು ನೃತ್ಯ ಮಂಟಪಗಳನ್ನು ಕ್ರಿ, ಶ, ೧೧೯೫ರಲ್ಲಿ ಸುಮಾರಿನಲ್ಲಿ ಪಟ್ಟಣಸ್ವಾಮಿ ನಾಗದೇವ ಮಾಡಿಸಿರುತ್ತಾನೆ.[೧೩]

---

೧೦. ಡಾ. ದೇವರ ಕೊಂಡಾರೆಡ್ಡಿ ಶ್ರವಣಬೆಳಗೋಳದ ಬಸದಿಗಳ ವಾಸ್ತುಶಿಲ್ಪ: ಪು.೨೭
೧೧. ಡಾ. ಅ.ಲ.ನರಸಿಂಹನ್ ಕರ್ನಾಟಕ ಭಿತ್ತಿಚಿತ್ರ ಪರಂಪರೆ ಪು.೬೦
೧೨. ಡಾ. ದೇವರ ಕೊಂಡಾರೆಡ್ಡಿ ಶ್ರವಣಬೆಳಗೋಳದ ಬಸದಿಗಳ ವಾಸ್ತುಶಿಲ್ಪ: ಪು.೪೨
೧೩. -ಅದೇ- ಪು.೨೩



ನವರಂಗದ ಭಾಗವು ಚೌಕಾಕಾರವಾಗಿದ್ದು ಗೋಡೆಯ ಅಂಚಿನಲ್ಲಿ ಜಗತಿ ಇದೆ. ಮಧ್ಯ ಹೊಯ್ಸಳರ ಕಾಲಕ್ಕೆ ಸೇರಿದ ಎತ್ತರವಾದ ಹಾಗೂ ದಪ್ಪವಾದ ದುಂಡಗಿನ ಕಂಬಗಳಿವೆ. ಈ ಕಂಬಗಳಲ್ಲಿ ಪೀಠ ಚೌಕಾಕಾವಾಗಿದ್ದು ಪೀಠ, ವೃತ್ತಾಕಾರದ ಮಧ್ಯೆ ಎಡೆಕಟ್ಟುಗಳಿಂದ ಕೂಡಿದ ಶಲಾಕ, ಎಡೆಕಟ್ಟು, ಘಂಟಾ ಕುಂಭ, ಮುಚ್ಚಳ ಫಲಕಗಳಿವೆ. ಬಸದಿಯ ಅಂತರಾಳದ ಗೋಡೆಗಳಲ್ಲಿ ಧರಣೇಂದ್ರ ಮತ್ತು ಪದ್ಮಾವತಿಯರ ಬಣ್ಣದ ರೇಖಾ ಚಿತ್ರಗಳಿದ್ದು ಈಗ ಅವು ಮಸುಕಾಗಿವೆ. ಅವನ್ನು ಬಿಡಿಸಿರುವ ರೀತಿ ಕಿರೀಟ ವಿನ್ಯಾಸ ಇವುಗಳನ್ನು ಗಮನಿಸಿದಾಗ ಅವು ಹೊಯ್ಸಳರ ಕಾಲಕ್ಕೆ ಸೇರುತ್ತವೆ. ಪ್ರಸ್ತುತ ಈ ಭಿತ್ತಿ ಚಿತ್ರಗಳು ತೀರ ಮಸುಕಾಗಿದ್ದು ಕೆಲವು ಬಣ್ಣದ ಕುರುಹುಗಳು ಮಾತ್ರ ಕಾಣಬಹುದಾಗಿದೆ.

**೪. ದಾನ ಶಾಲಾ ಬಸದಿ (ಪಂಚಪರಮೇಷ್ಠಿ)**

ಶ್ರವಣಬೆಳಗೊಳದ ಹಳೆಯ ಪ್ರದೇಶದ ಭಾಗವಾಗಿದ್ದು ಈ ಸ್ಥಳದಲ್ಲಿ ದಾನ ಶಾಲಾ ಬಸದಿ ಇದೆ. ಈ ಬಸದಿಯು ಹಿಂದೆ ಮಠವಾಗಿದ್ದಿರಬಹುದು ಇದು ಉದ್ದವಾಗಿದ್ದು ಆಗಲ ಕಿರಿದಾಗಿದೆ. ಆಯತಾಕಾರದ ಕಟ್ಟಡ ಆದರೆ ಇದು ಹೊಯ್ಸಳರ ಕಾಲದಲ್ಲಿ ಜೀರ್ಣೋದ್ಧಾರವಾಗಿದ್ದು ಆಗಿನ ಇದರ ಬಾಗಿಲು ಉತ್ತರದಿಕ್ಕಿದ್ದಿರಬೇಕು ಈಗ ಪೂರ್ವಕ್ಕಿದೆ. ಇದರಲ್ಲಿ ೧೦ ಕಂಬಗಳಿದ್ದು ಹೊರಗಡೆಯಲ್ಲಿ ನಾಲ್ಕು ಕಂಬಗಳಿವೆ. ಇದಕ್ಕೆ ಮಧ್ಯೆ ಗೋಡೆಯೊಂದನ್ನು ಹಾಕಿ ಗರ್ಭಗೃಹವನ್ನು ನಿರ್ಮಿಸಿರುತ್ತಾರೆ. ಇದರಲ್ಲಿ ಪಂಚ ಪರಮೇಷ್ಠಿಗಳ ಶಿಲ್ಪವಿರುವ ಶಿಲೆ ಇದೆ. ಈ ಗರ್ಭಗೃಹಕ್ಕೆ ಬಳಸಿರುವ ಬಾಗಿಲವಾಡ ಸುಮಾರು ನಾಲ್ಕು ಅಡಿ ಎತ್ತರವಾಗಿದ್ದು ಶಾಖೆಯನ್ನು ಪ್ರಧಾನವಾಗಿ ಹೊಂದಿದೆ. ಹೊರಗಡೆಯ ಇಳಿಜಾರು ಕಟ್ಟಡಕ್ಕೆ ಬಳಸಿರುವ ಕಂಬಗಳು ಸು. ೧೧-೧೨ ನೆಯ ಶತಮಾನಕ್ಕೆ ಸೇರಿದವುಗಳು ಒಳ ಕಂಬಗಳು ಚತುರಸ್ರ-ಅಷ್ಟಾಸ್ರವಾಗಿವೆ. ಕೆಲವು ಕಂಬಗಳು ಚೌಕ ವೃತ್ತಾಕಾರವಾಗಿವೆ. ಈ ಬಸದಿಯ ಮುಚ್ಚಿಗೆಯಲ್ಲಿ ಬಣ್ಣದ ರೇಖಾಚಿತ್ರಗಳ ವಿನ್ಯಾಸ ಮುಸುಕು ಮುಸುಕಾಗಿ ಕಾಣಬರುತ್ತದೆ.[೧೪] ಡಾ.ದೇವರಕೊಂಡಾರೆಡ್ಡಿಯವರು ದಾನ ಶಾಲಾ ಬಸದಿಯಲ್ಲಿ ಭಿತ್ತಿ ಚಿತ್ರಗಳು ಇರುವುದರ ಕುರುಹುಗಳ ಬಗ್ಗೆ ತಿಳಿಸಿರುತ್ತಾರೆ.

**೫. ಲೆಪ್ಪದ ಬಸದಿ**

ಮೂಡಬಿದಿರೆಯನ್ನು ಇಂದು "ದಕ್ಷಿಣ ಜೈನಕಾಶಿ" ಎಂದೇ ಗುರ್ತಿಸುತ್ತಾರೆ. ಇದಕ್ಕೆ ಮುಖ್ಯ ಕಾರಣ ಇಲ್ಲಿರುವ ಅತ್ಯಂತ ವೈಶಿಷ್ಟ್ಯಪೂರ್ಣವೂ ವೈವಿಧ್ಯಮಯವೂ ಆಗಿರುವ ೧೮ ಜೈನ ಬಸದಿಗಳನ್ನು ಹೊಂದಿದೆ. ಈ ಎಲ್ಲ ಬಸದಿಗಳು ವಾಸ್ತುಶಿಲ್ಪದ ದೃಷ್ಟಿಯಿಂದ ೧೫-೧೬ ನೇ ಶತಮಾನದಲ್ಲಿ ರಚಿತವಾದವು. ಬಸದಿಗಳ ಸಮೂಹದಲ್ಲಿ ಲೆಪ್ಪದ ಬಸದಿಯು ಅತ್ಯಂತ ಭಿನ್ನವಾದದ್ದು. ಬಸದಿಯ ಗರ್ಭಗೃಹದ ಒಳಗಡೆಯ ಭಿತ್ತಿಯ ಮೇಲೆ ಪಂಚವರ್ಣಗಳನ್ನು ಬಳಸಿ ಬಿಡಿಸಿದ ಚಿತ್ರಗಳಿದ್ದು, ಒಂದು ಅಂಕಣದಲ್ಲಿ ಪದ್ಮಾಸನ ಭಂಗಿಯಲ್ಲಿ ಸಾಲಾಗಿ ಕುಳಿತಿರುವ ತೀರ್ಥಂಕರರು, ಇನ್ನೊಂದು ಕಡೆ ಓರ್ವ ಸ್ತ್ರೀಯು ಮಲಗಿದಂತೆ ಚಿತ್ರಿಸಲಾಗಿದ್ದು ಆಕೆಯ ಪಕ್ಕದಲ್ಲಿ ಕೆಲವು ಸ್ತ್ರೀಯರು ನಿಂತಿರುವಂತೆ ತೋರಿಸಿಲಾಗಿದೆ. ಬಹುಶಃ ಈಕೆ ಚಂದ್ರನಾಥ ಜಿನನ ಮಾತೆಯಾಗಿದ್ದು ಇದು ಗರ್ಭಾವತರಣ ಕಲ್ಯಾಣಕ್ಕೆ ಸಂಬಂಧಿಸಿದ ಚಿತ್ರವಾಗಿರಬೇಕು. ಚಿತ್ರಗಳು ಮುಸುಕಾಗಿರುವುದರಿಂದ ವಿವರಗಳು ಸ್ಪಷ್ಟವಿಲ್ಲ.[೧೫] ಎಸ್.ಡಿ.ಶೆಟ್ಟಿಯವರು ಚಂದ್ರಪ್ರಭ ಪುಸ್ತಕದಲ್ಲಿ ಲೆಪ್ಪದ ಬಸದಿಯ ಕುರಿತು ಭಿತ್ತಿಚಿತ್ರಗಳ ಬಗ್ಗೆ ಸ್ಪಷ್ಟಪಡಿಸುತ್ತಾರೆ. ಲೇಪ್ಪದ ಬಸದಿಯ ಗರ್ಭಗೃಹದಲ್ಲಿ ಅನ್ಯರಿಗೆ ಪ್ರವೇಶವಿಲ್ಲದ ಕಾರಣ ಭಿತ್ತಿ ಚಿತ್ರಗಳನ್ನು ನೋಡಲು ಸಾಧ್ಯವಿರುವುದಿಲ್ಲ.

---

೧೪. ಡಾ. ದೇವರ ಕೊಂಡಾರೆಡ್ಡಿ ಶ್ರವಣಬೆಳಗೋಳದ ಬಸದಿಗಳ ವಾಸ್ತುಶಿಲ್ಪ: ಪು.೬೨
೧೫. ಡಾ. ಎಸ್.ಡಿ.ಶೆಟ್ಟಿ: ಚಂದ್ರಪ್ರಭಾ: ಪು.೧೬೨



೬. ಅಮ್ಮನವರ ಬಸದಿ

ಮೂಡಬಿದರೆಯ ಬಸದಿ ಸಮೂಹಗಳಲ್ಲಿ ಮತ್ತೊಂದು ವಿಶಿಷ್ಟ ಬಸದಿ ಹಿರೇಬಸದಿ ಅಥವಾ ಅಮ್ಮನವರ ಬಸದಿ. ಈ ಬಸದಿಯ ಮೂಲ ಸ್ವಾಮಿ ಶಾಂತಿನಾಥ ತೀರ್ಥಂಕರರು, ಅಮ್ಮನವರ ಬಸದಿಯ ಗರ್ಭಗೃಹದ ಗೋಡೆಯಲ್ಲೂ ಭಿತ್ತಿ ಚಿತ್ರಗಳಿದ್ದು, ಅವುಗಳ ಮೇಲೆ ಸುಣ್ಣ ಬಳಿದು, ಚಿತ್ರಗಳೆಲ್ಲವು ನಾಶವಾಗಿವೆ. ಎಂಬುದನ್ನು ಎಸ್.ಡಿ.ಶೆಟ್ಟಿರವರು 'ಚಂದ್ರಪ್ರಭಾ' ತಿಳಿಸಿರುತ್ತಾರೆ. ಪ್ರಸ್ತುತ ಈ ಭಿತ್ತಿಚಿತ್ರ ಬಸದಿಯಲ್ಲಿ ಕಾಣುವುದಿಲ್ಲ.

ಮೂಲತಃ ಜೈನ ಮುನಿಗಳಿಗೆ ಅಶ್ರಯಗಳಾಗಿ, ಚಾತುರ್ಮಾಸ್ಯಗಳ ವಸತಿಗಾಗಿ ನಿರ್ಮಿತವಾದ ಈ ಬಸದಿಗಳು ಧರ್ಮೀಯರ ಅಧ್ಯಯನ, ಅಧ್ಯಾಪನ, ವಾಚನ, ಲೇಖನ, ಮತ್ತು ಧರ್ಮ ಶ್ರವಣಾದಿಗಳ ನೆಲೆಗಳಾಗಿ ರೂಪುಗೊಂಡಿವೆಯಲ್ಲಿದೆ (ಕಲಾ ಗ್ಯಾಲರಿ) ಪ್ರದರ್ಶನಾಲಯವಾಗಿ ಧರ್ಮ ಪ್ರಚಾರದ ಕಾರ್ಯವನ್ನು ನಿರ್ವಹಿಸಿವೆಯಂದು ಹೇಳಬಹುದಾಗಿದೆ.

೨. ಜೈನ ಮಠಗಳಲ್ಲಿರುವ ಭಿತ್ತಿಚಿತ್ರಗಳು

ಕರ್ನಾಟಕದ ಜೈನರಲ್ಲಿರುವ ಭಟ್ಟಾರಕ ಮಠಗಳ ಪರಂಪರೆಯು ಕೂಡ ಗಮನಿಸತಕ್ಕದಾಗಿದೆ. ಜೈನಸಮುದಾಯವು ಭಟ್ಟಾರಕರುಗಳಿಗೆ ತನ್ನ ಸರ್ವತೋಭಿವೃದ್ಧಿಗಾಗಿ ಹಲವಾರು ಮಹತ್ವದ ಕರ್ತವ್ಯಗಳನ್ನು ವಹಿಸಿದೆ. ಅವುಗಳಲ್ಲಿ ಭಿತ್ತಿ ಚಿತ್ರಗಳು ವಿಶಿಷ್ಟವಾಗಿ ಬೆಳವಣಿಗೆಯಾಗಿವೆ.

೧. ಜೈನಮಠ ಶ್ರವಣಬೆಳಗೊಳ

ಶ್ರವಣಬೆಳಗೊಳದ ಭಂಡಾರಿ ಬಸದಿಯ ಬಲಭಾಗದಲ್ಲಿ ಒಳಗಡೆ ಪಶ್ಚಿಮಕ್ಕೆ ಮುಖ ಮಾಡಿರುವ ಜೈನ ಮಠವು ಮಧ್ಯೆ ತೊಟ್ಟಿ ಮನೆಯಂತಿದ್ದು ಅನೇಕ ಕೋಣೆಗಳನ್ನೊಳಗೊಂಡಿದೆ. ಬಾಗಿಲಿನ ಎದುರಿಗೆ ಇರುವ ಮೂರು ಕೋಣೆಗಳಲ್ಲಿ ಅನೇಕ ಜಿನ ಯಕ್ಷ-ಯಕ್ಷಿಯರ ಪ್ರತಿಮೆಗಳಿವೆ. ಹಾಗೂ ಅನೇಕ ಪ್ರಾಚೀನ ಅರ್ವಾಚೀನ ವಿಗ್ರಹಗಳು ಇಲ್ಲಿದೆ. ಈ ಮಠದ ಪರಂಪರೆ ಎಷ್ಟು ಹಳೆಯದೆಂಬುದು ನಿರ್ಧರಿಸುವುದು ಕಷ್ಟ ಅದರೆ ೧೧ನೆಯ ಶತಮಾನದಲ್ಲಿಯೇ ಸ್ವಾಮಿಗಳ ಉಲ್ಲೇಖ ಬಂದಿರುವುದರಿಂದ ಆ ಕಾಲದಲ್ಲಿಯೇ ಇಲ್ಲಿ ಮಠವಿದ್ದಿರಬಹುದೆಂದು ಊಹಿಸಬಹುದಾಗಿದೆ.

ಪ್ರಸ್ತುತ ಈ ಮಠದ ಕಟ್ಟಡವು ಮೈಸೂರು ಅರಸರ ಕಾಲದಾಗಿದ್ದು ಬಹುಶಃ ಇಲ್ಲಿನ ಹಳೆಯ ಕಟ್ಟಡವನ್ನು ಕಿತ್ತು ಹೊಸದಾಗಿ ಕಟ್ಟಿಸಿರಬಹುದು. ಭಂಡಾರಿ ಹುಳ್ಳಮಯ್ಯನು ಭಂಡಾರಿ ಬಸದಿಯನ್ನು ಇಲ್ಲಿ ಕಟ್ಟಿಸಿದ ಮೇಲೆ ಮಠವು ಅಕ್ಕನ ಬಸದಿ ಕಡೆಯಿಂದ (ದಾನ ಶಾಲಾ ಬಸದಿ ಹಾಗೂ ಸಿದ್ಧಾಂತ ಬಸದಿಯಿಂದ) ಇಲ್ಲಿಗೆ ಬದಲಾಯಿಸಿರಬಹುದು. ಈಗಿರುವ ಕಟ್ಟಡದ ಮೇಲುಪ್ಪರಿಗೆಯನ್ನು ಈ ಶತಮಾನದ ಸು. ೧೯೩೦ರ ದಶಕದಲ್ಲಿ ನಿರ್ಮಿಸಿರುತ್ತಾರೆ. ಮಠದ ಸುತ್ತಲು ಅಲಂಕಾರಿಕವಾಗಿ ನಿರ್ಮಿಸಿರುವ ಗಾರೆಯ ಗೂಡುಗಳಲ್ಲಿ ಸರಸ್ವತಿ, ಅಂಬಿಕೆ, ಪದ್ಮಾವತಿ ಹಾಗೂ ಇಂದ್ರ ಮುಂತಾದ ಗಾರೆಯ ಮಾಧ್ಯಮದ ಸುಂದರವಾದ ಮೂರ್ತಿಗಳಿವೆ. ಈ ಮೂರ್ತಿಗಳಿಗೆ ಬಣ್ಣವನ್ನು ಹಚ್ಚಿರುವ ಕುರುಹುಗಳನ್ನು ಕಾಣಬಹುದಾಗಿದೆ. ಜೈನಮಠದ ಭಿತ್ತಿ ಚಿತ್ರಕಲಾಕೃತಿಗಳ ಅಪೂರ್ವ ಭಂಡಾರವನ್ನು ಈಗಲೂ ಕಾಣಬಹುದು.

ಮಠವನ್ನು ಪ್ರವೇಶಿದೊಡನೆ ಎದುರುಗಡೆ ಕಾಣುವ ಗರ್ಭಗೃಹದ ಬಲಭಾಗದಲ್ಲಿ ಗೋಡೆಯ ಮೇಲಿರುವ ಮುಮ್ಮಡಿ ಕೃಷ್ಣರಾಜ ಒಡೆಯರ ಮತ್ತು ಅವರ ದಸರಾ ದರ್ಬಾರಿನ ಚಿತ್ರಗಳು ನಮ್ಮ ಗಮನವನ್ನು ಸೆಳೆಯುತ್ತದೆ. ಆದರೆ ಎಡಗಡೆ ಗೋಡೆಯ ಮೇಲೆ ಮೂರು ಸಾಲು ಚಿತ್ರಗಳಿವೆ. ಅವುಗಳಲ್ಲಿ ಮೇಲಿನಿಂದ ಮೊದಲನೆಯ ಸಾಲಿನಲ್ಲಿ ಪಂಚಪರಮೇಷ್ಠಿಗಳನ್ನು ಚಿತ್ರಿಸಲಾಗಿದೆ. ಮಧ್ಯದ ಸಾಲಿನಲ್ಲಿ ನೇಮಿನಾಥ ಯಕ್ಷ ಯಕ್ಷಿಯರ ಚಿತ್ರಗಳೂ



ಕೆಳಗಡೆ ಸಾಲಿನಲ್ಲಿ ಮಠದ ಸ್ವಾಮಿಗಳ ಚಿತ್ರಗಳೂ ಇವೆ. ತಮ್ಮ ಶಿಷ್ಯರಿಗೆ ಧಾರ್ಮಿಕ ಉಪದೇಶವನ್ನು ಮಾಡುತ್ತಿರುವಂತೆ ಈ ಸ್ವಾಮಿಗಳನ್ನು ಚಿತ್ರಿಸಲಾಗಿದೆ. ಉತ್ತರ ದಿಕ್ಕಿನ ಗೋಡೆಯ ಮೇಲೆ ಪಾರ್ಶ್ವನಾಥನ ಸಮವಸರಣದ ಚಿತ್ರವಸ್ತುವನ್ನು ಮುಖ್ಯವಾಗಿ ಚಿತ್ರಿಸಲಾಗಿದೆ. ಇದರ ಸುತ್ತಲೂ ಇರುವ ವೃತ್ತಾಕಾರದಲ್ಲಿ ಕುತೂಹಲಕರವಾದ ಅನೇಕ ಚಿತ್ರಗಳಿವೆ. ದಕ್ಷಿಣ ದಿಕ್ಕಿನ ಗೋಡೆಯ ಮೇಲೆ ಸ್ವಾಮಿಗಳು ಇರುವ ಕೋಣೆಯ ಬಲಭಾಗದಲ್ಲಿ ಭರತ ಚಕ್ರವರ್ತಿಯ ಜೀವನವನ್ನು ಆಧರಿಸಿದ ಸನ್ನಿವೇಶಗಳು ನಿರೂಪಿಸಲ್ಪಟ್ಟಿವೆ. ಪಶ್ಚಿಮ ದಿಕ್ಕಿನ ಗೋಡೆಯ ಮೇಲಿರುವ ಎರಡು ಸಾಲುಗಳಲ್ಲಿಯೂ ಈ ಕಥೆಯೇ ಮುಂದುವರೆದಿದೆ. ಶ್ರವಣಬೆಳಗೊಳದ ಈ ಚಿತ್ರಗಳ ಕಾಲವನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಇವುಗಳಲ್ಲಿ ಕೆಲವಾದರೂ ಪ್ರಾಚೀನವಾಗಿದ್ದಿರಬೇಕು. ಆದರೆ ಬಹುಪಾಲು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ನಿರ್ಮಿತವಾದುವುಗಳನ್ನೆಬಹುದು. ಮೈಸೂರು ಶೈಲಿಯ ಭಿತ್ತಿಚಿತ್ರಗಳಲ್ಲಿ ಬಹಳ ಪ್ರಮುಖವಾದ ಸ್ಥಾನವನ್ನು ಹೊಂದಿರುವುದು ಕಂಡುಬರುತ್ತವೆ. ಇಲ್ಲಿನ ಭಿತ್ತಿಚಿತ್ರಗಳು ಕೆಲವಂತೂ ಅತ್ಯಂತ ಗಮನಾರ್ಹವಾಗಿವೆ.

**ಆರು ಲೇಶ್ಯಗಳು ಚಿತ್ರ**

ಒಂದು ಮರದ ಬಳಿಯಲ್ಲಿ ಮತ್ತು ಅದರ ಮೇಲೆ ಆರು ಜನ ನಿಂತು ಕಾರ್ಯೋನ್ಮುಖರಾಗಿದ್ದಾರೆ. ಜೈನ ಸಿದ್ಧಾಂತದಲ್ಲಿ ಬರುವ ಆರು ಲೇಶ್ಯಗಳನ್ನು ನಿರೂಪಿಸುವ ಸಾಂಕೇತಿಕ ಚಿತ್ರಣ ಇಲ್ಲಿದೆ. ಆರು ಲೇಶ್ಯಗಳಲ್ಲಿ ಮೂರು ಪುಣ್ಯಪ್ರದವಾಗಿರುವವು. ಮತ್ತೆ ಮೂರು ಪಾಪಕಾರದವು. ಒಳಿತು ಕೆಡಕುಗಳನ್ನು ಜೀವನಕ್ಕೆ ಅಂಟಿಸಲು ಇವೇ ಮೂಲಕಾರಣಗಳು ಇವುಗಳಲ್ಲಿ ಪುಣ್ಯಪ್ರದವಾದವು ಮತ್ತು ಒಳಿತಿಗೆ ಕಾರಣರಾದ ಲೇಶ್ಯವನ್ನು ಸೂಚಿಸಲು ಕಿತ್ತಳೆ ವರ್ಣ, ಪದ್ಮವರ್ಣ, ಮತ್ತು ಶುಕ್ಲವರ್ಣಗಳನ್ನು ಬಳಸಲಾಗಿದೆ. ಪಾಪಕಾರಕವಾದ ಲೇಶ್ಯಗಳನ್ನು ಕೃಷ್ಣ, ನೀಲಿ ಮತ್ತು ಕಪೋತ ವರ್ಣಗಳು ಸೂಚಿಸುತ್ತವೆ. ಈ ಅಧಮ ಲೇಶ್ಯಗಳು–ನರಕಜನ್ಮ ಗಿಡ, ಮರ ಮತ್ತಿತರ ಪ್ರಾಣಿಜನ್ಮಕ್ಕೆ ಹೇತುವಾಗುತ್ತವೆ. ಮೊದಲ ಮೂರು ಅಂದರೆ ಉತ್ತಮ ಲೇಶ್ಯಗಳು ಮಾನವ ಜನ್ಮಕ್ಕೆ ಅಲ್ಲಿಂದ ದೇವಜನ್ಮಕ್ಕೆ ಮತ್ತು ಕೊನೆಯಲ್ಲಿ ಮುಕ್ತಿಗೆ ಕಾರಣವಾಗುತ್ತದೆ. ಈ ವಿವಿಧ ಲೇಶ್ಯಗಳಿಂದ ಮಾನವನ ವರ್ತನೆಯಲ್ಲಾಗಬಹುದಾದ ವಿವಿಧ ಪ್ರತಿಕ್ರಿಯೆಗಳನ್ನು ಇಲ್ಲಿನ ಚಿತ್ರ ಅರ್ಥವತ್ತಾಗಿ ನಿರೂಪಿಸುತ್ತದೆ. ಮಾವಿನ ಹಣ್ಣನ್ನು ಬಿಟ್ಟಿರುವ ಮರದ ಬಳಿ ನಿಂತು ಆ ಹಣ್ಣನ್ನು ಕೊಯ್ಯುವುದಕ್ಕೆ ಆ ಆರು ಜನರು ಪಡುವ ಪ್ರಯತ್ನದಲ್ಲಿ ಈ ಲೇಶ್ಯದ ಪ್ರಭಾವಕ್ಕೆ ಒಳಗಾದವರು. ಅದರ ಕಾಂಡವನ್ನು ಕತ್ತರಿಸುತ್ತಿರುವುದು ಕಾಣುತ್ತದೆ. ಕಪೋತ ವರ್ಣದ ಲೇಶ್ಯವು ಆ ಮರದ ದೊಡ್ಡ ಕೊಂಬೆಗಳನ್ನು ಕತ್ತರಿಸುವುದರಲ್ಲಿ ಪರ್ಯಾವಸಾನವಾಗುತ್ತದೆ. ಹಾಗೆಯೇ ಉತ್ತಮ ಲೇಶ್ಯದ ಪ್ರಭಾವಳಿಯಲ್ಲಿಯೂ ಮೂರು ಹಂತಗಳಿವೆ. ಅವುಗಳಲ್ಲಿ ಮೊದಲನೆಯ ಅಂದರೆ ಕಿತ್ತಳೆಯ ವರ್ಣದ ಲೇಶ್ಯಕ್ಕೆ ಒಳಗಾದ ವ್ಯಕ್ತಿ ಚಿಕ್ಕ ಚಿಕ್ಕ ಕೊಂಬೆಗಳನ್ನು ಕತ್ತರಿಸುತ್ತಿದ್ದಾನೆ. ಪದ್ಮವರ್ಣದ ಲೇಶ್ಯ ಕೊಂಬೆಗಳನ್ನು ಕತ್ತರಿಸದೆ ಕೇವಲ ಹಣ್ಣನ್ನು ಕೀಳುವುದರಲ್ಲಿ ಪರ್ಯಾವಸಾನವಾಗುತ್ತದೆ. ಅತ್ಯುತ್ತಮವಾದ ಮತ್ತು ಕೊನೆಯದಾದ ಶುಕ್ಲವರ್ಣದ ಲೇಶ್ಯ ಹಣ್ಣನ್ನು ಕೀಳುವುದಕ್ಕೂ ಉದ್ಯುಕ್ತವಾಗುವುದಿಲ್ಲ ಕೆಳಗೆ ಬಿದ್ದ ಹಣ್ಣನ್ನು ಎತ್ತಿಕೊಳ್ಳುವುದರಲ್ಲಿ ಮಾತ್ರ ತೃಪ್ತವಾಗುತ್ತದೆ. ಹೀಗೆ ಆರು ಲೇಶ್ಯಗಳಿಗೆ ಒಳಗಾದ ವ್ಯಕ್ತಿಗಳ ಮನೋಧರ್ಮವನ್ನು ಅರ್ಥವತ್ತಾಗಿ ಈ ಚಿತ್ರ ನಿರೂಪಿಸುತ್ತದೆ. ಶ್ರವಣಬೆಳಗೊಳದ ಈ ಭಿತ್ತಿಚಿತ್ರಗಳು ಮೂಲತಃ ಧಾರ್ಮಿಕ ಹಿನ್ನಲೆಯಲ್ಲಿ ಜೈನಧರ್ಮದ ಕಥಾವಸ್ತುವನ್ನು ಹೊಂದಿ ರಚಿತವಾದವುಗಳಾಗಿವೆ. ಇಲ್ಲಿಯ ಚಿತ್ರಗಳಿಗೆ ಮೂಲ ಆಕರ ಗ್ರಂಥಗಳು ನಾಗಚರಿತ್ರೆ, ಪಾರ್ಶ್ವನಾಥ ಚರಿತೆ ಮುಂತಾದ ಜೈನ ಗ್ರಂಥಗಳಾಗಿವೆ.

ಈ ಗ್ರಂಥಗಳ ಕಥಾನಕದ ಆಧಾರದ ಮೇಲೆ ಸಣ್ಣ ಸಣ್ಣ ಸ್ಥಳಾವಕಾಶವನ್ನು ಮಾಡಿಕೊಂಡು ಕಥಾ ನಿರೂಪಣಾ ಚಿತ್ರಗಳನ್ನು ರಚಿಸಿದ್ದಾರೆ. ಅನೇಕ ಚಿತ್ರಗಳು ಹಾಳಾದರೂ ಹಲವಾರು ಚಿತ್ರಗಳನ್ನು ಗುರುತಿಸಿ ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಅಧ್ಯಯನವು ತೀರಾ ಸ್ಥೂಲವಾದ ಅಧ್ಯಯನವಾಗಿದ್ದು, ಇಲ್ಲಿ ಸ್ವತಂತ್ರವಾಗಿ










ಶ್ರವಣಬೆಳಗೊಳ ಭಿತ್ತಿಚಿತ್ರಗಳು










ಶ್ರವಣಬೆಳಗೊಳ ಭಿತ್ತಿಚಿತ್ರಗಳು










ಶ್ರವಣಬೆಳಗೊಳ ಭಿತ್ತಿಚಿತ್ರಗಳು










ಶ್ರವಣಬೆಳಗೊಳ ಭಿತ್ತಿಚಿತ್ರಗಳು



ಶ್ರವಣಬೆಳಗೊಳದ ಈ ಭಿತ್ತಿಚಿತ್ರಗಳನ್ನು ಮುಖ್ಯವಾಗಿಟ್ಟುಕೊಂಡು ವ್ಯವಸ್ಥಿತವಾದ ಸಮಗ್ರ ಅಧ್ಯಯನವನ್ನು ಮಾಡಬೇಕಾಗಿದೆ. ಸೀಮಿತ ಅವಧಿಯ ಈ ಅಧ್ಯಯನವು ಈ ದಿಸೆಯಲ್ಲಿ ಒಂದು ಇಣಕು ನೋಟವನ್ನು ಮಾತ್ರ ಕೊಡುವ ಪ್ರಯತ್ನಮಾಡಿದೆ. ಮುಂದೆ ಅಧ್ಯಯನ ಮಾಡಬೇಕೆನ್ನುವವರಿಗೆ ಇಲ್ಲಿ ಬೇಕಾದಷ್ಟು ವಿವಿಧ ನೆಲೆಯಲ್ಲಿ ಅಧ್ಯಯನ ಕೈಗೊಳ್ಳಲು ಅವಕಾಶವಿದೆ.

**ಕಾರ್ಕಳದ-ಚಂದ್ರಪ್ರಭಾ ಸ್ವಾಮಿಯ ಜೈನಮಠದ ಭಿತ್ತಿಚಿತ್ರಗಳು**

ಕಾರ್ಕಳದ ಚರ್ತುಮುಖ ಬಸದಿಯ ಬಳಿಯಿರುವ ಜೈನಮಠದಲ್ಲಿ ತೊಟ್ಟಿಯ ಬಲಭಾಗದ ಕೋಣೆಯ ಎದುರುಗೋಡೆಯಲ್ಲಿ ಭಿತ್ತಿಚಿತ್ರಗಳನ್ನು ಕಾಣಬಹುದಾಗಿದೆ. ಸುಮಾರು ಹತ್ತೊಂಬತ್ತನೆಯ ಶತಮಾನದಲ್ಲಿ ರಚಿಸಲಾಗಿದ್ದು ಪ್ರಸ್ತುತ ಈ ಕಲಾಕೃತಿಗಳು ಮಸುಕು ಮಸುಕಾಗಿವೆ.

**ಚಿತ್ರ-೧ ಪಟ್ಟಿಕೆಗಳಲ್ಲಿನ ೨೪ ತೀರ್ಥಂಕರುಗಳ ಚಿತ್ರಗಳು**

ತೊಟ್ಟಿಯ ಬಲಭಾಗದ ಕೋಣೆಯ ಎದುರು ಗೋಡೆಯ ಅಂಕಣದಲ್ಲಿ ೨೪ ತೀರ್ಥಂಕರರನ್ನು ಚಿತ್ರಸಲಾಗಿದ್ದು. ಎಲ್ಲ ತೀರ್ಥಂಕರರು ಪದ್ಮಾಸನದಲ್ಲಿ ಕುಳಿತು ನಾಭಿಯ ಬಳಿ ಕೈಇರಿಸಿ ಧ್ಯಾನ ಮುದ್ರೆಯಲ್ಲಿದ್ದಾರೆ. ಜೈನಾಗಮನಕ್ಕೆ ಅನುಗುಣವಾಗಿ ಬಣ್ಣಗಳಲ್ಲಿಯೂ ವ್ಯತ್ಯಾಸವನ್ನು ತೋರಿದ್ದಾರೆ. ಕಡುನೀಲಿ, ನಸುಗೆಂಪು, ಕೇಸರಿ, ಹಸಿರು ಇತ್ಯಾದಿ ಬಣ್ಣಗಳನ್ನು ಇಡೀ ಶರೀರಕ್ಕೆ ಹಾಕಿ ಪ್ರತ್ಯೇಕವಾಗಿ ಗುರುತಿಸುವಂತೆ ಮಾಡಿದ್ದಾರೆ. ಪ್ರತಿ ತೀರ್ಥಂಕರರಿಗೆ ಇರುವಂತಹ ಲಾಂಛನವನ್ನು ಪೀಠದ ಕೆಳಗೆ ರಚಿಸಲಾಗಿದೆ. ಹಾಗೂ ಪ್ರತಿ ತೀರ್ಥಂಕರರಿಗೆ ಅವರ ಮೈಬಣ್ಣಕ್ಕೆ ಅನುಗುಣವಾಗಿ ಪ್ರತಿವರ್ಣವನ್ನು ಹಿನ್ನೆಲೆಯಲ್ಲಿ ಬಳಸಲಾಗಿದೆ. ಈ ಕಲಾಕೃತಿಗಳು ನೈಜವಾದ ಬಾಹ್ಯ ರೇಖೆಯನ್ನು ಹೊಂದಿದ್ದು ತೀರ್ಥಂಕರರ ಮುಖ ಶಾಂತ ರೀತಿಯಲ್ಲಿ ಧ್ಯಾನಸ್ಥರಾಗಿ ಕುಳಿತಿರುವುದನ್ನು ಗಮನಿಸಬಹುದಾಗಿದೆ. ೨೪ ತೀರ್ಥಂಕರರನ್ನು ಕಂಬಗಳಿಂದ ಬೇರ್ಪಡಿಸಿ ಹೂಬಳ್ಳಿ ಎಲೆಯ ನಕ್ಷಾಚಿತ್ರಗಳಿಂದ ಕೂಡಿದ ಬಾಹ್ಯ ಚೌಕಟ್ಟನ್ನು ಚಿತ್ರಿಸಿದ್ದು ಇಂತಹ ಭಿತ್ತಿಚಿತ್ರಗಳು ಜೈನಧರ್ಮದ ತತ್ವಸಾರವನ್ನು ತಿಳಿಸುವುದಾಗಿದೆ. ಹಾಗೂ ಪ್ರತಿಯೊಂದು ಬಣ್ಣಕ್ಕೂ ವಿಶೇಷ ಮಹತ್ವವನ್ನು ಜೈನ ಧರ್ಮದಲ್ಲಿ ನೀಡಿರುವುದುನ್ನು ಇಲ್ಲಿನ ಭಿತ್ತಿ ಚಿತ್ರಗಳಲ್ಲಿ ಕಂಡುಬರುತ್ತದೆ. ಈ ಭಿತ್ತಿಚಿತ್ರಗಳು ವರ್ಣದ ಪ್ರಾಮುಖ್ಯತೆ ಕಳೆದುಕೊಂಡಿದ್ದರೂ ಅಳಿದುಳಿದ ವರ್ಣಗಳ ಆಧಾರದ ಮೇಲೆ ಇವುಗಳನ್ನು ಗುರುತಿಸಬಹುದಾಗಿದೆ.

**೨. ರಾಜನು ಮಂತ್ರಿಯೊಂದಿಗೆ ಜೈನಮುನಿಗೆ ಭಿಕ್ಷೆ ನೀಡುತ್ತಿರುವುದು**

ಈ ಕಲಾಕೃತಿಯಲ್ಲಿ ನಿರ್ವಾಣ ಮೂರ್ತಿಯಾಗಿರುವ ಜೈನಮುನಿಗೆ ಒಬ್ಬ ರಾಜನು ಮಂತ್ರಿಯೊಡನೆ ಮುನಿಗೆ ಭಿಕ್ಷೆಯನ್ನು ನೀಡುತ್ತಿರುವ ದೃಶ್ಯವನ್ನು ಕಾಣಬಹುದಾಗಿದೆ. ಪ್ರಸ್ತುತ ಈ ಕಲಾಕೃತಿಯ ಪ್ರಾಕೃತಿಕ ಆಪತ್ತಿಗೆ ಬಲಿಯಾಗಿದ್ದು ಚಿತ್ರಗಳು ಸರಿಯಾಗಿ ಗೋಚರಿಸುವದಿಲ್ಲ. ಚಿತ್ರ ಸಂಯೋಜನೆಯಲ್ಲಿ ತುಂಬ ವಿಶಿಷ್ಟವಾಗಿದೆ. ಮುನಿ ಮತ್ತು ರಾಜನ ಮಧ್ಯಭಾಗದಲ್ಲಿ ಮೂರು ಕಾಲಿನ ಸ್ವಲ್ಪ ಎತ್ತರದ ಪೀಠವಿದ್ದು ಈ ಪೀಠದಲ್ಲಿ ಮೇಲೆ ಒಂದು ತಟ್ಟೆಯಾಕಾರದ ಹರಿವಾಣದಲ್ಲಿ ದಾನವಾಗಿ ನೀಡಿದ ವಸ್ತುವಾಗಿದ್ದು, ರಾಜ ಹಾಗೂ ತನ್ನೊಂದಿಗೆ ಇರುವ ಮಂತ್ರಿಯ ವಸ್ತ್ರ ವಿನ್ಯಾಸವು ಮೈಸೂರು ಶೈಲಿಯ ವಸ್ತ್ರವಿನ್ಯಾಸವನ್ನು ಹೋಲುತ್ತದೆ. ಈ ಇಬ್ಬರು ವ್ಯಕ್ತಿಯ ಮುಂಡಾಸು ಕೆಂಪು ಬಣ್ಣವನ್ನು ಹೊಂದಿದೆ. ಜೈನ ಮುನಿಯನ್ನು ಹಳದಿ ಮತ್ತು ಬಿಳಿ ಮಿಶ್ರಿತ ಬಣ್ಣದಿಂದ ಸಂಪೂರ್ಣವಾಗಿ ಲೇಪಿಸಲಾಗಿದೆ. ಈ ಕಲಾಕೃತಿಯ ಹಿನ್ನೆಲೆಯು ಕಂದು ಮಿಶ್ರಿತ ಹಸಿರು ಬಣ್ಣವನ್ನು ಹೊಂದಿದೆ. ಈ ಕಲಾಕೃತಿಯು ಸಾಂಪ್ರದಾಯವಲ್ಲದ (ಶಿಷ್ಟಪದ) ನೈಜ ಶೈಲಿಗೆ ಹತ್ತಿರವಿದ್ದಂತೆ ಕಂಡುಬರುತ್ತದೆ.







ಕಾರ್ಕಳ ಜೈನ ಮಠದ ಭಿತ್ತಿಚಿತ್ರಗಳು



೩. ಸರಸ್ವತಿ ಚಿತ್ರ

ಎಡ ಕೋಣೆಯ ಅಂಕಣದ ೨೪ ತೀರ್ಥಂಕರರ ಕೆಳಭಾಗದ ಪಟ್ಟಿಕೆಯಲ್ಲಿ ಸರಸ್ವತಿಯ ಆಕಾರವನ್ನು ಹೋಲುವ ಚಿತ್ರವನ್ನು ಕಾಣಬಹುದಾಗಿದೆ. ಪ್ರಸ್ತುತ ಮಠದ ಭಿತ್ತಿ ಚಿತ್ರಗಳು ಪ್ರಾಕೃತಿಕ ಆಪತ್ತಿನಿಂದ ಹಾಳಾಗಿರುವುದರಿಂದ ಕೆಲವು ಚಿತ್ರಗಳನ್ನು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗುವದಿಲ್ಲ. ಆದರೆ ಸುಮಾರು ಹತ್ತು ವರ್ಷದ ಹಿಂದೆ ಡಾ.ಅ.ಲ.ನರಸಿಂಹನರವರು ತಮ್ಮ ಪಿಎಚ್.ಡಿ. ಪ್ರಬಂಧವಾದ "ಕರ್ನಾಟಕ ಭಿತ್ತಿಚಿತ್ರ ಪರಂಪರೆ"ಯಲ್ಲಿ ಈ ಕಲಾಕೃತಿಯನ್ನು ಕೈಲಿ ವೀಣೆ ಹಿಡಿದ ಸರಸ್ವತಿ ಎಂದು ಗುರುತಿಸುವುದನ್ನು ಕಾಣಬಹುದಾಗಿದೆ. ಶಿಷ್ಟಪದ ಶೈಲಿಯನ್ನು ಹೊಂದಿರುವ ಈ ಕಲಾಕೃತಿಯ ಹಿನ್ನೆಲೆಯು ಹಳದಿ ಬಣ್ಣವನ್ನು ಹೊಂದಿದೆ. ಸರಸ್ವತಿಯ ಎಡ ಮತ್ತು ಬಲಭಾಗದಲ್ಲಿ ಸೇವಕಿಯರ ರೂಪಗಳು ಮೂಡಿವೆ.

ಜೈನಮಠ ಮೂಡುಬಿದಿರೆ

ಮೂಡಬಿದಿರೆ ಮಠವನ್ನು ಇತಿಹಾಸ ಪ್ರಸಿದ್ಧ ಶ್ರವಣಬೆಳಗೊಳದ ಜೈನಮಠದ ಶಾಖಾಮಠ ಎಂಬ ಅರ್ಥದಲ್ಲಿ ಗುರ್ತಿಸುವ ಒಂದು ಪರಂಪರೆ ಇದೆ. ಈ ಮಠದಲ್ಲಿ ನೂರಾರು ಭಿತ್ತಿಚಿತ್ರಗಳನ್ನು ಹೊಂದಿದ್ದು ಪ್ರಸ್ತುತ ಪ್ರಬಂಧದಲ್ಲಿ ಕೆಲವು ಚಿತ್ರಗಳನ್ನು ಮಾತ್ರ ಇಲ್ಲಿ ಚರ್ಚಿಸಲಾಗಿದೆ.

೧. ದ್ವಾರ ಪಾಲಕರು

ಜೈನಮಠದ ಗರ್ಭಗುಡಿಯ ಪ್ರವೇಶದ್ವಾರದ ಎರಡೂ ಬದಿಯಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರು ನಾಲ್ಕು ಭುಜಗಳನ್ನು ಹೊಂದಿದ್ದು ಎರಡು ಕೈಯಲ್ಲಿ ಕಮಲದ ಹೂವನ್ನು ಹೊಂದಿದ್ದಾರೆ. ಸುಂದರವಾದ ಮಂಟಪದ ವಿನ್ಯಾಸ ಹಿನ್ನಲೆಯನ್ನು ಹೊಂದಿರುವ ದ್ವಾರಪಾಲಕರು ಮೈಸೂರು ಶೈಲಿ ಸಾಂಪ್ರದಾಯಿಕ ಆಭರಣಗಳನ್ನು ಹೊಂದಿದ್ದಾರೆ. ಹಳದಿ, ಕೆಂಪು, ಹಸಿರು ಬಣ್ಣದಲ್ಲಿ ಸಂಯೋಜಿಸಲಾದ ಕಲಾಕೃತಿಗಳು ಅತ್ಯಂತ ಸೂಕ್ಷ್ಮವಾದ ನೈಜವಾದ ಬಣ್ಣದಲ್ಲಿ ರೇಖೆಯನ್ನು ಹೊಂದಿರುವುದು ಕಂಡುಬರುತ್ತದೆ. ಗರ್ಭಗುಡಿಯ ಎರಡೂ ಬದಿಯಲ್ಲಿರುವ ಈ ಕಲಾಕೃತಿಗಳು ಒಂದನ್ನೊಂದು ಅನುಕರಿಸುವಂತಿವೆ.

೨. ಬಲಭಾಗದ ಗೋಡೆಯ ಮೇಲಿನ ಭಿತ್ತಿಚಿತ್ರಗಳು

ಗರ್ಭಗುಡಿಯ ಬಲಭಾಗದಲ್ಲಿ ಇರುವ ಗೋಡೆಯ ಮೇಲೆ ಮೂರು ಪಟ್ಟಿಕೆಗಳನ್ನು ಹೊಂದಿರುವ ಭಿತ್ತಿಚಿತ್ರಗಳು ಕಂಡುಬರುತ್ತವೆ. ಮಧ್ಯಭಾಗದ ಪಟ್ಟಿಕೆಯಲ್ಲಿ ಚೌಕಾಕಾರದ ಚೌಕಟ್ಟಿನಲ್ಲಿ ಸಂಯೋಜನೆಯನ್ನು ಹೊಂದಿದ್ದು ತೀರ್ಥಂಕರರಿಗೆ ಸಮವಸರಣದ ಚಿತ್ರವಾಗಿದೆ. ಹಲವು ವೃತ್ತಗಳ ಸಂಯೋಜನೆಯನ್ನು ಹೊಂದಿದ್ದು ತೀರ್ಥಂಕರರಿಗೆ ಹೋಲುವಂತೆ ಹಾಗೂ ಜೈನಧರ್ಮದ ಕೆಲವು ಸಾಂಪ್ರದಾಯಿಕ ಲಾಂಛನವನ್ನು ಚಿತ್ರಿಸಲಾಗಿದೆ. ಮಾನಸ್ಥಂಭಗಳು ಹಾಗೂ ಬಸದಿಗಳು ಮಂಟಪಗಳು ಪ್ರಾಣಿ-ಪಕ್ಷಿಗಳ ಚಿತ್ರಗಳನ್ನು ಕಾಣಬಹುದಾಗಿದೆ. ಈ ಸಂಯೋಜನೆಯಲ್ಲಿ ಪಟ್ಟಿಕೆಯ ಸುತ್ತಲೂ ಹೂಬಳ್ಳಿಯ ನಕ್ಷಾಚಿತ್ರವನ್ನು ಹೊಂದಿದೆ. ಈ ಕಲಾಕೃತಿಯ ಎಡ ಮತ್ತು ಬಲಭಾಗದಲ್ಲಿ ಎರಡು ಎತ್ತರದ ಮಾನಸ್ಥಂಭದ ಚಿತ್ರವನ್ನು ಹೊಂದಿದೆ. ಈ ಮಾನಸ್ಥಂಭವನ್ನು ಸಾಂಪ್ರದಾಯಿಕವಾಗಿ ನೈಜವಾದ ಬಾಹ್ಯರೇಖೆಯೊಂದಿಗೆ ಚಿತ್ರಿಸಲಾಗಿದೆ.

೩. ಎಡಭಾಗದ ಗೋಡೆಯ ಮೇಲಿನ ಭಿತ್ತಿಚಿತ್ರಗಳು

ಗರ್ಭಗುಡಿಯ ಎಡಬದಿಯಲ್ಲಿ ರಚಿಸಿರುವ ಚಿತ್ರವು ಚೌಕಾಕಾರದ ಪಟ್ಟಿಕೆಯಲ್ಲಿ ದೊಡ್ಡ ವೃತ್ತವನ್ನು ಹೊಂದಿದ್ದು ಅದರಲ್ಲಿ ನಾಲ್ಕು ದೊಡ್ಡ ವೃತ್ತದ ಹಾಗೂ ಒಂದು ಸಣ್ಣ ವೃತ್ತದ ಸಮವಸರಣದ ಚಿತ್ರಗಳನ್ನು







ಮೂಡಬಿದರೆಯ ಭಿತ್ತಿಚಿತ್ರಗಳು



ಸಾಲಿಗ್ರಾಮ ಜೈನ ಭಿತ್ತಿಚಿತ್ರಗಳು



ಹೊಂದಿದೆ. ಈ ಕಲಾಕೃತಿಯಲ್ಲಿ ತೀರ್ಥಂಕರರ ಸಮವಸರಣ ಚಿತ್ರವಾಗಿದ್ದು, ಮಾನಸ್ಥಂಭ ಹಾಗೂ ಮಂಟಪದ ವಿನ್ಯಾಸವನ್ನು ಸೂಕ್ಷ್ಮ ಕಿರು ಚಿತ್ರಗಳಿಗೆ ಸಂಯೋಜಿಸಲಾಗಿದೆ. ಕೆಂಪು ಹಾಗೂ ಹಳದಿ, ಹಸಿರು ಬಣ್ಣವನ್ನು ಮುಖ್ಯವಾಗಿ ಈ ಚಿತ್ರಗಳಿಗೆ ಬಳಸಲಾಗಿದೆ.

**೪. ಎರಡು ಮಹಾವೃಕ್ಷಗಳು**

ಮಠದ ಗರ್ಭಗುಡಿಯ ಪ್ರವೇಶದ ಎಡಭಾಗದಲ್ಲಿ ಗೋಡೆಯ ಮೇಲೆ ದೊಡ್ಡದಾದ ಎರಡು ಮಹಾವೃಕ್ಷಗಳನ್ನು ಹೊಂದಿದ್ದು ವೃಕ್ಷಗಳನ್ನು ದೊಡ್ಡ ಪಟ್ಟಿಕೆಯಲ್ಲಿ ಕೆಂಪು ಹಿನ್ನೆಲೆಯನ್ನು ಹೊಂದಿರುವ ಪಟ್ಟಿಕೆಯ ಎಡ ಮತ್ತು ಬಲಭಾಗದಲ್ಲಿ ಸಂಯೋಜಿಸಲಾಗಿದೆ. ಮಧ್ಯಭಾಗದಲ್ಲಿ ಮಂಟಪದ ಚಿತ್ರವನ್ನು ಹೊಂದಿದೆ. ಈ ಪಟ್ಟಿಕೆಯ ಮಧ್ಯಭಾಗದಲ್ಲಿ ಮಠದ ಭಟ್ಟಾರಕರು ಕೂರುವ ಪೀಠವಿದ್ದು, ಅದರಲ್ಲಿ ಕೆಲವು ಸಾಂಕೇತಿಕ ಅಂಶಗಳನ್ನು ಸಂಯೋಜಿಸಲಾಗಿದೆ. ಹಿನ್ನೆಲೆಯಲ್ಲಿ ಇರುವ ಎರಡು ವೃಕ್ಷಗಳು ದಟ್ಟ ಹಸಿರು ಬಣ್ಣದ ಎಲೆಗಳನ್ನು ಹೊಂದಿದ್ದು ಹಳದಿ ಬಣ್ಣದ ರೆಂಬೆ ಮತ್ತು ಕಾಂಡವನ್ನು ಹೊಂದಿದೆ. ಮರದ ಕೆಳಭಾಗದಲ್ಲಿ ಸುಂದರವಾದ ಜ್ಯಾಮಿತಿಯ ನಕ್ಷಾಚಿತ್ರಗಳಿಂದ ಸಂಯೋಜನೆಯನ್ನು ಹೊಂದಿದ ಪೀಠವಿದೆ. ಬದಿಯಲ್ಲಿ ಇರುವ ವೃಕ್ಷಗಳು ಒಂದನ್ನೊಂದು ಹೋಲುವಂತೆ ಚಿತ್ರಿಸಲು ಕಲಾವಿದ ಪ್ರಯತ್ನಿಸಿರುವುದನ್ನು ಇಲ್ಲಿ ಕಾಣಬಹುದಾಗಿದೆ.

**೫. ಪಾಂಡವರ ಚಿತ್ರ ಹಾಗೂ ರಾಮ ಲಕ್ಷ್ಮಣರ ಚಿತ್ರ**

ಗರ್ಭಗುಡಿಯ ಪ್ರವೇಶದ ಮೊದಲನೆಯ ದ್ವಾರದಲ್ಲಿ ಎರಡು ಬದಿಯಲ್ಲಿ ಸಣ್ಣದಾದ ಕೊಠಡಿಗಳನ್ನು ಹೊಂದಿದೆ. ಗರ್ಭಗುಡಿಯ ಮುಖ ಮಾಡಿರುವ ಈ ಕೊಠಡಿಗಳಲ್ಲಿ ಪ್ರವೇಶದ ಬಲಭಾಗದ ಕೊಠಡಿಯಲ್ಲಿ ಪಾಂಡವರೊಂದಿಗೆ ದ್ರೌಪದಿಯನ್ನು ಹೊಂದಿರುವ ಚಿತ್ರವನ್ನು ಕಾಣಬಹುದಾಗಿದೆ. ಈ ಕಲಾಕೃತಿಯಲ್ಲಿ ದ್ರೌಪದಿಯ ಧರ್ಮರಾಯನ ಎಡಭಾಗದಲ್ಲಿ ಕುಳಿತಿದ್ದು ಸುಂದರವಾದ ಸಿಂಹಾಸನವನ್ನು ಹೊಂದಿದೆ. ಧರ್ಮರಾಯನ ಮತ್ತು ದ್ರೌಪದಿಯ ಸೇವೆಗಾಗಿ ನಿಂತಿರುವ ಅರ್ಜುನ ಬಿಲ್ಲನ್ನು ಹಿಡಿದಿದ್ದಾನೆ. ಹಾಗೂ ಭೀಮ ಗದೆಯನ್ನು ಹಿಡಿದಿದ್ದಾನೆ. ನಕುಲ ಸಹದೇವರಿಬ್ಬರು ಸಿಂಹಾಸನದ ಎಡ ಮತ್ತು ಬಲಭಾಗದಲ್ಲಿ ನಿಂತಿದ್ದಾರೆ. ಈ ಕಲಾಕೃತಿಯಲ್ಲಿ ವಿಶೇಷವಾಗಿ ಪಾಂಡವರು ಉದ್ದ ತೋಳಿನ ಅಂಗಿಯನ್ನು ಧರಿಸಿದ್ದು, ದಟ್ಟ ಮಿಸೆಯುಳ್ಳವರಾಗಿದ್ದಾರೆ. ಸಿಂಹಾಸನದ ಮೇಲೆ ಕುಳಿತಿರುವ ಧರ್ಮರಾಯ ಮತ್ತು ದ್ರೌಪದಿಯ ಮೇಲಭಾಗದಲ್ಲಿ ಕೆಂಪು ಛತ್ರಿಯನ್ನು ಹೊಂದಿದೆ. ದ್ರೌಪದಿಯು ಕೆಂಪು ಸೀರೆಯನ್ನು ಧರಿಸಿದ್ದು ಈ ಕಲಾಕೃತಿಯು ಮೈಸೂರು ಶೈಲಿಯ ಸಾಂಪ್ರದಾಯಿಕ ಚಿತ್ರಗಳ ಲಕ್ಷಣ ಇಲ್ಲಿ ಹೊಲುತ್ತದೆ. ಪ್ರವೇಶದ ಬಲಭಾಗದ ಕೊಠಡಿಯಲ್ಲಿ ಸೀತೆ ಸಮೇತನಾಗಿರುವ ರಾಮ ಹಾಗೂ ಲಕ್ಷ್ಮಣ ಹನುಮಂತರನ್ನು ಹೊಂದಿದೆ. ಈ ಕಲಾಕೃತಿಯ ಮುಂದೆ ಕೆಲವು ವಸ್ತುಗಳು ಸಂಗ್ರಹಿಸಿಟ್ಟಿರುವುದರಿಂದ ಇದು ಮರೆಯಾಗಿರುವುದನ್ನು ಮಠದಲ್ಲಿ ಕಾಣಬಹುದಾಗಿದೆ.

ಮೂಡಬಿದಿರೆಯ ಜೈನಮಠವು ಕೇವಲ ಒಂದು ಪ್ರಾರ್ಥನಾ ಮಂದಿರವಾಗದೆ ಒಂದು ಸುಂದರ ಕಲಾಗ್ಯಾಲರಿಯಂತೆ ಇರುವುದನ್ನು ಕಾಣಬಹುದಾಗಿದೆ. ಹಾಗೂ ಈ ಮಠದಲ್ಲಿ ಇರುವ ಸೀತಾರಾಮ ಹಾಗೂ ಪಾಂಡವರ ಚಿತ್ರಗಳು ಒಂದು ವಿಶಿಷ್ಟ ಧರ್ಮ ಸಮನ್ವಯತೆಯನ್ನು ಕಾಣಬಹುದಾಗಿದೆ. ಹಿಂದೂ ಧರ್ಮ ಹಾಗೂ ಜೈನ ಧರ್ಮ ಒಂದೆ ಎನ್ನುವ ಹಾಗೆ ಪ್ರತಿಪಾದಿಸುತ್ತದೆ. ಈ ಭಿತ್ತಿಚಿತ್ರಗಳು ಧಾರ್ಮಿಕ ತತ್ವವೊಂದನ್ನು ಮನಮುಟ್ಟುವಂತೆ ಚಿತ್ರಿಸಿರುವಂತೆ ತೋರುತ್ತದೆ.

**ಜೈನ ಶ್ರಾವಕರ ಮನೆಯ ಭಿತ್ತಿಚಿತ್ರಗಳು**

ಕರ್ನಾಟಕದಲ್ಲಿ ಜೈನ ಧರ್ಮದ ಅನುಯಾಯಿಗಳ ಹಾಗೂ ಜಿನಧರ್ಮದ ಚಟುವಟಿಕೆಗಳ ಕೇಂದ್ರವೆನಿಸಿದ ಜಿನಗಾರ ಬಸದಿ ಮಠಗಳು ಅತ್ಯಧಿಕವಾಗಿದ್ದವು. ಸಾಮಾನ್ಯ ಜೈನ ಶ್ರಾವಕರೂ ತಮ್ಮ ಮನೆಯಲ್ಲಿ ಜೈನ



ಧರ್ಮಕ್ಕೆ ಸಂಬಂಧಿಸಿದಂತೆ ಅನೇಕ ಭಿತ್ತಿಚಿತ್ರಗಳನ್ನು ಬರೆಸಿಕೊಂಡಿದ್ದಾರೆ. ಮನೆಯು ಅಲಂಕಾರಿಕವಾಗಿ ಇರುವ ಹಿನ್ನೆಲೆಯಲ್ಲಿ ಜಿನ ಧರ್ಮದ ತತ್ವಗಳು ಮೂಡಿವೆ.

**೧. ಸುಬ್ಬಯ್ಯ ಶಾಸ್ತ್ರಿಗಳ ಮನೆ, ಬಜಗೋಳಿ**

ಕಾರ್ಕಳದಿಂದ ಹತ್ತು ಕಿ.ಮೀ.ದೂರದಲ್ಲಿ ಇರುವ ಬಜಗೋಳಿಯಲ್ಲಿ ದಿ.ಸುಬ್ಬಯ್ಯ ಶಾಸ್ತ್ರಿಗಳ ಮನೆಯ ಆವರಣದಲ್ಲಿ ಭೂತಸ್ಥಾನದ ಮುಂದಿನ ಹಜಾರದಲ್ಲಿ ಗೋಡೆಯ ಮೇಲೆ ಭಿತ್ತಿ ಚಿತ್ರಗಳನ್ನು ಕಾಣಬಹುದು. ಗೋಡೆಯ ಮೇಲೆ ಪಾರ್ಶ್ವಗಳಲ್ಲಿ ಸುಮಾರು ಎಂಟು ಅಡಿ ಎತ್ತರದಲ್ಲಿ ಉದ್ದಕ್ಕೂ ಚಿಕ್ಕ ಚಿಕ್ಕದಾಗಿ ಎಪ್ಪತ್ತೇಳು ಮಂದಿ ಜೈನ ಮುನಿಗಳನ್ನು ಬಿಡಿಸಿದ್ದಾರೆ. ಇವರಲ್ಲಿ ಇಪ್ಪತ್ತೆರಡು ಮಂದಿ ತೀರ್ಥಂಕರರು ಐದು ಮಂದಿ ಪರಿಮೇಷ್ಠಿಗಳ ವಿನಾ ಎಲ್ಲರು ನಗ್ನರಾಗಿ ಖಡ್ಗಾಸನದಲ್ಲಿ ನಿಂತಿದ್ದಾರೆ. ತೀರ್ಥಂಕರರ ಅವರ ಕೆಳಗೆ ಹೆಸರು ಬರೆದಿದ್ದಾರೆ. ಪ್ರತಿಯೊಬ್ಬರನ್ನು ಕಂಬಗಳಿಂದ ಬೇರ್ಪಡಿಸಿದ್ದು ಕೆಳಗೆ ಉದ್ದನೆಯ ಬಿಳಿಯ ಸಾಲಿನ ಪಟ್ಟಿಕೆಯನ್ನು ಹೊಂದಿದೆ. ಎದುರು ಗೋಡೆಯ ಮೇಲೆ ಮಧ್ಯದಲ್ಲಿ ಮೂರು ದೊಡ್ಡ ಅಂಕಣದಲ್ಲಿ ಚಿತ್ರಗಳು ಈ ರೀತಿ ಇವೆ.

**೧. ಸರಸ್ವತಿಯ ಚಿತ್ರ**

ಹೂ ಬಳ್ಳಿಗಳಿಂದ ಚೌಕಾಕಾರವಾಗಿರುವ ಚೌಕಟ್ಟನ್ನು ಹೊಂದಿರುವ ಸ್ಥಳದಲ್ಲಿ ವೀಣಾಪಾಣಿ ಸರಸ್ವತಿ ಕುಳಿತಿದ್ದು ಶಿಷ್ಟಪದ ಶೈಲಿಗೆ ಭಿನ್ನವಾಗಿರುವ ನೈಜ ಶೈಲಿಯನ್ನು ಹೊಂದಿರುವ ಸರಸ್ವತಿಯ ಹಿನ್ನೆಲೆಯನ್ನು ರಮಣೀಯ ನೈಸರ್ಗಿಕ ದೃಶ್ಯದಿಂದ ಹಾಗೂ ಎಡಭಾಗದಲ್ಲಿ ನವಿಲನ್ನು ಹೊಂದಿರುವ ಸರಸ್ವತಿಯ ಅರ್ಧಪರ್ಯಂಕಾಸನದಲ್ಲಿ ಕುಳಿತಿದ್ದು ನಾಲ್ಕು ಭುಜಗಳು ವೀಣೆಯನ್ನು ಹೊಂದಿದ್ದಾಳೆ. ಉತ್ತಮವಾದ ಕ್ಯಾಲೆಂಡರ ರೀತಿಯ ಸಂಯೋಜನೆಯನ್ನು ಅಂದಿನ ಕಲಾವಿದರು ಚಿತ್ರಿಸಿದ್ದಾರೆ.

**೨. ಜಿನದತ್ತರಾಯ ಮುನಿಗೆ ಭಿಕ್ಷೆ ನೀಡುತ್ತಿರುವ ದೃಶ್ಯ**

ಸರಸ್ವತಿಯ ಎಡಭಾಗದ ಅಂಕಣದಲ್ಲಿ ಇರುವ ಚಿತ್ರವು ಇದಾಗಿದೆ. ಕಾರ್ಕಳದ ಗೊಮ್ಮಟನನ್ನು ಸ್ಥಾಪಿಸಿದ ಪಾಂಡ್ಯರಾಜನ ವಂಶಜ ಭೈರವರಾಯ ಹಾಗೂ ಆತನ ಕುಲಗುರು ಲಲಿತ ಕೀರ್ತಿಚಾರ್ಯರು ಇರಬಹುದಾಗಿದೆ. ಭೈರವ ರಾಜನು ಮುನಿಗೆ ಭಿಕ್ಷೆ ನೀಡುತ್ತಿರುವುದು ಜೈನ ಮುನಿ ತನ್ನ ಎರಡೂ ಕೈಗಳಿಂದ ಸ್ವೀಕರಿಸುತ್ತಿರುವುದನ್ನು ಕಾಣಬಹುದು. ರಾಜನ ಹಿನ್ನಲೆಯ ಪಕ್ಕದಲ್ಲಿ ಸೇವಕ ಹಾಗೂ ಸ್ತ್ರೀ ಎರಡು ಕೈಯಲ್ಲಿ ನೀರಿನ ತಂಬಿಗೆ ಹಿಡಿದು ನಿಂತುಕೊಂಡಿರುವುದು ಹಾಗೂ ಮುನಿ ಮತ್ತು ರಾಜನ ನಡವಲ್ಲಿ ಮೂರು ಕಾಲುಗಳ ಎತ್ತರದ ಪೀಠವನ್ನು ಕಾಣಬಹುದಾಗಿದೆ. ಮುನಿಯ ಹಿಂಭಾಗದಲ್ಲಿ ಹುಲಿ ಮತ್ತು ಹಸುವು ಒಂದೇ ಪಾತ್ರೆಯಲ್ಲಿ ಆಹಾರ ಸೇವಿಸುತ್ತಿರುವುದು ತುಂಬ ವಿಶಿಷ್ಟವಾದ ಒಂದು ಆಶ್ಚರ್ಯಕರ ಸಂಗತಿಯಾಗಿದೆ. ಈ ಚಿತ್ರ ಸಂಯೋಜನೆಯಲ್ಲಿ ದಟ್ಟ ನಿಸರ್ಗವನ್ನು ಹಾಗೂ ಸುಂದರವಾದ ಪರಿಸರವನ್ನೂ ಕಲಾತ್ಮಕವಾಗಿ ಚಿತ್ರಿಸಲಾಗಿದೆ.

**೩. ಜಿನದತ್ತ ರಾಯ ಕುದುರೆಯನ್ನು ಕಟ್ಟಿ ಮಲಗಿರುವ ದೃಶ್ಯ**

ಗೋಡೆಯ ಸಾಲಿನಲ್ಲಿ ೩ನೇ ಚಿತ್ರವಾಗಿದ್ದು. ಜಿನದತ್ತರಾಯ ಮರದ ಕೆಳಗೆ ಹಸಿರು ಹುಲ್ಲಿನ ಮೇಲೆ ಸುಖಕರವಾಗಿ ನಿದ್ರಿಸುತ್ತಿದ್ದು ಈ ಚಿತ್ರವು ಒಂದು ವಿಶಿಷ್ಟವಾದ ದಂತ ಕಥೆಯನ್ನು ಹೇಳುವ ಹಾಗೆ ಇದೆ. ಒಂದು ಮರಕ್ಕೆ ಕುದುರೆಯನ್ನು ಕಟ್ಟಲಾಗಿದ್ದು ಸುಂದರವಾದ ನಿಸರ್ಗದಲ್ಲಿ ನೀರಿನ ಕೊಳವಿರುವ ಸ್ಥಳವಾಗಿದೆ. ಹಾಗೂ ಮತ್ತೊಂದು ಮರಕ್ಕೆ ಚೀಲವೊಂದನ್ನು ತೂಗುಹಾಕಿದ್ದು ಚೀಲದಲ್ಲಿ ಮಾಯಾರೂಪಿನಲ್ಲಿ ಯಕ್ಷಿ ಇದ್ದಾಳೆ. ಎಂದು ತಿಳಿದು ಬರುತ್ತದೆ. ಇಂತಹ ವಿಷಯವನ್ನು ಆಧರಿಸಿ ಈ ಚಿತ್ರ ಸಂಯೋಜಿಸಲಾಗಿದೆ.



ಬಜಗೋಳಿಯ ಸುಬ್ಬಯ್ಯಶಾಸ್ತ್ರಿಗಳ ಮನೆಯಲ್ಲಿನ ಭಿತ್ತಿಚಿತ್ರಗಳು









ಬಜಗೋಳಿಯ ಸುಬ್ಬಯ್ಯ ಶಾಸ್ತ್ರಿಗಳ ಮನೆಯ ಭಿತ್ತಿಚಿತ್ರಗಳು



೪. ಐದು ಜನ ಪರಮೇಷ್ಠಿಗಳು ಪದ್ಮಾಸನದಲ್ಲಿ ಕುಳಿತಿರುವುದು

ಭಿತ್ತಿ ಚಿತ್ರಗಳ ಸಮೂಹದ ಮಧ್ಯಭಾಗದಲ್ಲಿ ಕಂಡು ಬರುವ ಉದ್ದದ ಪಟ್ಟಿಕೆಯಲ್ಲಿ ಎಪ್ಪತ್ತೆಂಟು ಮಂದಿ ಜೈನಮುನಿಗಳನ್ನು ಬಿಡಿಸಿದ್ದಾರೆ. ಅವುಗಳಲ್ಲಿ ವಿಶೇಷವಾಗಿ ಐದು ಜನ ಜೈನ ಪರಮೇಷ್ಠಿಗಳು ಪದ್ಮಾಸನದಲ್ಲಿ ಕುಳಿತಿರುವ ದೃಶ್ಯವನ್ನು ಕಾಣಬಹುದು. ಹಳದಿ ಬಣ್ಣದ ಪೀಠದ ಮೇಲೆ ಪದ್ಮ ವರ್ಣದ ತಾವರೆ ಹೂವಿನ ಮೇಲೆ ನೀಲಿ ಬಣ್ಣದ ಮೈಬಣ್ಣವನ್ನು ಹೊಂದಿರುವ ಪರಮೇಷ್ಠಿಗಳ ಚಿತ್ರಣವನ್ನು ಚಿತ್ರಿಸಿದ್ದಾರೆ. ಈ ಐದು ಪರಮೇಷ್ಠಿಗಳ ಹಿನ್ನೆಲೆಯು ದಟ್ಟ ಹಸಿರು ಬಣ್ಣಗಳಿಂದ ಲೇಪಿಸಲಾಗಿದೆ. ಈ ಭಿತ್ತಿಚಿತ್ರಗಳ ಸಮೂಹದಲ್ಲಿ ಈ ಐದು ಜನ ಪರಮೇಷ್ಠಿಗಳಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿದ್ದಾರೆ ಎಂಬುವುದು ಈ ಚಿತ್ರಗಳಿಂದ ತಿಳಿದು ಬರುತ್ತದೆ.

ಇದೇ ಸಾಲಿನಲ್ಲಿ ಬರುವ ಖಡ್ಗಾಸನದಲ್ಲಿ ನಿಂತಿರುವ ತೀರ್ಥಂಕರರ ಚಿತ್ರವನ್ನು ಸಂಪೂರ್ಣವಾಗಿ ಹಳದಿ ಬಣ್ಣದಿಂದ ಲೇಪಿಸಿದ ಹಿನ್ನೆಲೆಯಲ್ಲಿ ನೆರಳನ್ನು ಕಪ್ಪು ಬಣ್ಣದಲ್ಲಿ ಚಿತ್ರಿಸಿದೆ. ಈ ಭಿತ್ತಿಚಿತ್ರಗಳ ಕೆಳಭಾಗ ಮತ್ತು ಚಿತ್ರದ ಅಂಚುಗಳನ್ನು ಹೂಬಳ್ಳಿಯ ನಕ್ಷಾಚಿತ್ರಗಳನ್ನು ಕಪ್ಪು, ಹಸಿರು, ಕೆಂಪು ವರ್ಣದಿಂದ ರೇಖಾ ಪ್ರಧಾನವಾಗಿ ಚಿತ್ರಿಸಲಾಗಿದೆ. ಈ ಎಲ್ಲಾ ಚಿತ್ರಗಳು ನೈಜಶೈಲಿಯ ಚಿತ್ರಗಳಿಗೆ ಹತ್ತಿರವಿದ್ದು ನೈಸರ್ಗಿಕ ವರ್ಣಗಳನ್ನು ಬಳಸಿದಂತೆ ಕಾಣುವದಿಲ್ಲ.

**ಪಂಡಿತರ ಮನೆಯ ಭಿತ್ತಿಚಿತ್ರಗಳು (ನೆಲ್ಲಿಕಾರು)**

ಕಾರ್ಕಳದಿಂದ ಸುಮಾರು ಇಪ್ಪತ್ತು ಕಿ.ಮೀ. ದೂರದಲ್ಲಿ ಇರುವ ನೆಲ್ಲಿಕಾರಿನ ಜೈನ ಪೇಟೆಯಲ್ಲಿನ ದೊಡ್ಡ ಮನೆ ಮತ್ತು ಪಂಡಿತರ ಗೋಡೆಗಳ ಮೇಲೆ ದೊಡ್ಡ ಪ್ರಮಾಣದಲ್ಲಿ ಜೈನಧರ್ಮಕ್ಕೆ ಸಂಬಂಧಿಸಿದ ಭಿತ್ತಿಚಿತ್ರಗಳನ್ನು ಕಾಣಬಹುದಾಗಿದೆ. ಈ ಮನೆಯನ್ನು ಅಲಂಕರಣದ ದೃಷ್ಟಿಯಿಂದ ಅಥವಾ ಧಾರ್ಮಿಕ ದೃಷ್ಟಿಯಿಂದಲೂ ರಚಿಸಿರುವ ಭಿತ್ತಿಚಿತ್ರಗಳು ತುಂಬ ಸುಂದರವಾಗಿವೆ. ಪಂಡಿತರ ಮನೆಯ ಮೊದಲನೆಯ ಅಂತಸ್ತಿನ ಹೊರಭಾಗದ(ಬಾಲ್ಕನಿ)ದಲ್ಲಿ ಭಿತ್ತಿಚಿತ್ರಗಳಿದ್ದು ಇಲ್ಲಿಯೂ ಜೈನಶಾಸ್ತ್ರಕ್ಕೆ ಸಂಬಂಧಿಸಿದ ಚಿತ್ರಗಳು ಪಂಡಿತರ ಮನೆಯಲ್ಲಿ ಕಾಣಬಹುದಾಗಿದೆ. ಈ ಮನೆಯ ತುಂಬಾ ಇರುವ ಚಿತ್ರಗಳು ಹಳೆಯದಾಗಿದ್ದು ಹಾಳಾಗಿವೆ. ಪ್ರಸ್ತುತ ಈ ಮನೆಯ ಪುನರ್ ನಿರ್ಮಾಣಕ್ಕಾಗಿ ಮನೆಯನ್ನು ಕೆಡುವ ಕಾರ್ಯ ನಡೆಯುತ್ತಿದೆ. ಈ ಮನೆಯಲ್ಲಿನ ಕೆಲವು ಭಿತ್ತಿ ಚಿತ್ರಗಳನ್ನು ಕುರಿತು ಇಲ್ಲಿ ವಿವರಿಸಲಾಗಿದೆ.

**೧. ಜೈನಮುನಿಗೆ ಭಿಕ್ಷೆ ನೀಡುವ ಚಿತ್ರ**

ಜೈನ ಮುನಿಗೆ ಭಿಕ್ಷೆ ನೀಡುತ್ತಿರುವ ದೃಶ್ಯವು ಪಂಡಿತರ ಮನೆಯ ಮೊದಲ ಅಂತಸ್ತಿನ ಜೈನ ಬೀದಿಯ ಹೊರಭಾಗದ ಬಾಲ್ಕನಿಯಲ್ಲಿ ಚಿತ್ರಿಸಿದ್ದು, ಬೀದಿಯಲ್ಲಿ ಓಡಾಡುತ್ತಿರುವವರಿಗೆ ಕಾಣುವಂತೆ ಕಲಾತ್ಮಕವಾಗಿ ಚಿತ್ರಿಸಿದ್ದಾರೆ. ಜೈನ ಮುನಿಗೆ ಭಿಕ್ಷೆ ನೀಡಲು ಬಂದಿರುವ ರಾಜನು ಹಾಗೂ ಅವನ ಸಹಾಯಕನಾಗಿ ಇರುವ ಮತ್ತೊಬ್ಬ ವ್ಯಕ್ತಿ ಬಹುಶಃ ಮಂತ್ರಿಯಾಗಿರಬಹುದಾಗಿದೆ. ಮಂತ್ರಿಯು ತಂಬಿಗೆಯನ್ನು ಹಿಡಿದುಕೊಂಡಿದ್ದು ರಾಜನಿಗೆ ಸಹಾಯಕನಾಗಿದ್ದಾನೆ. ರಾಜನು ಜಿನಮುನಿಗೆ ಭಿಕ್ಷೆಯನ್ನು ನೀಡುತ್ತಿದ್ದು ಜಿನಮುನಿಯು ಅದನ್ನು ತನ್ನ ಎರಡೂ ಕೈಗಳಿಂದ ಸ್ವೀಕರಿಸುತ್ತಿದ್ದಾರೆ. ನಿರ್ವಾಣ ಮೂರ್ತಿಯಾಗಿರುವ ಜಿನಮುನಿಯು ಹಳದಿ ಮೈಬಣ್ಣವನ್ನು ಹೊಂದಿದ್ದಾರೆ. ರಾಜನ ವ್ಯಕ್ತಿತ್ವವನ್ನು ಹೋಲುವಂತಹ ಆಭರಣಗಳಿಂದ ಅಲಂಕೃತನಾಗಿರುವ ರಾಜ ತುಂಬಾ ವಿನಯಪೂರ್ವಕವಾಗಿ ಜಿನಮುನಿಗೆ ಭಿಕ್ಷೆಯನ್ನು ನೀಡುತ್ತಿದ್ದಾನೆ. ಸಾಧಾರಣವಾಗಿ ಜಿನಮುನಿಗಳು ಎರಡು ಕೈಗಳಿಂದ ಆಹಾರವನ್ನು ಪಡೆಯುವ ಪದ್ಧತಿಯಿರುವುದರಿಂದ ಭಿಕ್ಷೆ ಎನ್ನುವುದಕ್ಕಿಂತ ಆಹಾರವನ್ನು ನೀಡುತ್ತಿದ್ದಾನೆ



ಎನ್ನಬಹುದಾಗಿದೆ. ಮೂರು ಕಾಲುಗಳ ಪೀಠವಿದೆ. ಅದರ ಮೇಲೆ ಆಹಾರವನ್ನು ಇಡುವದಕ್ಕಾಗಿ ಅದನ್ನು ರಚಿಸಿರಬಹುದು. (ಜಿನಮುನಿಗಳು ನಿಂತು ಊಟ ಮಾಡುವ ಪದ್ಧತಿ ಇರುವುದರಿಂದ) ಮುನಿಯ ಬಲಭಾಗದಲ್ಲಿ ಇರುವ ಮತ್ತೊಂದು ವಿಶಿಷ್ಟವಾಗಿರುವ ಚಿತ್ರ ಹಸು ಮತ್ತು ಹುಲಿ ಒಂದೇ ಕೊಪ್ಪರಿಗೆಯಲ್ಲಿ ಆಹಾರವನ್ನು ಸೇವಿಸುತ್ತಿರುವ ದೃಶ್ಯ ತಿಳಿನೀಲಿ ಬಣ್ಣದಿಂದ ಚಿತ್ರಿಸಿದ್ದು ಬಲಭಾಗದಲ್ಲಿ ಹಸು ಮತ್ತು ಹುಲಿಯು ಒಂದೆ ಕೊಪ್ಪರಿಗೆಯಲ್ಲಿ ಹಳದಿ ಬಣ್ಣದಿಂದ ಹಸುವನ್ನು ಹಾಗೂ ಹುಲಿಯನ್ನು ಕಂದು ಬಣ್ಣದ ಪಟ್ಟಿಗಳನ್ನು ಹೊಂದಿರುವ ತಿಳಿನೀಲಿ ಬಣ್ಣದ್ದಾಗಿದೆ. ನೈಜವಾದ ಬಾಹ್ಯರೇಖೆಗಳನ್ನು ಹೊಂದಿರುವ ಹಸು ಮತ್ತು ಹುಲಿಯು ಅತ್ಯಂತ ಸುಂದರವಾಗಿವೆ. ಈ ಹಸು ಮತ್ತು ಹುಲಿಯ ಸೋದರತೆಯಿಂದ ಇರುವುದು ಇನ್ನೊಂದು ವಿಶಿಷ್ಟತೆ. ದೊಡ್ಡ ಹುಲಿಯ ಬಣ್ಣವನ್ನು ಹೊಂದಿರುವ ಚಿಕ್ಕ ಮರಿ ಹುಲಿಯು ಹಸುವಿನ ಕೆಚ್ಚಲಿನಲ್ಲಿ ಹಾಲು ಕುಡಿಯುತ್ತಿರುವಂತೆ ಇದ್ದು ದೊಡ್ಡಹಸುವನ್ನು ಹೋಲುವ ಹಾಗೇ ಕರು ದೊಡ್ಡಹುಲಿಯ ಕೆಚ್ಚಲಿನ ಭಾಗದಲ್ಲಿ ಹಾಲನ್ನು ಸೇವಿಸುತ್ತಿದೆ. ಈ ದೃಶ್ಯವು ರೇಖಾಪ್ರಧಾನವಾಗಿ ವರ್ಣಸಂಯೋಜನೆಯಿಂದ ಚಿತ್ರಿಸಿದ್ದು ಈ ಸಮನ್ವಯ ತುಂಬಾ ವಿಶಿಷ್ಟವಾಗಿದೆ. ಹಸು ಮತ್ತು ಹುಲಿಯ ಹಿನ್ನಲೆ ಭಾಗದಲ್ಲಿ ವಿವಿಧ ಬಗೆಯ ಹೂವಿನ ಗಿಡಗಳನ್ನು ದೊಡ್ಡ ಪ್ರಮಾಣದಲ್ಲಿ ಚಿತ್ರಿಸಲಾಗಿದೆ. ಈ ಚಿತ್ರದ ಭಾಗದ ಹಿನ್ನೆಲೆಯಲ್ಲಿ ಬಹುಶಃ ಅರಮನೆಯ ಚಿತ್ರವಾಗಿದ್ದು ರೇಖಾ ಪ್ರಧಾನ ಹಾಗೂ ಯಥಾದರ್ಶನವನ್ನು ಗಮನಿಸಬಹುದಾಗಿದೆ. ಒಟ್ಟಿನಲ್ಲಿ ಜಿನಮುನಿ ಊಟ ಮಾಡುವ ಸನ್ನಿವೇಶ ಹಾಗೂ ಹುಲಿ, ಹಸು ಒಂದೆ ಕೊಪ್ಪರಿಗೆಯಲ್ಲಿ ಆಹಾರ ಸೇವಿಸುವ ಸನ್ನಿವೇಶ ಒಂದೇ ಗೋಡೆಯ ಮೇಲೆ ಚಿತ್ರಿಸಿರುವ ದೃಶ್ಯವಾಗಿದೆ. ಅರ್ಥಪೂರ್ಣವು ಹಾಗೂ ಸುಂದರವಾದ ವರ್ಣಚಿತ್ರದ ಸಂಯೋಜನೆಯನ್ನು ಇದು ಹೊಂದಿದೆ.

ನಂತರದ ಮುಂದಿನ ಸರಣಿಯಲ್ಲಿ ಸುಮಾರು ಆರು ಜಾಮಿತಿ ವೃತ್ತಾಕಾರದ ವಿವಿಧ ನಕ್ಷಾಚಿತ್ರಗಳನ್ನು ಹೊಂದಿದೆ. ಈ ಕಲಾಕೃತಿಗಳು ಜ್ಯಾಮಿತಿಯ ನಕ್ಷಾ ಚಿತ್ರಗಳಿಗೆ ಅನ್ವಯವಾಗಿ ವೃತ್ತಾಕಾರ ವಿವಿಧ ಬಗೆಯ ಚಿತ್ರಣಗಳನ್ನು ಕ್ರಮವಾಗಿ ಚಿತ್ರಣ ಹೊಂದಿದೆ. ಈ ಜ್ಯಾಮಿತಿಯ ನಕ್ಷೆಯಲ್ಲಿ ಕೆಂಪು ಹಳದಿ ಹಸಿರು ನೀಲಿ ಬಣ್ಣವನ್ನು ತುಂಬಿ ವಿಭಜಿಸಲಾಗಿದೆ. ಈ ಚಿತ್ರದ ಹಿನ್ನೆಲೆಯಲ್ಲಿ ಬಿಳಿಯ ಬಣ್ಣವನ್ನು ಸಂಪೂರ್ಣ ಗೋಡೆಗೆ ಲೇಪಿಸಲಾಗಿದೆ. ಈ ರೀತಿಯ ಚಿತ್ರಗಳು ಅಂದಿನ ಕಲಾವಿದರ ಜ್ಯಾಮಿತಿಯ ರಚನೆ ಮತ್ತು ಕಲಾತ್ಮಕತೆಗೆ ತಮ್ಮ ಜ್ಞಾನವನ್ನು ಬೆಳಕಿಗೆ ತರಲು ಪ್ರಯತ್ನಿಸಿದ್ದಾರೆ.

**೨. ಸೈನಿಕನ ದೃಶ್ಯ**

ಪಂಡಿತರ ಮನೆಯ ಸರಣಿ ಚಿತ್ರಗಳಲ್ಲಿ ಕೋನೆಯ ಚಿತ್ರವಾಗಿದ್ದು ಒಬ್ಬ ಸೈನಿಕನು ಬಂದುಕನ್ನು ಎಡಗೈಯಲ್ಲಿ ಹಿಡಿದುಕೊಂಡು ಕಾವಲು ಕಾಯುವಂತಹ ಸನ್ನಿವೇಶವನ್ನು ಕಾಣಬಹುದು. ಸರಳವಾಗಿ ನಿಂತಿರುವ ದೃಶ್ಯವಾಗಿದ್ದು ಕೆಂಪು ಅಂಗಿ ಮತ್ತು ಹಸಿರು ಶರಾಯಿ ಸಮವಸ್ತ್ರವನ್ನು ತೊಟ್ಟಿದ್ದು ಕೆಂಪು ಮುಂಡಾಸನ್ನು ಧರಿಸಿರುವ ದಪ್ಪ ಮೀಸೆಯನ್ನು ಹೊಂದಿದ್ದು, ದೃಢಕಾಯ ಶರೀರವನ್ನು ಹೊಂದಿರುವಂತೆ ನೋಡುವುದಕ್ಕೆ ಬ್ರಿಟೀಷ ಶೈಲಿಯ ಸೈನಿಕನನ್ನು ಹೋಲುವಂತೆ. ಸೈನಿಕನ ಮೈ ಬಣ್ಣವು ದಟ್ಟ ಹಳದಿಯನ್ನು ಹೊಂದಿದೆ. ಪಂಡಿತರ ಮನೆಯ ಭಿತ್ತಿಚಿತ್ರಗಳಲ್ಲಿ ಮೈಸೂರು ಶೈಲಿಯ ಚಿತ್ರದ ಪ್ರಭಾವವು ಕಂಡುಬರುತ್ತದೆ.

**ದೊಡ್ಡಮನೆ (ನೆಲ್ಲಿಕಾರು)**

ಜೈನಪೇಟೆ ಮತ್ತೊಂದು ಮನೆಯಾಗಿರುವ ದೊಡ್ಡಮನೆಯಲ್ಲಿ ಇರುವ ಭಿತ್ತಿ ಚಿತ್ರಗಳು ಅತ್ಯಂತ ಸುಂದರ ಹಾಗೂ ವೈವಿಧ್ಯಪೂರ್ಣವಾಗಿವೆ. ಈ ಮನೆಯನ್ನು ಸಹ ಅಲಂಕಾರಿಕ ದೃಷ್ಟಿಯಿಂದಲು ಹಾಗೂ ಧರ್ಮದ ದೃಷ್ಟಿಯಿಂದಲೂ ರಚನೆಯಾಗಿರುವ ಭಿತ್ತಿ ಚಿತ್ರಗಳನ್ನು ಕಾಣಬಹುದಾಗಿದೆ.







ನೆಲ್ಲಿಕಾರು ದೊಡ್ಡಮನೆಯಲ್ಲಿರುವ ಭಿತ್ತಿಚಿತ್ರಗಳು

ನೆಲ್ಲಿಕಾರು ದೊಡ್ಡಮನೆಯ ಭಿತ್ತಿಚಿತ್ರಗಳು











ನೆಲ್ಲಿಕಾರು ದೊಡ್ಡಮನೆಯ ಭಿತ್ತಿಚಿತ್ರಗಳು











ದೊಡ್ಡಮನೆಯ ಪ್ರವೇಶದ ಎಡಭಾಗದಲ್ಲಿ ಇರುವ ವಿಶಾಲವಾದ ಕೊಠಡಿಯಲ್ಲಿ ಪ್ರವೇಶದ ಬಲಭಾಗದಲ್ಲಿ ಕೆಲವು ಭಿತ್ತಿಚಿತ್ರಗಳನ್ನು ಕಾಣಬಹುದಾಗಿದೆ. ಗೋಡೆಯ ಉದ್ದಕ್ಕು ಮೇಲಿನ ಅಂಚಿನಲ್ಲಿ ಹೂ ಬಳ್ಳಿ ಎಲೆಗಳನ್ನು ಒಳಗೊಂಡ ನಕ್ಷಾಚಿತ್ರಣವನ್ನು ಹೊಂದಿದೆ. ಪಲ್ಲಕ್ಕಿಯುಲ್ಲಿ ಕುಳಿತಿರುವ ಜೈನಮುನಿ (ಲಲಿತ ಕೀರ್ತಿಭಟ್ಟಾರಕರು)ಮುನಿಯ ಮೇರವಣಿಗೆಯ ದೃಶ್ಯವಾಗಿದ್ದು ಸಂಗಿತ ನೃತ್ಯ ಅಷ್ಟವಾದ್ಯಗಳು ಹಾಗೂ ಧ್ವಜ, ಛತ್ರಿಯನ್ನು ಹಿಡಿದು ಬಹು ವಿಜೃಂಭಣೆಯಿಂದ ಹೊರಟ ಮೆರವಣಿಗೆಯ ದೃಶ್ಯವಾಗಿದೆ. ಸಮವಸ್ತ್ರಧಾರಿಗಳಾಗಿರುವ ಸೈನಿಕರ ರೀತಿಯಲ್ಲಿ ಇರುವ ವಾದ್ಯಗಾರರು ಹಾಗೂ ಪಲ್ಲಕ್ಕಿ ಹೊತ್ತವರನ್ನು ಕಾಣಬಹುದಾಗಿದೆ. ಮೆರವಣಿಗೆಯ ಮುಂಭಾಗದಲ್ಲಿ ಅನೆ ಹಾಗೂ ಒಂಟೆ ಮತ್ತು ಕುದುರೆಯು ಅಲಂಕಾರವಾಗಿ ಮೆರವಣಿಗೆಯಲ್ಲಿ ಸಾಗಿರುವ ದೃಶ್ಯವನ್ನು ಹೊಂದಿದೆ. ಈ ಚಿತ್ರಗಳು ತುಂಬ ನೈಜವಾಗಿ ಹಾಗೂ ರೇಖಾ ಪ್ರಧಾನವಾಗಿ ಚಿತ್ರಿಸಲಾಗಿದೆ.

ದೊಡ್ಡಮನೆಯ ಮೊದಲನೆಯ ಅಂತಸ್ತಿನಲ್ಲಿ ಬಾಲ್ಕನಿಯ ಹೊರಭಾಗದಲ್ಲಿ ವಿಶಾಲವಾದ ಗಾರೆಯ ಗೋಡೆಯ ಮೇಲೆ ಎರಡು ಮಹಾವೃಕ್ಷದ ಚಿತ್ರಗಳನ್ನು ಕಾಣಬಹುದಾಗಿದೆ. ಬಾಗಿಲಿನ ಪ್ರವೇಶದ ಎರಡೂ ಬದಿಯಲ್ಲಿ ಇರುವ ವೃಕ್ಷದ ಮೇಲಿನ ಮಧ್ಯ ಭಾಗದ ಮಂಟಪದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಚಂದ್ರಪ್ರಭ ತೀರ್ಥಂಕರರ ಚಿತ್ರವನ್ನು ಕಾಣಬಹುದಾಗಿದೆ. ಕೆಂಪು ಹಿನ್ನೆಲೆಯನ್ನು ಹೊಂದಿರುವ ಮಹಾವೃಕ್ಷವು ಸುಂದರವಾದ ಪೀಠದ ಮೇಲೆ ರಚನೆಯಾಗಿದ್ದು ಈ ವೃಕ್ಷದ ಮೇಲ್ಭಾಗದ ಮಂಟಪದಲ್ಲಿ ಅರ್ಧ ಚಂದ್ರ ಲಾಂಛನವುಳ್ಳ ತೀರ್ಥಂಕರರನ್ನು ಕಾಣಬಹುದಾಗಿದೆ. ಈ ತೀರ್ಥಂಕರರ ಮೈ ಬಣ್ಣವು ಶ್ವೇತವರ್ಣವಾಗಿದೆ. ಇದೆ ರೀತಿಯ ಒಂದನ್ನು ಇನ್ನೊಂದು ಹೋಲುವಂತೆ ಎರಡೂ ಬದಿಯಲ್ಲಿ ಸಮನಾದ ಭಿತ್ತಿ ಚಿತ್ರವನ್ನು ರಚಿಸಲು ಈ ಭಿತ್ತಿ ಚಿತ್ರಕಲಾವಿದ ಪ್ರಯತ್ನಿಸಿರುವುದನ್ನು ಗಮನಿಸಬಹುದಾಗಿದೆ. ಈ ವೃಕ್ಷದ ಕೆಳಭಾಗದಲ್ಲಿ ಹಂಸ ಹಾಗೂ ನವಿಲನ್ನು ಅತ್ಯಂತ ಸುಂದರವಾಗಿ ಸಾಂಪ್ರದಾಯಿಕವಾದ ಶೈಲಿಯನ್ನು ಹೊಂದಿರುವಂತೆ ಪೀಠದ ಮೇಲೆ ರಚಿಸಲಾಗಿದೆ. ಇಲ್ಲಿಯ ಎಲ್ಲಾ ಚಿತ್ರಗಳು ಹೂ ಬಳ್ಳಿಯ ನಕ್ಷಾ ಚಿತ್ರಗಳೊಂದಿಗೆ ಅಂಚನ್ನು ರಚಿಸಲಾಗಿದೆ.

**ಭಿತ್ತಿ ಚಿತ್ರಗಳಲ್ಲಿಯ ವರ್ಣಸಂಯೋಜನೆ**

ಕರ್ನಾಟಕದ ಜೈನ ಭಿತ್ತಿಚಿತ್ರಗಳು ನೈಸರ್ಗಿಕ ವರ್ಣಗಳಿಂದ ಚಿತ್ರಿಸಿದವುಗಳಾಗಿವೆ. ಹವಾಮಾನದ ವೈಪರಿತ್ಯದಿಂದಾಗಿ ಭಿತ್ತಿಯ ಗಾರೆಯು ಉದುರಿ ಹೋಗಿದೆ ಹೊರತು ವರ್ಣ ಸಂಯೋಜನೆಯಿಂದ ಚಿತ್ರಗಳು ಇಂದಿಗೂ ಕೂಡಾ ಹೊಳಪಿನಿಂದ ಕಂಗೊಳಿಸುತ್ತಿರುವುದನ್ನು ಕಾಣಬಹುದು.

ಭಿತ್ತಿಚಿತ್ರಗಳಿಗೆ ಬಳಸುವ ಬಣ್ಣಗಳ ಬಗೆಗೆ ನಮ್ಮ ಶಾಸ್ತ್ರಗ್ರಂಥಗಳು ಹೆಚ್ಚಿನ ವಿವರಣೆ ಕೊಡುತ್ತವೆ. ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೂ ಭಿತ್ತಿ ಚಿತ್ರಕಲೆಗೆ ವಿವಿಧ ಮೂಲಗಳಿಂದ ಪಡೆದ ಬಣ್ಣಗಳನ್ನು ಬಳಸಲಾಗಿದೆ. ಪ್ರಾಚೀನ ಭಿತ್ತಿ ಚಿತ್ರ ಕಲಾವಿದರು ಬಣ್ಣ ಪಡೆಯುತ್ತಿದ್ದ ಮೂಲವರ್ಣಗಳು ಈ ಮೂಲವರ್ಣಗಳಿಂದ ಪಡೆದ ವೈವಿಧ್ಯ ಬಣ್ಣಗಳನ್ನು ಚಿತ್ರಗಳಿಗೆ ಉಪಯೋಗಿಸುತ್ತಿದ್ದರು. ಹಾಗೂ ಅನೇಕ ಬಗೆಯ ವರ್ಣಛಾಯೆಗಳನ್ನು ಪ್ರಾಚೀನರು ಬಳಸುತ್ತಿದ್ದರು. ಬಿಳಿ, ಕಪ್ಪು , ಕೆಂಪು, ಹಸಿರು, ಹಳದಿ ಪಂಚವರ್ಣಗಳನ್ನು ಮೂಲ ವರ್ಣಗಳೆಂದು ಪರಿಗಣಿಸುತ್ತಿದ್ದರು. ಇದೇ ಪಂಚವರ್ಣಗಳ ಮಿಶ್ರಣದಿಂದ ತಮಗೆ ಬೇಕಾದ ವರ್ಣಛಾಯೆ ಪಡೆಯುತ್ತಿದ್ದರು. ಪ್ರಾಚೀನಶಾಸ್ತ್ರಗಳ ಸಹಿತ ಈ ಪಂಚ ವರ್ಣಗಳನ್ನೇ ಮೂಲ ವರ್ಣಗಳೆಂದು ಕರೆದು ಅವುಗಳ ಮಿಶ್ರಣದಿಂದ ಬೇರೆ ರೀತಿಯ ಮಿಶ್ರಣಗಳನ್ನು ಪಡೆಯಬೇಕೆಂದು ತಿಳಿಸುತ್ತದೆ. ಕರ್ನಾಟಕದ ಜೈನ ಭಿತ್ತಿ ಚಿತ್ರಗಳಲ್ಲಿ ಈ ಮೂಲ ಬಣ್ಣಗಳು ಕಂಡುಬರುತ್ತವೆ.

ಪ್ರಾಚೀನ ಭಿತ್ತಿ ಚಿತ್ರಕಲೆಯಲ್ಲಿ ವೈವಿಧ್ಯಮಯವಾದ ಬಣ್ಣಗಳನ್ನು ಬಳಸಿಕೊಂಡಿದ್ದು, ಅವು ಹೀಗಿವೆ.
೧) ಖನಿಜಮೂಲ ಬಣ್ಣಗಳು ೨) ಸಸ್ಯಮೂಲ ಬಣ್ಣಗಳು ೩) ರಾಸಾಯನಿಕ ಮೂಲ ಬಣ್ಣಗಳು



೧. ಖನಿಜ ಮೂಲ ಬಣ್ಣಗಳು

ಭೂಮಿಯಿಂದ ದೊರೆಯುವ ಕಲ್ಲು, ಮಣ್ಣು, ಅದಿರುಗಳಿಂದ ಪಡೆಯುವ ಬಣ್ಣಗಳು ಖನಿಜ ಮೂಲದ ಬಣ್ಣಗಳಾಗಿವೆ. ಇವುಗಳಿಂದ ಪ್ರಾಚೀನರು ಬಣ್ಣಗಳನ್ನು ತಯಾರಿಸಿಕೊಳ್ಳುತ್ತಿದ್ದರೆಂಬ ವಿವರಗಳು ದೊರೆಯುತ್ತವೆ. ಅಲ್ಲದೆ ಭಾರತದ ಅಜಂತಾ, ಎಲ್ಲೂರಾ, ಸಿತ್ತನಿವಾಸಲ್, ಭಾಗ್, ಕರ್ನಾಟಕದ ಬಾದಾಮಿ, ಹಂಪೆ ಮೊದಲಾದ ಕಡೆಗಳಲ್ಲಿ ರಚನೆಯಾದ ಭಿತ್ತಿ ಚಿತ್ರಗಳನ್ನು ಖನಿಜಮೂಲ ಬಣ್ಣಗಳು ಬಳಕೆಯಾಗಿವೆ ಎಂಬುದಾಗಿ ತಿಳಿದುಬರುತ್ತದೆ. ಜೈನ ಭಿತ್ತಿಚಿತ್ರಗಳಲ್ಲಿ ಮೂಲ ಬಣ್ಣಗಳು ಬಳಕೆಯಾಗಿರುವ ಸಾಧ್ಯತೆ ಹೆಚ್ಚಾಗಿದೆ.

೨. ಸಸ್ಯ ಮೂಲ ಬಣ್ಣಗಳು

ನಮ್ಮ ಭಾರತೀಯ ಸಾಂಪ್ರದಾಯಿಕ ಚಿತ್ರಕಲೆಯಲ್ಲಿ ಹೆಚ್ಚಾಗಿ ಬಳಸಲ್ಪಟ್ಟ ವರ್ಣಗಳನ್ನು ಪ್ರಾಚೀನರು ಕೆಲವು ಗಿಡಗಳ ಹೂ, ಎಲೆ, ಹಣ್ಣು, ಬೀಜ, ಕಾಂಡ, ಚಿಗುರೆಲೆ ಮತ್ತು ಬೇರುಗಳಿಂದ ತಯಾರಿಸಿಕೊಳ್ಳುತ್ತಿದ್ದರೆಂಬ ವಿವರಗಳು ದೊರೆಯುತ್ತವೆ. ಇಂಡಿಗೋ ಸಸ್ಯದಿಂದ ನೀಲಿಬಣ್ಣ, ಬರ್ಚ ಎಂಬ ಗಿಡದ ಎಲೆಗಳಿಂದ ಹಳದಿ ಬಣ್ಣ, ಮ್ಯಾಡರ್ ಎಂಬ ಹಬ್ಬುವ ಬಳ್ಳಿಯ ಬೇರುಗಳಿಂದ ಕೆಂಪು ಬಣ್ಣವನ್ನು ಬಹಳ ಪೂರ್ವದಲ್ಲಿಯೇ ಪಡೆಯುತ್ತಿದ್ದ ಬಗ್ಗೆ ತಿಳಿದುಬರುತ್ತದೆ. ಸಸ್ಯ ಮೂಲಗಳಿಂದ ಪಡೆದ ಅನೇಕ ಬಣ್ಣಗಳನ್ನು ಭಿತ್ತಿಚಿತ್ರ ರಚನೆಯಲ್ಲಿ ಬಳಸುತ್ತಿದ್ದರಲ್ಲದೆ, ಖನಿಜಮೂಲ ಬಣ್ಣಗಳಿಗೆ ಹೋಲಿಸಿದರೆ ಇವು ಬೇಗನೆ ಹೊಳಪನ್ನು ಕಳೆದುಕೊಳ್ಳುತ್ತವೆ. ಹಾಗಾಗಿ ಖನಿಜಮೂಲದ ಬಣ್ಣಗಳ ತುಲನೆಯಲ್ಲಿ ಇವು ಭಿತ್ತಿ ಚಿತ್ರಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಬಳಕೆಯಾಗಿರಬಹುದು ಎಂಬ ಅಂಶಗಳು ತಿಳಿದು ಬರುತ್ತದೆ.

೩. ರಾಸಯನಿಕ ಮೂಲ ಬಣ್ಣಗಳು

೧೯ನೆಯ ಶತಮಾನದಿಂದ ಭಿತ್ತಿಚಿತ್ರ ರಚನೆಯಲ್ಲಿ ರಾಸಾಯನಿಕ ಬಣ್ಣಗಳ ಬಳಕೆ ಅಧಿಕಗೊಂಡಿತೆಂದು ಹೇಳಬಹುದು. ಪಾಶ್ಚಾತ್ಯರ ಸಂಪರ್ಕದಿಂದಾಗಿ ರಾಸಾಯನಿಕವಾಗಿ ತಯಾರಿಸಿದ ಜಲವರ್ಣ ತೈಲವರ್ಣಗಳಂತಹ ರಾಸಾಯನಿಕ ವರ್ಣಗಳು ಭಾರತವನ್ನು ಪ್ರವೇಶಿಸಿದವು. ಅಲ್ಲದೇ ಅಧುನಿಕ ತಂತ್ರಜ್ಞಾನ ಬೆಳೆದಂತೆ ಬಣ್ಣಗಳು ಬದಲಾವಣೆಗಳನ್ನು ಕಾಣಬಹುದು. ಇತ್ತಿಚೀನ ದಿನಗಳಲ್ಲಿ ರಾಸಾಯನಿಕ ಬಣ್ಣಗಳನ್ನು ಬಳಸಿ ನವ್ಯ ಶೈಲಿಯಲ್ಲಿ ಭಿತ್ತಿಚಿತ್ರಗಳನ್ನು ರಚಿಸುತ್ತಿರುವುದನ್ನು ಅನೇಕ ಜೈನ ಬಸದಿಗಳಲ್ಲಿ ಕಾಣಬಹುದು.

ಜೈನ ಭಿತ್ತಿಚಿತ್ರಕಲೆಯ ತಂತ್ರವಿಧಾನ ಮತ್ತು ಶೈಲಿ

ಕರ್ನಾಟಕದ ಜೈನ ಭಿತ್ತಿಚಿತ್ರಗಳು ಗಾರೆಭಿತ್ತಿ ಹಾಗೂ ಮಣ್ಣಿನ ಭಿತ್ತಿಯ ಮೇಲೆ ಚಿತ್ರಿಸಲಾಗಿದ್ದು. ಈ ಚಿತ್ರಗಳಿಗೆ ತಯಾರಿಸಿಕೊಳ್ಳಲಾದ ಭಿತ್ತಿಯಲ್ಲಿ ಹೆಚ್ಚಿನ ತಂತ್ರಗಾರಿಕೆಯು ಕಂಡುಬರುವುದಿಲ್ಲ. ಆದರೆ ವರ್ಣವಿನ್ಯಾಸ ಹಾಗೂ ಆಕೃತಿ ಸಂಯೋಜನೆಯಲ್ಲಿ ಈ ಚಿತ್ರಗಳು ವಿಶಿಷ್ಟ ರಚನೆಯಿಂದ ಕೂಡಿದವುಗಳಾಗಿವೆ.

ಕರ್ನಾಟಕದ ಜೈನ ಚಿತ್ರಗಳು ವೈವಿಧ್ಯಮಯವಾಗಿವೆ. ಚಿತ್ರದ ವಸ್ತುವನ್ನು ಲಕ್ಷಿಸಿ ಜಿನವೈಭವ, ತತ್ವನಿರೂಪಣೆ ರಾಜರ ಹಾಗೂ ಉತ್ಸವಾದಿಗಳ ವೈಭವ ಮತ್ತು ಸಾಮಾಜಿಕ ಸನ್ನಿವೇಶಗಳು ಎಂಬದಾಗಿ ವಿಂಗಡಿಸಬಹುದು. ಪಾರ್ಶ್ವನಾಥನ ಸಮವಸರಣ ಸನ್ನಿವೇಶ ಭರತ ಚಕ್ರವರ್ತಿಯ ಜೀವನ ನಾಗಕುಮಾರನ ಚರಿತೆ, ಪಂಚಪರಮೇಷ್ಠಿಗಳು, ನೇಮಿನಾಥ, ಯಕ್ಷ-ಯಕ್ಷಿಯರು, ಮಠದ ಭಿತ್ತಿಚಿತ್ರಗಳು ಮುಂತಾಗಿ ಜೈನ ಧರ್ಮದ ವೈಭವವನ್ನು ಚಿತ್ರಿಸುತ್ತವೆ. ಜೈನ ಸಿದ್ಧಾಂತದ ಹಿನ್ನೆಲೆಯಲ್ಲಿ "ಆರು ಲೇಶ್ಯಗಳು" ಸಾಂಕೇತಿಕ ಚಿತ್ರಣ ಮುಂತಾಗಿ ಜಿನ ತತ್ವಗಳ ನಿರೂಪಣೆಯಿದೆ. ದರ್ಬಾರಿನ ಚಿತ್ರ ರಥೋತ್ಸವದ ಚಿತ್ರಗಳು ರಾಜ ಹಾಗೂ ಉತ್ಸವಾದಿಗಳ ವೈಭವ ಚಿತ್ರಿಸಿದರೆ ನರ್ತಕಿಯರ, ವಾದ್ಯಕಾರರ ದಂಡನೆಯ ವನಾಂತರದ ದೃಶ್ಯಗಳು ಸಾಮಾಜಿಕ ಸನ್ನಿವೇಶಗಳನ್ನು ದಾಖಲಿಸಿವೆ. ವಿಜಯನಗರದ



ಅಂತ್ಯದ ಅಥವಾ ಮುಂಚಿನ ಮೈಸೂರು ಶೈಲಿಯನ್ನು ಹೋಲುವ ಭಿತ್ತಿಚಿತ್ರಗಳು ಹಂಪಿ-ಲೇಪಾಕ್ಷಿ ಚಿತ್ರ ಶೈಲಿಯ ಸಂಬಂಧವನ್ನು ಇಲ್ಲಿ ಗುರುತಿಸಬಹುದಾಗಿದೆ. ಇದು ಅವುಗಳಿಗಿಂತ ಭಿನ್ನವಾದ ಶೈಲಿಯಾಗಿರುವುದು ಸ್ಪಷ್ಟವಾಗಿದೆ. ಈ ಚಿತ್ರಗಳು ದಕ್ಷಿಣ ಭಾರತದ ಭಿತ್ತಿ ಚಿತ್ರ ಪರಂಪರೆಯಲ್ಲಿ ಮಹತ್ವದ ಸ್ಥಾನವನ್ನು ಪಡೆಯುತ್ತಿದ್ದು ಪೌರಾಣಿಕ ಹಾಗೂ ಸಮಕಾಲೀನ ಜೀವನಕ್ಕೆ ಹಿಡಿದ ಕನ್ನಡಿಯಂತಿದೆ.

ಈ ಭಿತ್ತಿ ಚಿತ್ರಗಳಲ್ಲಿನ ಚೆಲುವಿನ ವರ್ಣಗಳ ಹೊಂದಾಣಿಕೆ ಆಕೃತಿಗಳಲ್ಲಿನ ಸಂಯೋಜನೆ ವಿಷಯಕ್ಕೆ ನೀಡುವ ಪ್ರಾಶಸ್ತ್ಯ, ಇತ್ಯಾದಿ ಚಿತ್ರಕಲಾ ತಂತ್ರಗಳು ಉನ್ನತ ಮಟ್ಟದವು. ಅಲ್ಲದೆ ಉಗ್ರವರ್ಣಗಳಿಗೂ ಸೌಮ್ಯತೆಯ ಸಂಸ್ಕಾರ ನೀಡಿ ಸಮತೋಲನವಾಗಿ ವರ್ಣಗಳನ್ನು ನೈಪುಣ್ಯ ಹಾಗೂ ಸಂಯಮದಿಂದ ಎಳೆದ ರೇಖಾವಿನ್ಯಾಸಗಳು ಚಿತ್ರಕಾರರ ಕಲಾ ಪರಿಣಿತಗೆ ಈ ಕರ್ನಾಟಕದ ಜೈನ ಭಿತ್ತಿಚಿತ್ರಗಳು ಸಾಕ್ಷಿಯಾಗಿವೆ.

*****



ಜೀವನದ ಯಾವುದೇ ಕ್ಷೇತ್ರದಲ್ಲಿಯೂ ಕಲಾತ್ಮಕತೆಯನ್ನು ಬಯಸುವುದು ಮಾನವನ ಮೂಲಭೂತ ಪ್ರವೃತ್ತಿಗಳಲ್ಲೊಂದು. ಇದಕ್ಕೆ ಹಸ್ತಪ್ರತಿಗಳೂ ಹೊರತಲ್ಲ, ಧರ್ಮಕ್ಕೆ ಬಹಳ ಮಹತ್ವವಿದ್ದಂತಹ ಕಾಲದಲ್ಲಿ ಧಾರ್ಮಿಕ ನೆಲೆಯಿಂದಲೇ ಓಲೆಗರಿಗಳಲ್ಲಿ ಪ್ರಾಚೀನ ಗ್ರಂಥಗಳನ್ನು ಕಾಣಬಹುದು. ಕನ್ನಡದ ಪ್ರಾಚೀನ ಸಾಹಿತ್ಯವನ್ನು ತಮ್ಮ ಒಡಲಲ್ಲಿಟ್ಟುಕೊಂಡಿರುವ ಓಲೆಗರಿ ಹಸ್ತಪ್ರತಿಗಳೆಂದರೆ ಜೈನ ಹಸ್ತಪ್ರತಿಗಳು ಪ್ರಾಚೀನ ಕನ್ನಡ ಸಾಹಿತ್ಯದ ಆರಂಭವೇ ಜೈನಕೃತಿಗಳಿಂದ ಹಾಗಾಗಿ ಜೈನಹಸ್ತಪ್ರತಿಗಳು ವಿಫುಲವಾಗಿವೆ. ಜೈನಧರ್ಮದಲ್ಲಿರುವ ಚತುರ್ವಿಧಿ ದಾನದಲ್ಲಿ ಶಾಸ್ತ್ರದಾನ ಎಂಬ ದಾನ ವಿಶಿಷ್ಟವಾದುದು. ಆದುದರಿಂದ ಗ್ರಂಥಗಳನ್ನು ಸಂರಕ್ಷಿಸುವುದು ಪ್ರತಿ ಮಾಡುವುದು ಪುಣ್ಯಕಾರ್ಯವೆಂಬ ಭಾವನೆ ಇದ್ದುದರಿಂದ ಇದನ್ನು ಒಂದು ರೀತಿಯ ಸೇವೆಯಾಗಿ ಪರಿಗಣಿಸಲಾಗಿದೆ.

ಜೈನ ಹಸ್ತಪ್ರತಿಕಾರರು ಭಕ್ತಿ, ಧರ್ಮಪ್ರಚಾರ, ಜನಾಕರ್ಷಣೆ ಹಾಗೂ ವೈಯಕ್ತಿಕ ಅಭಿರುಚಿಯ ಕಾರಣವಾಗಿ ಒಂದು ಕೃತಿಯನ್ನು ಪ್ರತಿ ಮಾಡುತ್ತಿದ್ದುದಷ್ಟು ಅಲ್ಲದೆ ಕಲಾತ್ಮಕವಾಗಿ ವಿನ್ಯಾಸಗೊಳಿಸಲು ಯತ್ನಿಸಿದರು. ಪರಿಣಾಮವಾಗಿ ಹಸ್ತಪ್ರತಿಗಳಲ್ಲಿಯೂ ಚಿತ್ರಕಲೆ ಕಾಣಿಸಿಕೊಂಡಿತು. ಕರ್ನಾಟಕದ ಹಸ್ತಪ್ರತಿ ಭಂಡಾರಗಳಲ್ಲಿ ಜೈನ ಹಸ್ತಪ್ರತಿಗಳಿದ್ದರೂ ಅವು ವೈವಿಧ್ಯಮಯವಾಗಿ ವಿಶೇಷವಾಗಿ ಕಂಡುಬರುವುದು.

"ಹಸ್ತಪ್ರತಿ" ಎಂಬ ಪದ ಕನ್ನಡದಲ್ಲಿ ಬಳಕೆಗೊಳ್ಳಲಾರಂಭಿಸಿದ್ದು ಈ ಶತಮಾನದಲ್ಲಾದ ಗ್ರಂಥ ಸಂಪಾದನಾ ಶಾಸ್ತ್ರದ ಪರಿಚಯದೊಂದಿಗೆ ಈ ಕಾರಣಕ್ಕಾಗಿಯೇ ಎಂದರೆ ತಪ್ಪಲ್ಲ. ಆಂಗ್ಲ ಭಾಷೆಯಲ್ಲಿ (Manuscript) ಎಂಬ ಪದವನ್ನು ಬಳಸುತ್ತಾರೆ. ೧೫೯೭ರ ಸುಮಾರಿಗೆ ಇದನ್ನು ಮಧ್ಯಯುಗದ ಲ್ಯಾಟಿನ್ Manuscriptus ದಿಂದ ರೂಡಿಸಿಕೊಂಡಂತಿದೆ. ಲ್ಯಾಟಿನ್ ಪದ Manu (oblative) : anuby hand scriptus (post or passive participate) of scribere to write adj writtten by hand ಎಂಬುದಾಗಿ ಆಕ್ಸಫರ್ಡ ಶಬ್ದಕೋಶ ವಿವರಣೆ ನೀಡುತ್ತದೆ.[೧] ಬ್ರಿಟಾನಿಕಾ ವಿಶ್ವಕೋಶ ಬರಹಗಳೆಲ್ಲವನ್ನು ದಾಖಲೆಗಳು ಎಂದು ಒಟ್ಟಾಗಿ ಗ್ರಹಿಸಿ "ಯಾವುದೇ ಒಂದು ಸಂಗತಿಯನ್ನು ನಿವೇದಿಸಲು ಅಥವಾ ದಾಖಲುಗೋಳಿಸಿ ರಕ್ಷಿಸಲು ಶಾಶ್ವತವಾದ ಮತ್ತು ಬಿರುಸಾದ ಸಾಮಗ್ರಿಗಳ ಮೇಲೆ ಕೆತ್ತಿದ್ದನ್ನು ಶಾಸನ" ಎಂದು ವಿವರಿಸಿದ್ದಾರೆ. "ಮೃದುವಾದ ಸಮತಲದ

೦೧.C.T.Onions : The shorter Oxford English Dictionaryon Historical Principles (II Edition) Vol.I



ಪೆಪಿರಸ್ ಹದ ಮಾಡಿದ ಚರ್ಮಕಾಗದ ಮತ್ತು ಕಾಗದ ಇತ್ಯಾದಿ ಸಾಮಗ್ರಿಗಳ ಮೇಲೆ ವರ್ಣವನ್ನು ಉಪಯೋಗಿಸಿಕೊಂಡು ಕುಂಚ, ಲೇಖನ ಇಲ್ಲವೆ ಗಲಗಿನಿಂದ ಬರೆಯಲಾದವುಗಳನ್ನು ಹಸ್ತಪ್ರತಿ"ಗಳೆಂದು ಗುರುತಿಸಿ ಇವು ಶಾಸನಗಳೆಂದು ಭಿನ್ನವಾದವುಗಳು ಎಂದು ಹೇಳುವುದುಂಟು.[೨]

'ಹಸ್ತಪ್ರತಿ' ಎಂಬ ಪದ ನಮಗೆ ಪರಿಚಯವಾಗುವ ಮೊದಲೆ ಓಲೆಕಟ್ಟು, ಹೊತ್ತಿಗೆ, ಗ್ರಂಥ, ಶಾಸ್ತ್ರ ನೀಲಿ ಹೋತ್ತಿಗೆ ಎಂಬ ಪದಗಳು ಬಳಕೆಯಲ್ಲಿದ್ದವು. ಅವನ್ನೇ ಸೌಲಭ್ಯಾಕಾಂಕ್ಷೆಯಿಂದ ಮೊಟಕುಗೊಳಿಸಿ ಕಟ್ಟು ಹೊತ್ತಿಗೆ ಶಾಸ್ತ್ರ ಮುಂತಾಗಿ ಕರೆಯಲಾಗುತ್ತಿತ್ತು. ಕನ್ನಡದ ಪ್ರಾಚೀನ ಗ್ರಂಥಗಳಲ್ಲಿಯೂ 'ಹೊತ್ತಿಗೆ', 'ಕವಳಿಗೆ', "ಪುಸ್ತಕ ಕಟ್ಟು" ಮುಂತಾಗಿ ಹಸ್ತಪ್ರತಿಗಳನ್ನು ಗುರುತಿಸಿದ್ದುಂಟು.

ತಲೆಮಾರಿನಿಂದ ತಲೆಮಾರಿಗೆ ಸಾಗಿಬಂದ ಭೌತಿಕ ಮತ್ತು ಸಾಂಸ್ಕೃತಿಕ ಜ್ಞಾನ ಸಂಪತ್ತು ಒಂದು ಕಾಲಕ್ಕೆ ಶೃತಿಪಾತಳಿಯಿಂದ ಲಿಪಿಮಾಧ್ಯಮದ ಮೂಲಕ ಕೃತಪಾತಳಿಗೆ ಇಳಿದು ಬಂದಿತು. ಮುಂದೆ ಈ ಕೃತಿ ಸಾಹಿತ್ಯ ಅಲ್ಪಕಾಲದಲ್ಲಿ ಅಳಿದುಹೋಗುವ ಬಹುಕಾಲ ಉಳಿದು ನಿಲ್ಲುವ ವರ್ಗದಲ್ಲಿಯೇ ಶಿಲೆ, ಸುಟ್ಟ ಮಣ್ಣು, ಲೋಹ ಫಲಕಗಳಂತಹ ಭಾರವಾದ ವಸ್ತುವಲ್ಲದ ವಸ್ತ್ರಪಟ ವೃಕ್ಷಪತ್ರ ಕಾಗದಗಳಂತಹ ಹಗುರ ವಸ್ತುಗಳ ಮೇಲಿನ ಕೈಬರಹಗಳು ಮಾತ್ರ ಹಸ್ತಪ್ರತಿ ವರ್ಗದಲ್ಲಿ ಸೇರುತ್ತದೆ. ಯಾವುದೇ ದೇಶದ ಲೇಖನ ಪರಂಪರೆಯ ಉಗಮ–ಇತಿಹಾಸ ಬಹುಮಟ್ಟಿಗೆ ಇಂತಹ ಹಸ್ತಪ್ರತಿ ವರ್ಗದಲ್ಲಿ ಸೇರುತ್ತದೆ. ಯಾವುದೇ ದೇಶದ ಲೇಖನ ಪರಂಪರೆಯ ಉಗಮ–ಇತಿಹಾಸ ಬಹುಮಟ್ಟಿಗೆ ಇಂಥ ಹಸ್ತಪ್ರತಿ ಪರಂಪರೆಯ ಉಗಮ–ಇತಿಹಾಸವೇ ಆಗಿದೆ.[೩]

ಲೇಖನ ಕ್ರಮಕ್ಕೆ ಯಾವ ಸಾಮಗ್ರಿಯ ಮೇಲೆ ಅಕ್ಷರಗಳನ್ನು ಮೂಡಿಸಲಾಗುತ್ತಿತ್ತೋ ಅದನ್ನು ಆಧಾರ ಸಾಮಗ್ರಿ ಎನ್ನಲಾಗುತ್ತದೆ. ಇದು ಬರವಣಿಗೆಗೆ ಯೋಗ್ಯವಾದ ಸಮತಲ ಹೊಂದಿರಬೇಕು. ಮೃದುವಾಗಿರಬೇಕು, ಅಲ್ಲದೆ ಹೆಚ್ಚುಕಾಲ ಬಾಳಿಕೆ ಬರುವಂತಹದಾಗಿರಬೇಕು. ಅದ್ದರಿಂದ ಜೈನ ಹಸ್ತಪ್ರತಿಗಳಿಗೆ ಬಳಸಲಾದ ಆಧಾರ ಸಾಮಗ್ರಿಗಳಲ್ಲಿ ತಾಳೆಗರಿಯೋಲೆ ಮತ್ತು ಕಾಗದಗಳು ಅತ್ಯಂತ ಮುಖ್ಯವಾದವುಗಳು.

ಹಸ್ತಪ್ರತಿಗಳಿಗೆ ವಿಶೇಷವಾಗಿ ಬಳಸಿಕೊಂಡಿದ್ದು ತಾಳೆಯೋಲೆ ಮತ್ತು ಕೋರಿ ಕಾಗದಗಳನ್ನು ತಾಳೆಯೋಲೆ ಮರದ ಎಲೆಯಾಗಿರುವುದರಿಂದ ಹಸ್ತಪ್ರತಿಗಳು ಅಳತೆಯಲ್ಲಿ ಏಕರೂಪತೆ ಕಂಡು ಬರುವುದಿಲ್ಲ, ತಾಳೆಗರಿಗಳನ್ನು ಹದಮಾಡುವುದು ಕೂಡ ಒಂದು ಕಲೆಯಾಗಿದೆ. ಮರದಿಂದ ಕೊಯ್ದುತಂದ ಗರಿಗಳನ್ನು ಹಸಿಯಾಗಿರುವಾಗಲೇ ಕುದಿನೀರಿನಲ್ಲಿ ಬೇಯಿಸಿ ನೆರಳಿನಲ್ಲಿ ಒಣಗಿಸಿದ ನಂತರ ನುಣುಪುಗೊಳಿಸುವುದು, ಗರಿಯ ಬೆಳವಣಿಗೆಯನ್ನು ಲಕ್ಷಿಸಿ ಆಕಾರಕ್ಕೆ ಅವುಗಳನ್ನು ಕತ್ತರಿಸುವುದು, ಗರಿಯ ಉದ್ದಳತೆಯನ್ನು ದೃಷ್ಟಿಯಲ್ಲಿಟ್ಟಿಕೊಂಡು ರಂಧ್ರ ಕೊರೆಯುವುದು, ಈ ಮುಂತಾದ ಕಾರ್ಯಗಳು ಲೇಖನಕ್ಕಾಗಿ ಹಾಗೂ ಚಿತ್ರರಚನೆಗಾಗಿ ಓಲೆಗರಿಗಳನ್ನು ಹದಗೊಳಿಸಿ ಅಣಿಮಾಡುವ ಬೇರೆ ಬೇರೆ ಓಲೆಕಾರರೆ ನಿರ್ವಹಿಸಬೇಕಾದ ಪ್ರಥಮ ಹಂತಗಳಾಗಿವೆ. ಅದೇ ರೀತಿ ಹದಗೊಂಡ ಓಲೆಗರಿಗಳಿಗೆ ದಕ್ಕೆಯಾಗದಂತೆ ಗರಿಗಳ ಅಳತೆಗಿಂತಲೂ ಸ್ವಲ್ಪ ಹೆಚ್ಚು ಅಳತೆಯಿಟ್ಟು ಕೊರೆದ ಕಟ್ಟಿಗೆಯ ರಕ್ಷಾ ಫಲಕಗಳನ್ನು ಜೋಡಿಸುವುದಾಗಿದೆ. ರಕ್ಷಾ ಫಲಕಗಳನ್ನು ನುಣುಪುಗೊಳಿಸಿ ರಂಧ್ರ ಕೊರೆಯ ಬೇಕಾಗುತ್ತದೆ. ಇಂಥವುಗಳನ್ನು ಓಲೆಗರಿಗಳ ಕಟ್ಟಿನ ಎರಡೂ ಬದಿಗೆ ಜೋಡಿಸ ಬೇಕಾಗುತ್ತಿತ್ತು. ಅಲಂಕಾರರಹಿತ ಫಲಕಗಳು ಒಂದು ತೆರನಾಗಿದ್ದರೆ, ಅವುಗಳಿಗೆ ಬಣ್ಣ ಬಳಿದು ನಕ್ಷೆಗಳನ್ನು ರಚಿಸಿ ಕಲಾತ್ಮಕವಾದ ಚಿತ್ರಗಳನ್ನು ಬಿಡಿಸಿ ವರ್ಣರಂಜಿತಗೊಳಿಸಿದ್ದ ಫಲಕಗಳು ಇನ್ನೊಂದು ವಿಧವಾಗಿದೆ. (ಬೆಂಗಳೂರು ವಿಶ್ವವಿದ್ಯಾನಿಲಯದ ಸಂಗ್ರಹದಲ್ಲಿ ಇರುವ ಸಾಳ್ವಭಾರತ ಹಸ್ತ ಫಲಕದ ಮೇಲಿನ ಜೈನ ತೀರ್ಥಂಕರರ ಚಿತ್ರಗಳನ್ನು ಗಮನಿಸಬಹುದು.) ಕಟ್ಟಿಗೆ ನುಣುಪುಗೊಳಿಸುವ ಬಣ್ಣ ಹಚ್ಚುವ ಚಿತ್ರ ಬರೆಯುವ ಕೆಲಸವನ್ನು ಇಲ್ಲಿ ವಿಶಿಷ್ಟವಾಗಿ ಗಮನಿಸಬಹುದು.

---

೦೨. Britanica Encyclopadia : Vol.12, Pg. 277

೦೩. ಡಾ. ಎಮ್.ಸಿ.ಬಾಗೋಡಿ : ಸುರಪುರ ಶೈಲಿಯ ಚಿತ್ರಕಲೆ, ಒಂದು ಅಧ್ಯಯನ, ಅ.ಪಿಹೆಚ್.ಡಿ ಪ್ರ., ಪು.ಸಂ.೮೦



ತಾಳೆಗರಿ ಬಳಕೆಯ ನಂತರ ಕಂಡುಬರುವುದು ಕಾಗದ ಕ್ರಿ. ಪೂ. ೪ನೆಯ ಶತಮಾನದ ಹೊತ್ತಿಗೆ ಭಾರತೀಯರು ಕಾಗದ ತಯಾರಿಕೆಯನ್ನು ಬಲ್ಲವರಾಗಿದ್ದರೆಂದು ಗ್ರೀಕ್ ದೇಶದ ನರ್ಚೆಸ್ ಹೇಳುತ್ತಾನೆ. ಅದರೆ ಕಾಗದದ ಬಳಕೆ ಮೊದಲಾದುದು ಮಹಮ್ಮದೀಯರ ಆಳ್ವಿಕೆಯ ಕಾಲವಧಿಯಲ್ಲಿಯೇ ಎಂದು ತೋರುತ್ತದೆ. ೫ನೆಯ ಶತಮಾನದಲ್ಲಿ ಸಿದ್ಧಪಡಿಸಲಾದ ಗುಪ್ತರ ಕಾಲದ ಲಿಪಿಯ ಹಸ್ತಪ್ರತಿಯೊಂದು ಮಧ್ಯ ಏಶಿಯಾದಲ್ಲಿ ದೊರಕಿದೆಯಂತೆ. ಸಧ್ಯ ಅದೇ ಪ್ರಾಚೀನವಾದ ಕಾಗದದ ಹಸ್ತಪ್ರತಿಯೆನಿಸಿದರೂ ಈ ಹಸ್ತಪ್ರತಿಯ ಕಾಗದವು ಭಾರತದಲ್ಲಿ ಸಿದ್ಧವಾದುದೆ? ಎಂಬ ಬಗ್ಗೆ ವಿದ್ವಾಂಸರು ಸಂದೇಹ ವ್ಯಕ್ತಪಡಿಸಿದ್ದಾರೆ.[೪]

ಗುಜರಾತ್‌ನಲ್ಲಿ ದೊರಕಿದ ಕಾಗದ ಹಸ್ತಪ್ರತಿಗಳು ಹದಿನಾಲ್ಕನೆಯ ಮತ್ತು ಅನಂತರದ ಶತಮಾನದವುಗಳಾಗಿವೆ. ಕರ್ನಾಟಕದಲ್ಲಿಯೂ ಕಾಗದವು ೧೪ನೆಯ ಶತಮಾನದ ಹೊತ್ತಿಗೆ ಬಳಕೆಗೊಳ್ಳಲಾರಂಭವಾಗಿರಬೇಕು. ಅಭಿನವ ಮಂಗರಾಜನು 'ಪತ್ತಳಿಕೆ' ಎಂಬುದು ಕಾಗದ ಎನ್ನುತ್ತಾನೆ. ಕಾಗದವನ್ನು ಕೈಯಿಂದ ತಯಾರಿಸುತ್ತಿದ್ದ ಮತ್ತು ಅದನ್ನು ಆರಸರು ಪಾಳೆಯಗಾರರು ಆಡಳಿತದ ಉದ್ದೇಶಕ್ಕಾಗಿ ಬಳಸಿಕೊಳ್ಳುತ್ತಿದ್ದ ಸಂಗತಿ ತಿಳಿದು ಬರುತ್ತದೆ. ಕೋರಿ ಕಾಗದ ವೆಂದು ಕರೆಯಲಾಗುತ್ತಿದ್ದ, ಈ ಹಸ್ತಪ್ರತಿಗಳು ಕರ್ನಾಟಕದ ದಕ್ಷಿಣ ಭಾಗಕ್ಕಿಂತ ಹೆಚ್ಚಾಗಿ ಉತ್ತರ ಭಾಗದಲ್ಲಿಯೇ ದೊರೆಯುತ್ತವೆ. ಎಂಬುದಾಗಿ ಡಿ.ಎಲ್.ಎನ್. ಅವರು ಅಭಿಪ್ರಾಯ ಪಡುತ್ತಾರೆ.[೫] ಬಹುಶಃ ಈ ಭಾಗವು ಮಹಮ್ಮದೀಯರ ಆಳ್ವಿಕೆಗೆ ಆಧೀನವಾಗಿರಬಹುದು ಹಾಗೂ ತಾಳೆ ವೃಕ್ಷಗಳು ಉತ್ತರ ಕರ್ನಾಟಕದಲ್ಲಿ ಬೆಳೆಯದಿರುವುದು ಇದಕ್ಕೆ ಕಾರಣವಾಗಿರಬಹುದು. ಈ ಕಾರಣದಿಂದ ಬರೆಯುವುದೊಂದೆ ವೈಶಿಷ್ಟವಾಗಿರುವಂತೆ ಈ ಪತ್ರಚ್ಛೇದನವೂ ದಕ್ಷಿಣ ಭಾರತೀಯರ ವಿಶಿಷ್ಟಕಲೆಯಾಗಿ ವಿಕಾಸಗೊಂಡಿದೆ. ಹಸ್ತಪ್ರತಿಗಳಲ್ಲಿನ ಪತ್ರಚ್ಛೇಧನ ಕಲೆಯಂತೆ ವರ್ಣಚಿತ್ರ ರಚನೆಗಳು ಕೂಡ, ಜೈನ ಕಲಾ ವೈಭವದ ಇನ್ನೊಂದು ಮುಖವನ್ನು ಪರಿಚಯಿಸುವಂತಿವೆ. ಉತ್ತರದಲ್ಲಿ ತಾಳೆಗರಿಗಳ ಮೇಲೆ ಮಸಿಯಿಂದ ಬರೆದ ವರ್ಣಗಳಿಂದ ಚಿತ್ರರಚನೆ ಮಾಡಿದ ನಿದರ್ಶನಗಳು ಕಂಡುಬರುತ್ತವೆ. ಇಂಥವು ದಕ್ಷಿಣದಲ್ಲಿ ತೀರ ವಿರಳ ಮೂಡಬಿದರೆಯ ಜೈನ ಮಠದಲ್ಲಿಯ ಧವಲಾ ಗ್ರಂಥಗಳು ಇಂಥ ಅಪರೂಪದ ನಿದರ್ಶನಗಳೆನಿಸಿದೆ.

**ಕರ್ನಾಟಕ ಜೈನ ಹಸ್ತಪ್ರತಿ ಚಿತ್ರಗಳ ವರ್ಗೀಕರಣ**

ಕರ್ನಾಟಕದ ಜೈನಹಸ್ತಪ್ರತಿ ಚಿತ್ರಗಳನ್ನು ೧.ಫಲಕದ ಮೇಲಿನ ಚಿತ್ರಗಳು ೨.ತಾಳೆಗರಿಯ ಮೇಲೆ ಕಂಟದಿಂದ ಕೊರೆದ ಚಿತ್ರಗಳು ಹಾಗೂ ೩.ಕಾಗದದ ಮೇಲಿನ ಚಿತ್ರಗಳು ಎಂದು ಮೂರು ಬಗ್ಗೆಯಲ್ಲಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

**೧. ಫಲಕದ ಮೇಲಿನ ಚಿತ್ರಗಳು.**

ಹಸ್ತಪ್ರತಿಗಳಿಗೆ ರಕ್ಷಾ ಕವಚದಂತಿರುವ ಫಲಗಳು ತಾಳೆಗರಿ, ಕಾಗದ ಹಸ್ತಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವಲ್ಲಿ ಈ ಫಲಕಗಳು ಬಹುಮುಖ್ಯ ಪಾತ್ರವನ್ನು ವಹಿಸುತ್ತವೆ. ಹಸ್ತಪ್ರತಿಗಳಿಗೆ ಅನೇಕ ಆಪತ್ತುಗಳಿಂದ ಸಂರಕ್ಷಿಸಲು ಸಹ ಈ ಫಲಕಗಳು ರಕ್ಷಣೆ ನೀಡುತ್ತದೆ. ಗಾಳಿ, ಬೂಷ್ಟು ತೇವಾಂಶಗಳಿಂದ ರಕ್ಷಣೆ ಒದಗಿಸಿದಂತೆ ಗೆದ್ದಿಲು, ಜಿರಲೆ, ಬೆಳ್ಳಿಮೀನುಗಳಂತಹ ಕ್ರಿಮಿ ಕೀಟಗಳಿಂದ, ಇಲಿಗಳಿಂದಲೂ ಈ ಫಲಕಗಳು ಸಂರಕ್ಷಣೆಯನ್ನು ಒದಗಿಸಿ ಮೂಲ ಹಸ್ತಪ್ರತಿಗಳ ಆಯಮಾ೯ನವನ್ನು ವೃದ್ಧಿಸುತ್ತದೆ. ಮರ, ಲೋಹ, ಆಲ್ಲದೇ ಮಿಶ್ರ ಮಾಧ್ಯಮಗಳಂತಹ ಫಲಕಗಳ ಮೇಲೆಯೂ ಆಯಾ ಹಸ್ತಪ್ರತಿಗಳ ಕಥಾವಸ್ತುವಿಗೆ ಸಂಬಂಧಿಸಿದಂತೆ ಮುಖಪುಟ ಚಿತ್ರಗಳು ಚಿತ್ರಿಸಿರುವುದುಂಟು, ಕರ್ನಾಟಕದ ಜೈನ ಹಸ್ತಪ್ರತಿಗಳ ಸಂರಕ್ಷಣೆಗೆಂದು ಮಾಡಲಾದ ರಕ್ಷಾಕವಚ (ಕಟ್ಟಿಗೆಯ

೦೪. ಡಾ. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿಗಳು, ಒಂದು ಅಧ್ಯಯನ, ಪು.ಸಂ.೨೫
೦೫. -ಅದೇ- ಪು.ಸಂ.೨೫



ಕಟ್ಟುಗಳು)ಗಳ ಮೇಲೆ ಚಿತ್ರಿಸಿದ ಒಂದೆರಡು ಚಿತ್ರಗಳು ಕಂಡುಬಂದಿವೆ. ಈ ಮರ ಮಾಧ್ಯಮದ ಫಲಕದ ಮೇಲೆ ಚಿತ್ರಿಸಲಾದ ಎರಡು ಚಿತ್ರಗಳನ್ನೇ ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿ, ಅವುಗಳ ವಸ್ತುವಿಷಯ, ಲಕ್ಷಣಗಳನ್ನು ಕುರಿತು ಚರ್ಚಿಸಲಾಗಿದೆ.

ಬೆಂಗಳೂರು ವಿಶ್ವವಿದ್ಯಾನಿಲಯ ಹಸ್ತಪ್ರತಿ ಸಂಗ್ರಹದ 'ಸಾಳ್ವ ಭಾರತ' ಎಂಬ ತಾಳೆಗರಿ ಗ್ರಂಥದ ರಕ್ಷಾಫಲಕಗಳ ಮೇಲೆ ೨೪ ತೀರ್ಥಂಕರರ ಚಿತ್ರಗಳನ್ನು ಬಹು ರಮ್ಯವಾಗಿ ಬಿಡಿಸಲಾಗಿದೆ. ಒಂದೊಂದು ಫಲಕದ ಮೇಲೆ ಹದಿನಾಲ್ಕು ಅರ್ಧ ವರ್ತುಲಾಕಾರರ ಕಮಾನುಗಳನ್ನು ಚಿತ್ರಿಸಿ ಅದರ ಮೇಲೆ ಸಣ್ಣ ಹೂ-ಬಳ್ಳಿಯ ನಕ್ಷಾಚಿತ್ರಗಳನ್ನು ಚಿತ್ರಿಸಲಾಗಿದೆ. ಈ ಕಮಾನುಗಳನ್ನು ಚಿತ್ರಿಸಿ ಮಧ್ಯಭಾಗದಲ್ಲಿ ವಿಶೇಷವಾಗಿ ಹಳದಿ ವರ್ಣದಿಂದಲೇ ಚಿತ್ರಿಸಲಾದ ಪರ್ಯಂಕಾಸನಸ್ಥ ತೀರ್ಥಂಕರಾಗಿದ್ದಾರೆ. ಸುಮಾರು ೪-೫ ತೀರ್ಥಕರರ ಮೈ ಬಣ್ಣ ನೀಲ ಮಿಶ್ರಿತ ಹಸಿರಿನಿಂದ ತುಂಬಲಾಗಿದೆ. ಬಹುಶಃ ಆಯಾ ತೀರ್ಥಕರರ ಅಂಗಚ್ಛವಿಯನ್ನು ಆಯಾ ವರ್ಣದಿಂದಲೇ ಚಿತ್ರಿಸುವ ಪ್ರಯತ್ನವನ್ನು ಚಿತ್ರಕಾರನು ಮಾಡಿರುವಂತಿದೆ. ಫಲಕ ವರ್ಣಗಳು ಮಾಸಿದ ಕಾರಣ ವರ್ಣವೈವಿಧ್ಯ ಗುರುತಿಸುವುದು ಕಷ್ಟವಾಗುತ್ತದೆ. ಪೀಠಸ್ಥ ತೀರ್ಥಂಕರರ ಕೆಳಗಡೆ ಆಯಾ ತೀರ್ಥಂಕರರ ಲಾಂಛನಗಳು ಚಿತ್ರಿಸಲ್ಪಟ್ಟಿವೆ. ಒಂದೊಂದು ಫಲಕದಲ್ಲಿ ೧೦ನೆಯ ಕಮಾನಿನಲ್ಲಿ ಜಿನಭಕ್ತೆಯರನ್ನು ಚಿತ್ರಿಸಲಾಗಿದೆ. ಅವರು ಮಧ್ಯದಲ್ಲಿ ಬರುವ ತೀರ್ಥಂಕರರ ಸುತ್ತಲಿನ ಆಪರಸ್ಥಲ (Background)ವು ಎಲ್ಲೆಡೆಯಲ್ಲೂ ಕೆಂಪುವರ್ಣದಿಂದ ಭರಿತವಾಗಿದೆ. ಕಮಾನಿನ ಹಾಗೂ ತೀರ್ಥಂಕರರ ಆಕೃತಿಗಳಿಗೆ ಕಪ್ಪು ವರ್ಣದಿಂದ ಹಾಕಲಾದ ಬಾಹ್ಯರೇಖೆಯಲ್ಲಿ ಕಲಾವಿದನ ಪರಿಶ್ರಮದ ಸಾಧನೆ ವ್ಯಕ್ತವಾಗಿದೆ. ಸೂಕ್ಷವಾಗಿಯೂ ಸತ್ವಯುತವಾಗಿಯೂ ಎಳೆಯಲಾದ ಕುಂಚದ ರೇಖಾವಿನ್ಯಾಸವು ಈ ಚಿತ್ರಗಳನ್ನು ಚಿಕಣಿ ಚಿತ್ರಗಳಿಗೆ ಉತ್ತಮ ಉದಾಹರಣೆಯನ್ನಾಗಿಸಿದೆ. ಮೂಡಬಿದರೆಯ ಧವಲಾ ಗ್ರಂಥಗಳಲ್ಲಿನ ಚಿತ್ರ ಶೈಲಿಗಿಂತಲೂ ಭಿನ್ನವಾದ ಶ್ರವಣಬೆಳಗೋಳದ ಚಿತ್ರಶೈಲಿಗೆ ಹತ್ತಿರವಾಗಿಯೂ ಹಲವು ಭಿನ್ನತೆಗಳಿಂದ ಕೂಡಿದ ಈ ಫಲಕಗಳ ಚಿತ್ರ ರಚನಾಶೈಲಿ ವಿಶಿಷ್ಟವಾದುದಾಗಿದೆ.

**೨. ತಾಳೆಗರಿಯ ಮೇಲೆ ಕಂಟದಿಂದ ಕೊರೆದ ಚಿತ್ರಗಳು**

ಕರ್ನಾಟಕದಲ್ಲಿ ದೊರೆಯುವ ಜೈನ ತಾಳೆಯೋಲೆ ಗ್ರಂಥಗಳ ರಕ್ಷಾಫಲಕಗಳ ಮೇಲೆ ಚಿತ್ರರಚನೆಗಳನ್ನು ಕಾಣಬಹುದಾದರೂ ತಾಳೆಯೋಲೆಗಳ ಮೇಲೆ ರಚಿಸಿದ ರೇಖಾಚಿತ್ರಗಳು ತೀರ ಅಪರೂಪ. ಸಧ್ಯ ಕರ್ನಾಟಕದಲ್ಲಿ ದೊರೆತ ಶ್ರವಣಬೆಳಗೊಳದಲ್ಲಿ ಸುರಕ್ಷಿತವಾಗುಳಿದ ಓಲೆಗರಿಗಳ ಮೇಲಿನ ರೇಖಾಚಿತ್ರಗಳಿರುವ ೧೫-೧೬ನೆಯ ಶತಮಾನದಲ್ಲಿ ರಚನೆಗೊಂಡಿರಬಹುದಾದ 'ತ್ರಿಲೋಕಸಾರ' ಗ್ರಂಥದ ಒಂದು ಪ್ರತಿ ಇದೆ. ಸುಮಾರು ೨೪" ಉದ್ದವಾಗಿರಬಹುದಾದ ತಾಳೆಯ ಗರಿಗಳ ಮೇಲೆ ಗ್ರಂಥದ ಬರಹ ಹಾಗೂ ಚಿತ್ರದ ರಚನೆಗಳೆರಡನ್ನು ಕಾಣಬಹುದು.

ಜೈನ ಬಸದಿ ದೇವಾಲಯಗಳ ಮುಂಭಾಗದಲ್ಲಿ ಕಂಗೊಳಿಸುವ ಮಾನಸ್ತಂಭಗಳನ್ನು ಈ ಗರಿಗಳಲ್ಲಿ ಬಿಡಿಸಿತೋರಿಸಲಾಗಿದೆ. ಸ್ತಂಭದ ಪೀಠ, ಮೇಲಿನ ಸ್ತಂಭರಚನೆ. ಅದಕ್ಕೂ ಮೇಲಿರುವ ಮಂಟಪ ಈ ಪ್ರಮುಖ ಭಾಗಗಳೆಲ್ಲವನ್ನು ಒಂದರಂತೆ ಒಂದಿರದೆ ವೈವಿಧ್ಯಪೂರ್ಣವಾಗಿವೆ. ಪ್ರತಿಕಾರನನಾದವನು ಸ್ತಂಭದ ಸ್ಥೂಲವಾದ ನಕ್ಷೆಯನ್ನು ಮಾತ್ರ ಚಿತ್ರಿಸದೆ ಪೀಠದ ಭಾಗ ಅಲ್ಲಿನ ನಕ್ಷಾ ವಿವರಗಳು. ಪೀಠ ಭಾಗದಲ್ಲಿ ಮತ್ತು ಪೀಠದ ಮೇಲ್ಗಡೆಯಲ್ಲಿ ಬರಬೇಕಾದ ವಿವಿಧ ಹಂತಗಳು, ಅವುಗಳ ವಿಶಿಷ್ಟವಾದ ರಚನೆ ಆಕಾರದಿಗಳು ಮುಂದೆ ಸಣ್ಣದಾಗುತ್ತ ಮೇಲೇಳುವ ಸ್ತಂಭದ ಮಧ್ಯ ಮಧ್ಯ ಬರುವ ಪಟ್ಟಿಕೆಗಳು, ಇಲ್ಲಿನ ನಕ್ಷಾ ವಿವರಗಳು ಸ್ತಂಭದ ಶಿರೋಭಾಗದಲ್ಲಿ ವಿಜೃಂಭಿಸುವ ಕುಂಭದಾಕೃತಿ ಮಂಟಪದ ಕೃತಿಗಳು ಅಪರೂಪವಾಗಿ ಚಿತ್ರಿಸಲ್ಪಟ್ಟಿವೆ. ಅವುಗಳಿಂದ ಪ್ರಮಾಣಕ್ಕೆ ಒಪ್ಪುವಂತೆ ಓಲಾಡುವ ಗಂಟೆ ಸಹಿತವಾದ ಸರಪಳಿಗಳು ಒಂದಕ್ಕೊಂದು ಪೂರಕ ಇಡೀ ಮಾನಸ್ತಂಭದ



ಸೊಬಗನ್ನು ತಾಳೆಗೆರಿಯಲ್ಲಿ ಎರಕ ಹಾಕಿದಂತಿದೆ. ವಾಸ್ತು ಶಿಲ್ಪ ಶಿಲ್ಪಗಳೆರಡರ ಸುಂದರ ಸಮನ್ವಯಕೃತಿಗಳಾದ ಮಾನಸ್ತಂಭಗಳನ್ನು ಚಿತ್ರಿಸಿದ್ದು. ಈ ಹಸ್ತಪ್ರತಿಯ ಚಿತ್ರಗಳಿಗೂ ಅನ್ವಯಿಸುವಂತಹದು. ಇದೇ ಹಸ್ತಪ್ರತಿಯಲ್ಲಿ ದೇವಸ್ಥಾನ ಬಸದಿಗಳಲ್ಲಿ ನಡೆಯುತ್ತಿದ್ದ ವೈಭವದ ಪೂಜೆಗಳಿಗೆ ಬೇಕಾಗುವ ಅಲಂಕರಣ ವಸ್ತು, ಸಾಧನೆ ಸಾಮಗ್ರಿಗಳ ಚಿತ್ರವಿವರಗಳೂ ಇರುವಂತಿದೆ. ತ್ರಿಲೋಕ ಸಾರವು ಶಾಸ್ತ್ರ ಸಂಬಂಧಿ ಚಿತ್ರರಚನೆಗಳ ಒಡೆದು ಕಾಣುವ ಮಾನಸ್ತಂಭವೇ ಎನ್ನುವಂತಿದೆ.

### ೨. ಮೂಡಬಿದಿರೆಯ ಧವಲಾ ಗ್ರಂಥದ ಚಿತ್ರಗಳು

ಕರ್ನಾಟಕದ ಕಲಾಭಂಡಾರಕ್ಕೆ ಜೈನರು ಕೊಟ್ಟ ಕೊಡುಗೆ ತುಂಬ ವೈಭವೋಪೇತವಾಗಿದ್ದು, ಹಸ್ತಪ್ರತಿಗಳಲ್ಲಿನ ಪತ್ರಚ್ಛೇದನ ಕಲೆಯಂತೆ ವರ್ಣಚಿತ್ರ ರಚನೆಗಳು ಕೂಡ ಜೈನ ಕಲಾ ವೈಭವದ ಇನ್ನೊಂದು ಮುಖವನ್ನು ಪರಿಚಯಿಸುವಂತಿದೆ. ಉತ್ತರದಲ್ಲಿ ತಾಳೆಗರಿಗಳ ಮೇಲೆ ಮಸಿಯಿಂದ ಬರೆದ ವರ್ಣಗಳಿಂದ ಚಿತ್ರರಚನೆ ಮಾಡಿದ ನಿದರ್ಶನಗಳು ಕಂಡು ಬರುತ್ತವೆ. ಇಂತವು ದಕ್ಷಿಣದಲ್ಲಿ ತೀರ ವಿರಳ ಮೂಡಬಿದಿರೆಯ ಜೈನ ಮಠದಲ್ಲಿಯ ಧವಲತ್ರಯವು ಇಂತ ಅಪರೂಪ ನಿದರ್ಶನಗಳೆನಿಸಿವೆ. ಧವಲ, ಜಯಧವಲ ಮತ್ತು ಮಹಾಧವಲ (ಮಹಾಬಂಧ) ಎಂಬ ಮೂರು ಪ್ರತ್ಯೇಕ ಸಂಪುಟಗಳಿಂದೊಡಗೂಡಿದ ವಿಖ್ಯಾತ ಗ್ರಂಥವಾಗಿದೆ. ಮೂಲ 'ಶಟ್ಖಂಡಾಗಮ' ಎಂಬ ಜೈನ ಗ್ರಂಥದ ಮೇಲೆ ವೀರಸೇನ ಬರೆದ ವ್ಯಾಖ್ಯಾನವೇ ಧವಲತ್ರಯ. (ದಿಗಂಬರ ಜೈನ ಪರಂಪರೆಯಲ್ಲಿ ವರ್ಣಿಸಿರುವಂತೆ ವರ್ಧಮಾನ ಮಹಾವೀರ ಭೋದಿಸಿದ ಹನ್ನೆರಡು ಸಿದ್ಧಾಂತಗಳನ್ನು ಇಂದ್ರಭೂತ ಗೌತಮನು ಕ್ರೋಢಿಕರಿಸಿದ ನಂತರ ಗುಣಧರ ಕ್ರಿ.ಪೂ. ೧೨ನೇಯ ಶತಮಾನ ಹಾಗೂ ಧರಸೇನ ಎಂಬ ಶ್ರೇಷ್ಠ ಜೈನಾಚಾರ್ಯರು ಬರೆದ "ಕಷಾಯ ಪಾವುಡ" ಮತ್ತು "ಶಟ್ಖಂಡಾಗಮ" ಎಂಬ ಗ್ರಂಥದಲ್ಲಿ ಈ ದ್ವಾದಶ ಸಿದ್ಧಾಂತಗಳಿವೆ. ಇವುಗಳಲ್ಲಿ 'ಶಟ್ಖಂಡಾಗಮ'ದ ಬಗೆಗಳ ಬರೆದ ವ್ಯಾಖ್ಯಾನವೆ ಈ ಧವಳ ಗ್ರಂಥ'[೬]

ಮೂಲತಃ ರಾಷ್ಟ್ರಕೂಟ ಅಮೋಘವರ್ಷನ ಕಾಲದ್ದೆಂದು (ಕ್ರಿ.ಶ.೮೧೬ ) ಹೇಳಲಾದ ಧವಲತ್ರಯದ ಹಸ್ತಪ್ರತಿ ಹೊಯ್ಸಳ ಕಾಲದಲ್ಲಿ (ಕ್ರಿ.ಶ.೧೨ ನೆಯ ಶತಮಾನದಲ್ಲಿ) ಗೇರುಸೊಪ್ಪೆಯಲ್ಲಿ ಸಿದ್ಧಗೊಂಡಿತ್ತು. ಗ್ರಂಥದ ಕೊನೆಯಲ್ಲಿ ಕಾಣಸಿಗುವ ಕನ್ನಡ ಉಲ್ಲೇಖವೆನ್ನಿಲ್ಲಿ ಗಮನಿಸಬಹುದು. "ಮಾಂಡಲೀಕ ನಾಡಿನ ಶ್ರೀ ಭುಜಬಲ ಗಂಗ ಪೆರ್ಮಾಡಿ ದೇವರ ಅತ್ತೆಯಾದ ದೇವಿಯಕ್ಕಂ ಶ್ರುತ ಪಂಚಮಿಯಂ ನೋಂತುಜ್ಜವಣೆಯಂ ಮಾಡಿ ಬನ್ನಿಕೆರೆಯ ಉತ್ತುಂಗ ಚೈತ್ಯಾಲಯದ ಆಚಾರ್ಯರುಂ ಭುವನ ವಿಖ್ಯಾತವೆನಿಸಿದ ತಮ್ಮ ಗುರುಗಳು ಶ್ರೀ ಶುಭಚಂದ್ರ ಸಿದ್ಧಾಂತ ದೇವರ್ಗೆ ಶ್ರುತಪೂಜೆಯಂ ಮಾಡಿ ಬರೆಸಿಕೊಟ್ಟ ಧವಲೆಯ ಪುಸ್ತಕಂ ಮಂಗಳಮಹಾ.[೭] ಜಯಧವಲ ಗ್ರಂಥದಲ್ಲಿ ತಿಳಿಸಿದಂತೆ ಅದರ ಪ್ರತಿಯನ್ನು ಅಣ್ಣ ಶ್ರೇಷ್ಠಿ ಎಂಬಾತ ಬರೆಸಿ ಪದ್ಮಸೇನ ಮುನೀಂದ್ರರಿಗೆ ಶಾಸ್ತ್ರದಾನವಾಗಿ ನೀಡಿದ ಮಹಾಧವಲದಲ್ಲಿ ನಿರೂಪಿಸಿದಂತೆ ರೂಪ ಮತಿಸೇನನ ಪತ್ನಿ ಶ್ರೀಮತಿಯೆಂಬುವಳು ಶ್ರೀ ಪಂಚಮಿಯ ಉಪಾಸನೆ ಮಾಡಿ ಆ ಗ್ರಂಥದ ಪ್ರತಿಯನ್ನು ಶ್ರೀ ಮಾಘನಂದಿ ಆಚಾರ್ಯರಿಗೆ ದಾನ ಮಾಡಿದಳು. ಶ್ರವಣಬೆಳಗೊಳದ ಶಿಲಾಲೇಖವೊಂದರಲ್ಲಿ ಈ ಪದ್ಮನಂದಿ, ಕುಲಭೂಷಣ, ಕುಲಚಂದ್ರ, ಹಾಗೂ ಶುಭಚಂದ್ರರನ್ನು ಹೆಸರಿಸಿದೆ.[೮] ಕೊಲ್ಲಾಪುರದ ಶಿಲಾಶಾಸನದಲ್ಲೂ ಇವರ ಹೆಸರು ಬರುತ್ತದೆ.[೯] ಧವಲತ್ರಯದ ಲಿಪಿವಿನ್ಯಾಸ ಹೊಯ್ಸಳ ವಿಷ್ಣುವರ್ಧನನ ಕಾಲದ ಶಿಲಾ ಮತ್ತು ತಾಮ್ರಶಾಸನಗಳಲ್ಲಿ ಕಂಡುಬರುವ ಲಿಪಿವಿನ್ಯಾಸದಂತಿದೆ. ಅಲ್ಲದೆ ಪ್ರಸ್ತುತ ಗ್ರಂಥದ ಕಲಾ ನಮೂನೆಗಳಿಗೂ (Motifs) ಸಮಕಾಲೀನ ಶಿಲಾ ಮತ್ತು ತಾಮ್ರ ಶಾಸನಗಳಲ್ಲಿ ಕಾಣಸಿಗುವ ನಮೂನೆಗಳನ್ನು ಅನ್ಯೋನ್ಯ ಹೋಲಿಕೆಯಿಂದ ಈ ಎಲ್ಲಾ ದೃಷ್ಟಿಯಿಂದಲೂ

---

೦೬. ಎಚ್.ಆರ್.ರಘುನಾಥ ಭಟ್ : ಚಿತ್ರಕಲಾ ಪ್ರಪಂಚ, ಧವಳ ಗ್ರಂಥಗಳಲ್ಲಿ ಹೊಯ್ಸಳ ಚಿತ್ರಶೈಲಿ, ಪು.ಸಂ.೨೩೨
೦೭. -ಅದೇ- ಪು.ಸಂ.೨೨೮
೦೮. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪು.ಸಂ.೪೦
೦೯. -ಅದೇ- ಪು.ಸಂ.೪೦



ನೋಡಿದರೆ ಧವಲತ್ರಯವನ್ನು ಹೊಯ್ಸಳ ವಿಷ್ಣುವರ್ಧನ ಶಾಂತಲೆಯರ ಕಾಲದಲ್ಲಿ (ಮುಖ್ಯವಾಗಿ ಕ್ರಿ.ಶ. ೧೧೧೩ರಿಂದ ಕ್ರಿ.ಶ.೧೧೨೦ರೊಳಗೆ) ರಚಿಸಿರಬಹುದಾಗಿದೆ.

ಧವಲತ್ರಯ ಓಲೆಗಳು ಸಾಕಷ್ಟು ವಿಶಾಲವಾಗಿದ್ದು ಅವುಗಳ ಉದ್ದಗಲ ೬೬.೫ ಸೆ.ಮೀ.-೭ ಸೆ.ಮೀ. ಹೊಂದಿದ್ದು ಸಾಮಾನ್ಯವಾಗಿ ಈ ಗ್ರಂಥದಲ್ಲಿ ಬರುವ ಚಿತ್ರಗಳು ಹಾಳೆಯ ಎಡ, ಬಲ ಮಗ್ಗುಲಲ್ಲಿದ್ದು ಮಧ್ಯದಲ್ಲಿ ಬರವಣಿಗೆಯಿಂದ ಚಿತ್ರದ ಆಚೀಚೆ ಚಿತ್ತಾರದ ಅಂಚುಗಳಿದ್ದು ಅವುಗಳ ಒಟ್ಟು ಗಾತ್ರ ೨೧೧-೩ ಇಂಚು ಅಗಲ ಮತ್ತು ೪-೫ ಇಂಚು ಉದ್ದವಾಗಬಹುದು. ಅಗಲ ತೀರ ಕಡಿಮೆಯಿರುವುದರಿಂದ ಅದರಲ್ಲಿ ಬರುವ ವ್ಯಕ್ತಿಗಳು ಎರಡು ಇಂಚುಗಳಷ್ಟು ಇದ್ದು ಇವು ಚಿಕಣಿ ಚಿತ್ರಗಳನ್ನು ಹೋಲುವಂತಿದೆ. ಚಿತ್ರಗತ ವಿಷಯಗಳು ಜಿನಧರ್ಮದ ತೀರ್ಥಂಕರರು ಯಕ್ಷ- ಯಕ್ಷಿಯರು ಮುನಿಗಳು ಕೆಲವೇ ಸಂದರ್ಭಗಳಲ್ಲಿ ಅವರ ಭಕ್ತರು ಸಖಿಯರ ಸೇವಕಿಯರನ್ನು ಹೊಂದಿದ ಚಿತ್ರಗಳನ್ನು ಕಾಣಬಹುದು.

ಧವಲಾಗ್ರಂಥದ ಮೂಲ ಭಾಷೆ ಪ್ರಾಕೃತವಾದರೂ ಅಲ್ಲಲ್ಲಿ ಸಂಸ್ಕೃತ ನುಡಿ ಬಂದಿದ್ದರೂ ಅದನ್ನು ಬರೆದದ್ದು ಕನ್ನಡ ಲಿಪಿಯಲ್ಲಿ ಇರುವುದು ವಿಶೇಷವಾಗಿದೆ. ಮುಖ್ಯವಾಗಿ ಇದನ್ನು ಕಂಠದಿಂದ ಬರೆಯದೆ ಲೇಖನಿ ಮತ್ತು ಅರಗಿನ ಕಪ್ಪು ಶಾಯಿಗಳಿಂದ ಬರೆದಿದ್ದಾರೆ. ಬರೆದ ಲಿಪಿ ಒಂದಿಷ್ಟೂ ಅಚ್ಚಳಿಯದೇ ಕಡುಪಾಗಿ ಇಂದಿಗೂ ಕಾಣಸುತ್ತದೆ.[೧೦] ತಾಡವಾಲೆಯ ಮೇಲೆ ಕಂಠದ ಬರವಣಿಗೆಗೂ ಕಾಲಕ್ರಮದಲ್ಲಿ ವ್ಯತ್ಯಾಸ ಕಾಣಿಸದೆ ಓದುವುದು ಕಷ್ಟವಾಗುತ್ತದೆ. ಈ ಬರಹ ಗೇರುಸೊಪ್ಪೆಯಲ್ಲಿ ಮೊದಲು ಸಿದ್ಧಗೊಂಡಿತೆಂದು ಆದರಿಂದಲೇ ತಿಳಿದುಬರುತ್ತದೆ. ಲೇಖನಿ ಶಾಯಿಗಳಿಂದ ಓಲೆಗರಿಯ ಮೇಲೆ ಚಂದ ಅಕ್ಷರಗಳಿಂದ ಬರೆಯಲು ಉತ್ಸಾಹಪಟ್ಟ ಲಿಪಿಕಾರರು ಚಿತ್ರಗಳಿಂದ ಅಲಂಕರಿಸಲು ಸಾಹಸಪಟ್ಟದು ಸ್ವಾಭಾವಿಕವಾಗಿದೆ. ಅಂಟಿನ ಜತೆಯಲ್ಲಿ ಮಣ್ಣಿನಿಂದ ಹಾಗೂ ಸಸ್ಯಮೂಲದಿಂದ ಬಣ್ಣಗಳನ್ನು ಅರೆದು ಕುಂಚಗಳಿಂದ ಲೇಪಿಸಿರಬಹುದು.

ಈ ಚಿತ್ರಗಳು ರೇಖಾ ಪ್ರಧಾನವಾಗಿದ್ದು ಚಪ್ಪಟೆ ಬಣ್ಣಗಳಿಂದ ತುಂಬಿದ್ದು, ಕೆಂಪು, ಹಸಿರು, ಕಪ್ಪು, ಪಾಟಲಿ, ಗೋಪಿ, ಕಪ್ಪುಗಳಂತಹ ಕಲವೇ ಮಣ್ಣಿನ ಬಣ್ಣಗಳಿಂದ ನಿರ್ವಹಿಸಿದವು. ಬಾನಿನ ಮುಗಿಲುಗಳನ್ನು ಚಿತ್ರಿಸುವಾಗ ಅಥವಾ ಕುಳಿತ ಪದ್ಮದಳಗಳನ್ನು ಚಿತ್ರಿಸುವಾಗ ಮಾತ್ರ ಬಣ್ಣಗಳಲ್ಲಿ ಛಾಯಾ ವ್ಯತ್ಯಾಸಗಳನ್ನು ಕಾಣಿಸಿದ್ದಾರೆಯೇ ಹೊರತು ಉಳಿದೆಡೆಗಳಲ್ಲಿ ವರ್ಣಲೇಪನ ಚಪ್ಪಟೆಯಾಗಿದೆ.ಈ ಚಿತ್ರಗಳ ಚೆಲುವಿಗೆ ಕಾರಣವಾದ ಅಂಶವೇನಂದರೆ ಅಲ್ಲಿನ ಲಲಿತ ಸೂಕ್ಷ್ಮ ರೇಖೆಗಳು ಮತ್ತು ಬಣ್ಣಗಳಲ್ಲಿನ ಪರಸ್ಪರ ಹೊದಿಕೆ, ಹೆಚ್ಚಿನ ಚಿತ್ರಗಳಲ್ಲಿ ವ್ಯಕ್ತಿಗಳ ಹಿನ್ನೆಲೆಯನ್ನು ಕಪ್ಪು, ಇಲ್ಲವೇ ಕೆಂಪು ಅಥವಾ ಕೆಂಪು ಬಣ್ಣದ ಸೂಕ್ಷ್ಮರೇಖೆಗಳಿಂದ ರಚನೆಗೊಂಡಿದ್ದು ಸೂಕ್ಷ್ಮ ಲಲಿತ ರೇಖೆಗಳೆ ಇಲ್ಲಿ ವಿವಿಧ ಆಕೃತಿಗಳಿಗೆ ಸೊಬಗನ್ನುಂಟುಮಾಡುವ ಕಲಾಕೃತಿಗಳಾಗಿದ್ದು ಇವು ನೈಜವಾಗಿ ಮೂಡಿವೆ.

ಧವಲಾದ ಮೊದಲ ಹಾಳೆಯು ನೀಳವಾದ ಒಂದು ಪಟ್ಟಿಯಂತೆ ಚಿತ್ರಿಸಿದ್ದು ಇಲ್ಲಿ ಕಪ್ಪು ಮತ್ತು ಕೆಂಪು ಹಿನ್ನೆಲೆಗಳನ್ನು ಹೊಂದಿದ್ದು ಹದಿನೈದು ತೀರ್ಥಂಕಕರನ್ನು ಮಾತ್ರ ಕಾಣಬಹುದಾಗಿದ್ದು, ತೀರ್ಥಂಕರರ ಲಾಂಛನಗಳಿಂದ ಹಾಗೂ ತೀರ್ಥಂಕರರ ಸಾಂಕೇತಿಕ ವರ್ಣಗಳಿಂದ ಗುರುತಿಸಬಹುದಾಗಿದೆ.[೧೧]

**ಧವಲಾ ಗ್ರಂಥದ ಚಿತ್ರಗಳ ವಸ್ತು ವಿಷಯ**

೧.ಜಯಧವಲಾ ಗ್ರಂಥದ ಬಹುಶಃ ೪೦೩ ನೇ ಪುಟದ ಎಡಗಡೆಯಲ್ಲಿ ಕಪ್ಪು ಹಿನ್ನೆಲೆಯನ್ನು ಹೊಂದಿದೆ. ಪಾರ್ಶ್ವನಾಥ ತೀರ್ಥಂಕರರ ಚಿತ್ರವಿದ್ದು ಪಾರ್ಶ್ವನಾಥ ತೀರ್ಥಂಕರರು ನಾಗಛತ್ರಿಯ ಕೆಳಗೆ ಪದ್ಮಾಸನದಲ್ಲಿ

೧೦. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪು.ಸಂ.೪೭

೧೧. -ಅದೇ- ಪು.ಸಂ.೪೭



ಧ್ಯಾನಸ್ಥನಾಗಿ ಕುಳಿತಿದ್ದು ಅವರ ಅಕ್ಕಪಕ್ಕದಲ್ಲಿ ಇಬ್ಬರು ಶಿಷ್ಯರು ಕೈಮುಗಿದು ಕುಳಿತಿರುವುದನ್ನು ಕಾಣಬಹುದು. ಹಾಗೂ ಈ ಸಂಯೋಜನೆ ಚಿತ್ರದ ಆಚೀಚೆ ಸುಂದರವಾದ ನಕ್ಷಾಚಿತ್ರದ ಅಂಚುಗಳನ್ನು ಕಾಣಬಹುದು.

೨.ದೇವಿಯೊಬ್ಬಳು ಪೀಠದ ಮೇಲೆ ಕುಳಿತಿದ್ದು ಅವಳ ಎರಡು ಕೈಗಳಲ್ಲಿ ಆಯುಧಗಳಿವೆ. ಇನ್ನೆರಡು ಅಭಯ ಮತ್ತು ವರದ ಹಸ್ತಗಳು ಈಕೆಯ ಮೈಬಣ್ಣ ಕೆಂಪು ಬಣ್ಣದಿಂದ ಕೂಡಿದ್ದು ದೇವಿಯ ಎಡ ಮತ್ತು ಬಲಭಾಗದ ಚೌರಿ ಹಿಡಿದು ನಿಂತ ಸೇವಕಿಯರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಇವರು ಹಸಿರು ಬಣ್ಣದ ರವಿಕೆಗಳನ್ನು ಹೊಂದಿದ್ದು ಹೊಯ್ಸಳ ಶೈಲಿಯ ತುರುಬನ್ನು ಕಾಣಬಹುದು. ಚಿತ್ರದ ಚೌಕಟ್ಟು ಹಸಿರು ಬಣ್ಣವನ್ನು ಹೊಂದಿದ್ದು ಚಿತ್ರಿಗತ ವ್ಯಕ್ತಿಗಳ ಆಚೀಚಿನ ಮರಗಳು ಎರಡು ಬದಿಯಲ್ಲಿ ಕಾಣಬಹುದು. ಹಾಗೂ ಚಿತ್ರದ ಎರಡು ಬದಿಯಲ್ಲಿ ನಕ್ಷಾಚಿತ್ರದ ಪಟ್ಟಿಗಳನ್ನು ಹೊಂದಿದೆ.

೩. ಕೆಂಪು ಮೈಬಣ್ಣವನ್ನು ಹೊಂದಿರುವ ಯಕ್ಷಿಣಿ ಚಿತ್ರವಾಗಿದ್ದು ನಾಲ್ಕು ಕೈಗಳಲ್ಲಿ ಯಕ್ಷನು ಕಿರೀಟಧಾರಿಯಾಗಿ ಹಸಿರು ಬಣ್ಣದ ವಸ್ತ್ರವನ್ನು ಹೊಂದಿದ್ದು ತನ್ನ ಪಕ್ಕದಲ್ಲಿ ನವಿಲಿನ ಸುಂದರವಾದ ನಕ್ಷಾಚಿತ್ರವನ್ನು ಕಾಣಬಹುದು. ಚಿತ್ರದ ಬದಿಯಲ್ಲಿ ಹಿನ್ನೆಲೆ ಗಾಢ ಹಸಿರು ಬಣ್ಣವನ್ನು ಲೇಪಿಸಲಾಗಿದೆ. ಚಿತ್ರದ ಎರಡು ಬದಿಯಲ್ಲಿ ಸಾಧಾರಣ ಹಸಿರು ಬಣ್ಣದ ಪಟ್ಟಿಕೆಗಳನ್ನು ಕಾಣಬಹುದು.

೪. ನಾಲ್ಕನೆಯ ಚಿತ್ರದಲ್ಲಿ ಸರ್ವಸಂಗ ಪರಿತ್ಯಾಗಿಯಾದ ಬಾಹುಬಲಿ ತಪಸ್ಸಿಗೆ ತೆರಳಲು ಸಿದ್ಧವಾಗುವುದು ಆತ ಸೋದರಿಯರು ಆತನನ್ನು ತಡೆಯಲು ಬರುತ್ತಿರುವುದನ್ನು ಪಡಿಮೂಡಿಸಲಾಗಿದೆ. ಈ ಕೃತಿಯಲ್ಲಿ ಬಾಹುಬಲಿ ಚಿತ್ರಣವನ್ನು ಹೊಂದಿದ್ದು. ನೇರವಾದ ಮೂರ್ತಿಯಾಗಿದ್ದು ಬಾಹುಬಲಿ ಹಸಿರು ಬಣ್ಣವನ್ನು ಹೊಂದಿದ್ದು. ನಿರ್ವಾಣ ಮೂರ್ತಿಯಾಗಿದ್ದು ಬಾಹುಬಲಿ ಚಿತ್ರಣವನ್ನು ಮಾತ್ರ ಕೆಂಪು ಪಟ್ಟಿಕೆಯಲ್ಲಿ ಸಂಯೋಜಿಸಿದ್ದು ಸೋದರಿಯರನ್ನು ಎಡ ಮತ್ತು ಬಲಭಾಗದಲ್ಲಿ ಹಸಿರು ಬಣ್ಣದ ಪೀಠ ಪಟ್ಟಿಕೆಯಲ್ಲಿ ಚಿತ್ರಿಸಿದ್ದು ಈ ಇಬ್ಬರು ಸೋದರಿಯರು ಬಾಹುಬಲಿಯ ಕಡೆಗೆ ಮುಖಮಾಡಿ ತ್ರಿಭಂಗಿಯಲ್ಲಿ ಕೈಮಾಡಿ ನಿಂತಿದ್ದಾರೆ.

೫. **ಧ್ಯಾನಲೀನನಾಗಿ ಕುಳಿತ ತೀರ್ಥಂಕರ:** ಪೀಠದ ಆಚೀಚೆ ಚಾಮರಗಳಿದ್ದು ಪೀಠದ ಮೇಲ್ಗಡೆಯ ಅಲಂಕಾರವಾಗಿ ಕಾಣಿಸುವುದರ ಮುನ್ನೆಲೆಯಲ್ಲಿ ಸ್ಥಿರಾಸನಸ್ಥನಾಗಿ ಕುಳಿತು ಜಿನಮುನಿ ಈ ಜಿನಮುನಿಯ ಬಲಪಕ್ಕದಲ್ಲಿ ಕೈಮುಗಿದು ಕೊಂಡು ಕುಳಿತ ಮುನಿಶಿಷ್ಯನಿದ್ದು ನಿರಾಲಂಕೃತವಾದ ಚಿತ್ರಗಳಾಗಿರುವುದನ್ನು ಕಾಣಬಹುದು. ಕಪ್ಪು ಬಣ್ಣದ ಹಿನ್ನೆಲೆಯಲ್ಲಿ ಕೆಂಪು ಬಣ್ಣವನ್ನು ಸಂಯೋಜಿಸಿದ ಕಲಾಕೃತಿಯಾಗಿದ್ದು ಚಿತ್ರದ ಎರಡು ಬದಿಯಲಿ ಜ್ಯಾಮಿತಿಯ ಕೆಲವು ರೇಖಾ ನಕ್ಷೆಗಳನ್ನು ಹೊಂದಿದೆ.

೬. ಜಯಧವಲದ ಬಹುಶಃ ೫೧ನೆಯ ಪುಟದ ಚಿತ್ರದಲ್ಲಿ ಆಸೀನನಾದ ತುಂಬು ದೇಹ ವರ್ಣದ ಮಾತಂಗ ಯಕ್ಷನ ಚಿತ್ರವಿದ್ದು ಯಕ್ಷತನ್ನ ನಡುವಿಗೆ ಕೆಂಪು ಬಟ್ಟೆಯನ್ನು ಧರಿಸಿದ್ದು, ಕಿರೀಟ ಆಭರಣಗಳೊಂದಿಗೆ ಅಲಕೃಂತನಾಗಿದ್ದು ಆನೆಯೊಂದಿಗೆ ಆಸೀನನಾಗಿದ್ದು, ಆತನ ಆಚೀಚೆ ಎರಡು ಮರಗಳಿವೆ. ಅವುಗಳಲ್ಲಿ ತುಂಬಿಕೊಂಡ ಹಸಿರೆಲೆಗಳನ್ನು ಕಾಣಬಹುದು.

೭. ಪೀಠದ ಮೇಲೆ ಆಸೀನವಾಗಿರುವ ಯಕ್ಷಿಯೂ ನಾಲ್ಕು ಕೈಗಳಿಂದ ಕೂಡಿದ್ದು ಯಕ್ಷಿಯ ಎರಡು ಕೈಗಳಲ್ಲಿ ಆಯುಧಗಳಿದ್ದು, ಇನ್ನೆರಡು ಅಭಯ ಮತ್ತು ವರದ ಹಸ್ತಗಳಿಂದ ಸರ್ವಾಭರಣ ಭೂಷಿತಳಾಗಿರುವುದನ್ನು ಕಾಣಬಹುದು. ಯಕ್ಷಿಯ ಬಲಭಾಗದಲ್ಲಿ ಜೈನ ಮುನಿ ಇದ್ದು ಮುನಿಯ ಬಳಿ ಹಂಸದ ನಕ್ಷಾ ಚಿತ್ರ ರೂಪವನ್ನು ಚಿತ್ರಿಸಿದ್ದಾರೆ. ಕಪ್ಪು ಬಣ್ಣದ ಹಿನ್ನೆಲೆಯನ್ನು ಹಾಗೂ ಕೆಂಪು ಬಣ್ಣದಿಂದ ಸಂಯೋಜಿಸಿದ ಕೃತಿಯಾಗಿದ್ದು ಎಡ ಮತ್ತು ಬಲಭಾಗದಲ್ಲಿ ಸುಂದರವಾದ ನಕ್ಷಾಚಿತ್ರಗಳನ್ನು ಕಾಣಬಹುದು.



೧.



೨.



೩.



೪.

ಮೂಡಬಿದರೆಯ ಧವಳ ಗ್ರಂಥದಲ್ಲಿನ ಹಸ್ತಪ್ರತಿ ಚಿತ್ರಗಳು



೫.



೬.



೭.



೮.

ಮೂಡಬಿದರೆಯ ಧವಳ ಗ್ರಂಥದ ಹಸ್ತಪ್ರತಿಯಲ್ಲಿರುವ ಚಿತ್ರಗಳು



೮. ಉನ್ನತ ಪೀಠದಲ್ಲಿ ಕುಳಿತಿರುವ ಯಕ್ಷಿಯ ಚಿತ್ರವಾಗಿದ್ದು, ದೇವಿಯ ಎರಡು ಕೈಗಳಲ್ಲಿ ಆಯುಧಗಳಿವೆ. ಹಾಗೂ ಇನ್ನೆರಡು ಅಭಯ ಮತ್ತು ವರದ ಹಸ್ತಗಳು ಈ ಯಕ್ಷಿಯ ಮೈಬಣ್ಣ ಕೆಂಪು ವರ್ಣದಿಂದ ಕೂಡಿದ್ದು ಯಕ್ಷಿಯ ಎರಡು ಬದಿಯಲ್ಲಿ ಚೌರಿ ಹಿಡಿದು ನಿಂತ ಸೇವಕಿಯರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಈ ಚಿತ್ರಗಳ ಹಿನ್ನೆಲೆಯಲ್ಲಿ ಸುಂದರವಾದ ನಕ್ಷಾಚಿತ್ರಗಳನ್ನು ಹೊಂದಿದ್ದು ಬಲಭಾಗದಲ್ಲಿ ಹಸಿರು ಎಲೆಯ ವೃಕ್ಷವನ್ನು ಕಾಣಬಹುದು. ಹಾಗೆ ಚಿತ್ರ ಸಂಯೋಜನೆಗೆ ಎಡಭಾಗದಲ್ಲಿ ಹಸಿರು ಬಣ್ಣದ ಮೂರು ಪಟ್ಟಿಕೆಗಳನ್ನು ಹೊಂದಿದೆ. ಇಲ್ಲಿ ವಿಶೇಷವಾಗಿ ಹಸಿರು, ಕೆಂಪು ಬಣ್ಣಗಳಿಂದ ಚಿತ್ರ ಸಂಯೋಜಿಸಲಾಗಿದೆ.

**೨.ವರ್ಣಚಿತ್ರಗಳಿಂದ ಕೂಡಿದ ಕಾಗದ ಹಸ್ತಪ್ರತಿಗಳು**

೧. ಮಹಾಪುರಾಣದ ಕಾಗದ ಹಸ್ತಪ್ರತಿಯ ವರ್ಣಚಿತ್ರಗಳು

೨. ಮೈಸೂರು ಶೈಲಿಯ ಬಿಡಿ ಕಾಗದ ಹಸ್ತಪ್ರತಿಯ ವರ್ಣಚಿತ್ರಗಳು

೩. ಕೊಲ್ಲಾಪುರದ ಶ್ರೀ ಲಕ್ಷ್ಮಿಸೇನ ಭಟ್ಟಾರಕ ಮಠದಲ್ಲಿ ಇರುವ ಪ್ರತಿಷ್ಠಾ ತಿಲಕರ ಕಾಗದ ಹಸ್ತಪ್ರತಿಯ ವರ್ಣಚಿತ್ರಗಳು

**೧. ಮಹಾಪುರಾಣದ ಕಾಗದ ಹಸ್ತಪ್ರತಿಯ ವರ್ಣ ಚಿತ್ರಕಲೆ**

ಶ್ರವಣಬೆಳಗೊಳದ ರಾಷ್ಟ್ರೀಯ ಪ್ರಾಕೃತ ಅಧ್ಯಯನ ಮತ್ತು ಸಂಶೋಧನ ಕೇಂದ್ರದಲ್ಲಿರುವ ಹಸ್ತಪ್ರತಿಭಂಡಾರದಲ್ಲಿ ಇರುವಂತೆ ಮಹಾಪುರಾಣದ ಕಾಗದ ಹಸ್ತಪ್ರತಿಯಲ್ಲಿ ಸುಮಾರು ೨೩ ಬಿಡಿ ಕಾಗದ ಹಸ್ತಪ್ರತಿಯನ್ನು ಕಾಣಬಹುದು. ಈ ಹಸ್ತಪ್ರತಿಯಲ್ಲಿ ೨೨ ತೀರ್ಥಂಕರರು ತಮ್ಮ ಸಾಂಕೇತಿಕ ವರ್ಣದೊಂದಿಗೆ ಲಾಂಛನವನ್ನು ಹಾಗೂ ಯಕ್ಷ– ಯಕ್ಷಿಯರೊಡನೆ ಸಂಯೋಜಿಸಲಾಗಿದೆ. ಹಾಗೂ ಕೊನೆಯ ಚಿತ್ರದಲ್ಲಿ ತೀರ್ಥಂಕರರ ಸಮೂಹವನ್ನು ಇಲ್ಲಿ ಕಾಣಬಹುದಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸುವ ಅವುಗಳ ವಸ್ತು ವಿಷಯ ಲಕ್ಷಣಗಳನ್ನು ಕುರಿತು ಚರ್ಚಿಸಲಾಗಿದೆ.

**೧. ವೃಷಭನಾಥ ತೀರ್ಥಂಕರರು**

ಋಷಭನಾಥ ತೀರ್ಥಂಕರರು ಪದ್ಮಹಾಸನದಲ್ಲಿ ಕೆಂಪು ತಾವರೆಯ ಮೇಲೆ ಧ್ಯಾನಸ್ಥರಾಗಿ ಕುಳಿತಿದ್ದು, ತೀರ್ಥಂಕರರ ಮೈಬಣ್ಣ ಸುವರ್ಣ ವರ್ಣವನ್ನು ಹೊಂದಿದ್ದು, ಸ್ವಾಮಿಯ ಪೀಠದ ಕೆಳಭಾಗದಲ್ಲಿ ಎತ್ತು ಬಿಳಿ ವರ್ಣದಿಂದ ಹಸಿರು ವಸ್ತ್ರವನ್ನು ಧರಸಿ ಶಾಂತ ರೀತಿಯಲ್ಲಿ ಕುಳಿತಿದ್ದಾರೆ. ಆದಿ ಋಷಭ ತೀರ್ಥಂಕರರ ಬಲಭಾಗದಲ್ಲಿ ಗೋವರ್ಧನ ಯಕ್ಷ ನಾಲ್ಕು ಭುಜಗಳನ್ನು ಹೊಂದಿದ್ದು ಎಡ ಕೈಯಿಂದ ಸ್ವಾಮಿಗೆ ಪುಷ್ಪದ ಮಾಲೆಯನ್ನು ಅರ್ಪಿಸುತ್ತಿದ್ದಾನೆ. ಸ್ವಾಮಿಯ ಕಡೆಗೆ ಮುಖಮಾಡಿ ಪೀಠದ ಮೇಲೆ ನಿಂತಿದ್ದು ಅದೇ ರೀತಿ ಸ್ವಾಮಿಯ ಬಲಭಾಗದಲ್ಲಿ ಚಕ್ರೇಶ್ವರಿ ಯಕ್ಷಿಯರು ಕೆಂಪು ಸೀರೆಯನ್ನು ಧರಿಸಿದ, ನಾಲ್ಕು ಭುಜಗಳನ್ನುಳ್ಳ ದೇವಿಯ ಉತ್ತರ ಭಾರತೀಯ ಶೈಲಿಯ ಸಾಂಪ್ರದಾಯಿಕ ಸ್ತ್ರೀಯರ ತುರುಬನ್ನು ಹಾಗೂ ಸೀರೆಯ ಸೆರಗಿನಿಂದ ಮುಚ್ಚಿದ್ದಾರೆ. ತೀರ್ಥಂಕರರಿಗೆ ಬಲಗೈಯಿಂದ ಮಾಲೆಯನ್ನು ಅರ್ಪಿಸುತ್ತಿದ್ದು ಸ್ವಾಮಿಯ ಕಡೆ ಮುಖಮಾಡಿ ನಿಂತಿರುವುದನ್ನು ಕಾಣಬಹುದು. ಒಟ್ಟಾರೆ ಈ ಕಲಾಕೃತಿಯು ನೈಜವಾದ ನೈಸರ್ಗಿಕವಾದ ಹೂಬಳ್ಳಿಯಲ್ಲಿ ನಕ್ಷಾ ಚಿತ್ರಗಳಿಂದ ಪೂರ್ಣಗೊಳಿಸಲಾಗಿದೆ.

**೨. ಅಜಿತ ತೀರ್ಥಂಕರರು**

ಸುಂದರವಾದ ಕೆಂಪು ಕಮಲದ ಪೀಠದ ಮೇಲೆ ಖಡ್ಗಾಸನದಲ್ಲಿ ನಿಂತಿರುವ ಅಜಿತ ತಿರ್ಥಂಕರ ಮೈ ಬಣ್ಣವು ಸುವರ್ಣವರ್ಣವಾಗಿದೆ. ಇಲ್ಲಿ ಸಾಂಕೇತಿಕವಾಗಿ ಹಳದಿ ವರ್ಣವನ್ನು ಬಳಸಲಾಗಿದ್ದು ತೀರ್ಥಂಕರ



ಎತ್ತರದಷ್ಟು ಪ್ರಭಾವಳಿಯಲ್ಲಿ ಕೀರ್ತಿಮುಖವನ್ನು ಹೊಂದಿದೆ. ಸ್ವಾಮಿಯ ಎಡ ಮತ್ತು ಬಲಭಾಗದಲ್ಲಿ ಮಹಾಯಕ್ಷ ಹಾಗೂ ರೋಹಿಣಿ ಯಕ್ಷ ಯಕ್ಷಿಯರನ್ನು ಕಾಣಬಹುದಾಗಿದೆ. ಈ ಇಬ್ಬರು ಯಕ್ಷ ಯಕ್ಷಿಯರು ನಾಲ್ಕು ಭುಜಗಳನ್ನು ಹೊಂದಿದ್ದಾರೆ. ತೀರ್ಥಂಕರರ ಕಡೆ ಮುಖಮಾಡಿ ನಿಂತಿದ್ದು ಅಜಿತ ತೀರ್ಥಂಕರರ ಲಾಂಛನವಾದ ಆನೆ ಶ್ವೇತ ವರ್ಣದಿಂದ ಕೂಡಿದೆ. ಯಕ್ಷ ಯಕ್ಷಿಯರ ಪೀಠದ ಕೆಳ ಭಾಗದಲ್ಲಿ ಸುಂದರವಾದ ಹೂಬಳ್ಳಿಯ ರಂಗೋಲಿಯ ಸಂಯೋಜನೆ ಮತ್ತು ಯಕ್ಷ ಯಕ್ಷಿಯರ ಚಿತ್ರ ಸಂಯೋಜನೆ ಉತ್ತರ ಭಾರತದ ಚಿತ್ರಕಲಾ ಶೈಲಿಯನ್ನು ಹೋಲುತ್ತದೆ ಎಂದು ಕಂಡುಬರುತ್ತದೆ.

**೩. ಶಂಭುತೀರ್ಥಂಕರರು**

ಕುದುರೆ ಲಾಂಛನವುಳ್ಳ ಸುವರ್ಣ ವರ್ಣದ ಮೈ ಬಣ್ಣವನ್ನು ಹೊಂದಿರುವ ತೀರ್ಥಂಕರರು ಪೀಠದ ಮೇಲೆ ಖಡ್ಗಾಸನದಲ್ಲಿ ನಿಂತಿದ್ದು ಶಾಂತ ರೀತಿಯ ಮುಖ ಹೊಂದಿದ್ದಾರೆ. ಶಂಭುತೀರ್ಥಂಕರ ಎಡಭಾಗದಲ್ಲಿ ಪ್ರಜ್ಞಪ್ತಿ ಯಕ್ಷಿಯು ಬಿಳಿ ಸೀರೆಯನ್ನು ಧರಿಸಿದ್ದಾರೆ. ಯಕ್ಷಿಯು ಎರಡು ಕೈಗಳಿಂದ ಹೃದಯ ಸ್ಪರ್ಶ ನಮಸ್ಕಾರವನ್ನು ಮಾಡುತ್ತಿದ್ದು ಇನ್ನೊಂದು ಬಲಗೈಯಲ್ಲಿ ಸ್ವಾಮಿಗೆ ಕೆಂಪು ಪುಷ್ಪಗಳನ್ನು ಸಮರ್ಪಿಸುತ್ತಿರುವ ಹಾಗೆ ಇದೆ. ಸ್ವಾಮಿಯ ಬಲಭಾಗದಲ್ಲಿ ತ್ರಿಮುಖ ಯಕ್ಷ ಸಹ ನಾಲ್ಕುಭುಜಗಳನ್ನು ಹೊಂದಿದ್ದಾನೆ. ಖಡ್ಗಾಸನದಲ್ಲಿ ನಿಂತಿರುವ ಶಂಭುವ ತೀರ್ಥಂಕರರ ಹಿಂಭಾಗದಲ್ಲಿ ಸುಂದರವಾದ ಪ್ರಭಾವಳಿ ಮತ್ತು ಕೀರ್ತಿ ಮುಖ ಹೊಂದಿದ್ದು ಹಳದಿ ವರ್ಣದಿಂದ ರಚನೆಯಾಗಿದೆ ಹಾಗೂ ಕಪ್ಪು ವರ್ಣದಿಂದ ಬಾಹ್ಯ ರೇಖೆಯನ್ನು ಎಳೆಯಲಾಗಿದೆ. ತೀರ್ಥಂಕರರ ಹಿಂಭಾಗದ ಪ್ರಭಾವಳಿಯನ್ನು ಒಳಭಾಗದಲ್ಲಿ ಗಾಢವಾದ ಕೆಂಪು ವರ್ಣವನ್ನು ಹೊಂದಿದೆ. ಒಟ್ಟಾರೆ ಈ ಕಲಾಕೃತಿಯು ನೈಸರ್ಗಿಕವಾದ ಹೂಬಳ್ಳಿಯ ನಕ್ಷಾಚಿತ್ರದಿಂದ ಸಂಯೋಜಿಸಲಾಗಿದೆ.

**೪. ಅನಂತ ತೀರ್ಥಂಕರರು**

ಸುವರ್ಣ ಮೈ ಬಣ್ಣವನ್ನು ಹೊಂದಿದ್ದು ಮತ್ತು ಏಡಿ ಅಥವಾ ಕರಡಿ ಲಾಂಛನವನ್ನು ಹೊಂದಿರುವ ಅನಂತ ತೀರ್ಥಂಕರರು ಈ ಕಲಾಕೃತಿಯಲ್ಲಿ ಖಡ್ಗಾಸನದಲ್ಲಿ ಪೀಠದ ಮೇಲೆ ನಿಂತಿದ್ದಾರೆ. ಉತ್ತರ ಭಾರತದ ಗುಮ್ಮಟಾಕಾರದಲ್ಲಿ ಮೂರು ಮಂಟಪದ ಮಧ್ಯಭಾಗದಲ್ಲಿ ನಿಂತಿರುವ ಅನಂತ ತೀರ್ಥಂಕರರು ಬಲಭಾಗದಲ್ಲಿ ಪಾತಳ ಯಕ್ಷ ಹಾಗೂ ಎಡಭಾಗದಲ್ಲಿ ತಾರಿಕಾ ಯಕ್ಷರು ಸೇವಕರಾಗಿದ್ದು ಈ ಇಬ್ಬರು ತೀರ್ಥಂಕರರ ಕಡೆಗೆ ಮುಖಮಾಡಿ ನಮಸ್ಕಾರ ಮಾಡುತ್ತಿದ್ದಾರೆ. ಈ ಇಬ್ಬರೂ ಯಕ್ಷ ಯಕ್ಷಿಯರು ಚತುರ್ಭುಜದಲ್ಲಿರುವರಾಗಿದ್ದಾರೆ. ಈ ಮೂರು ಮಂಟಪಗಳಲ್ಲಿ ಮಧ್ಯಭಾಗದ ಮಂಟಪ ಸ್ವಲ್ಪ ಎತ್ತರವಿದ್ದು ಗೋಪುರದ ಎರಡು ಬದಿಯಲ್ಲಿ ಮಂಗಗಳನ್ನು ಕಾಣಬಹುದು. ಅದೇ ರೀತಿಯಾಗಿ ಯಕ್ಷ ಯಕ್ಷಿಯರು ಮಂಟಪದ ಮೇಲೆ ಸುಂದರವಾಗಿ ಗಿಳಿಗಳು ಹಸಿರು ಮೈಬಣ್ಣದಿಂದ ಕಂಗೊಳಿಸುತ್ತವೆ. ಅನಂತ ತೀರ್ಥಂಕರರ ಮಂಟಪದ ಭಾಗದಲ್ಲಿ ಸ್ವಾಮಿಯ ಸೇವೆಗೆ ಚಾಮರ ಹಾಗೂ ದೀಪಸ್ತಂಭಗಳು ಕಂದು ಬಣ್ಣದಿಂದ ರಚನೆಯಾಗಿದ್ದು ಒಟ್ಟಾರೆ ಈ ಕಲಾಕೃತಿಯಲ್ಲಿ ವಿನ್ಯಾಸದಲ್ಲಿ ಪ್ರಾಣಿ ಪಕ್ಷಿಯ ರಚನೆ ವೈವಿಧ್ಯಮಯವಾಗಿದೆ. ಈ ಚಿತ್ರ ಸಂಯೋಜನೆಯು ತುಂಬಾ ವಿಶಿಷ್ಟವಾಗಿದೆ.

**೫. ಅಭಿನಂದನ ತೀರ್ಥಂಕರರು**

ಚತುರಾನನ ಹಾಗೂ ವಜ್ರಶೃಂಖಲಾ ಯಕ್ಷ ಯಕ್ಷಿಯ ಸಮೇತನಾದ ಅಭಿನಂದನ ತೀರ್ಥಂಕರರು ತಿಳಿಹಳದಿ (ಸುವರ್ಣವರ್ಣ)ಮೈಬಣ್ಣ ಹೊಂದಿದ್ದು ಖಡ್ಗಾಸನದಲ್ಲಿ ನಿಂತಿದ್ದಾರೆ. ತೀರ್ಥಂಕರರ ಪೀಠದ ಕೆಲಭಾಗದಲ್ಲಿ ತೀರ್ಥಕರರ ಲಾಂಛನವಾದ ಮಂಗವನ್ನು ಕಾಣಬಹುದು. ಮಂಗದ ಮುಖವು ತಿಳಿ ಕೆಂಪು ಅಥವಾ ಗುಲಾಬಿ ವರ್ಣದಿಂದ ರಚನೆಯಾಗಿದ್ದು ಮೈಮೇಲೆ ಕಪ್ಪು ಬಣ್ಣದ ಕೂದಲಿನ ರಚನೆಯನ್ನು ಹೊಂದಿದೆ.



ಒಂದೇ ಪೀಠದ ಮೇಲೆ ನಿಂತಿರುವ ಅಭಿನಂದನ ತೀರ್ಥಂಕರರಿಗೆ ಪ್ರಭಾವಳಿಯನ್ನು ಹೊಂದಿದ್ದು ಹಸಿರು ಬಣ್ಣದ ಹಿನ್ನೆಲೆಯನ್ನು ಕಾಣಬಹುದು. ತೀರ್ಥಂಕರರ ಎರಡು ಬದಿಯಲ್ಲಿ ತೆಂಗಿನ ಮರಗಳಿದ್ದು ಜೊತೆಯಲ್ಲಿ ಯಕ್ಷ ಯಕ್ಷಿಯರು ತೀರ್ಥಂಕರರ ಕಡೆಗೆ ಮುಖ ಮಾಡಿ ನಮಸ್ಕಾರ ಮುದ್ರೆಯಲ್ಲಿ ನಿಂತಿದ್ದಾರೆ.

**೬. ಚಂದ್ರಪ್ರಭ ತೀರ್ಥಂಕರರು**

ಅರ್ಧಚಂದ್ರ ಲಾಂಛನವುಳ್ಳ ಖಡ್ಗಾಸನದಲ್ಲಿ ನಿಂತಿರುವ ಚಂದ್ರಪ್ರಭ ತೀರ್ಥಂಕರರ ಮೈಬಣ್ಣ ಬಿಳಿಯಾಗಿದ್ದು, ಒಂದೇ ಪೀಠದ ಮೇಲೆ ಮೂರು ಪ್ರಭಾವಳಿಯನ್ನು ಹೊಂದಿರುವ ಮಧ್ಯಭಾಗದಲ್ಲಿ ತೀರ್ಥಂಕರರಿದ್ದು ಬಲಭಾಗದಲ್ಲಿ ವಿಜಯಯಕ್ಷ ಹಾಗೂ ಎಡಭಾಗದಲ್ಲಿ ಜ್ವಾಲಾಮಾಲಿಕಾ ಯಕ್ಷಿಯನ್ನು ಕಾಣಬಹುದು. ಜ್ವಾಲಾಮಾಲಿಕಾ ಯಕ್ಷಿಯು ತೀರ್ಥಂಕರರ ಕಡೆ ಮುಖ ಮಾಡಿ ನಮಸ್ಕಾರ ಮುದ್ರೆಯಲ್ಲಿ ನಿಂತಿದ್ದು, ಯಕ್ಷ ತೀರ್ಥಂಕರರ ಕಡೆ ಮುಖಮಾಡಿ ಪುಷ್ಪವನ್ನು ಸಮರ್ಪಿಸುತ್ತಿರುವ ಹಾಗೆ ಇದೆ. ಪೀಠದ ಮೇಲಿರುವ ಪ್ರಭಾವಳಿಯ ಸಾಧಾರಣವಾಗಿದೆ. ತೀರ್ಥಂಕರರ ಹಿಂಭಾಗದಲ್ಲಿ ಕೆಂಪು ವರ್ಣದ ಹಿನ್ನೆಲೆಯನ್ನು ಹೊಂದಿದೆ. ಮಧ್ಯಗೋಪುರದ ಎರಡು ಬದಿಯಲ್ಲಿ ನವಿಲುಗಳೂ ತಮ್ಮ ಪುಚ್ಚವನ್ನು ಹರಡಿದ್ದು ಚಿತ್ರಸಂಯೋಜನೆಗೆ ಎಡೆಮಾಡಿವೆ. ಕಲಾಕೃತಿಯ ಮೇಲಿಂದ ಕೆಳಗಿನವರೆಗೆ ಇರುವ ಹೂ ಹಸಿರು ಬಳ್ಳಿಯ ಜೊತೆಗೆ ನವಿಲಿನ ಪುಚ್ಚವು ಚಿತ್ರ ಸಂಯೋಜನೆ ವೈವಿಧ್ಯಮಯವಾಗಿದೆ.

**೭. ಸುಪಾರ್ಶ್ವ ತೀರ್ಥಂಕರರು**

ಸ್ವಸ್ತಿಕ ಲಾಂಛನವುಳ್ಳ ಸುಪಾರ್ಶ್ವ ತೀರ್ಥಂಕರರ ಮೈಬಣ್ಣ ಹಸಿರಾಗಿದ್ದು. ಒಂದೇ ಪೀಠ ಮೇಲೆ ಒಂದೇ ಪ್ರಭಾವಳಿಯನ್ನು ಮೂರು ಭಾಗವಾಗಿ ರಚಿಸಲಾಗಿದೆ. ತೀರ್ಥಂಕರರ ಪ್ರಭಾವಳಿಯ ಸ್ವಲ್ಪ ಎತ್ತರವಿದ್ದು ಕೆಂಪು ವರ್ಣದ ಹಿನ್ನೆಲೆಯನ್ನು ಹೊಂದಿದೆ. ಎಡಬದಿಯಲ್ಲಿ ಕಲಾಕಾ ಯಕ್ಷಿಯು ನೀಲಿಬಣ್ಣದ ಸೀರೆಯನ್ನು ಹೊಂದಿದ್ದು. ನಾಲ್ಕು ಭುಜವುಳ್ಳ ಯಕ್ಷಿಯು ನಮಸ್ಕಾರ ಮುದ್ರೆಯನ್ನು ತೀರ್ಥಂಕರರ ಕಡೆ ಮುಖವಾಗಿ ನಿಂತಿದ್ದು, ಬಲಬದಿಯಲ್ಲಿ ಮಾತಂಗ ಯಕ್ಷ ತೀರ್ಥಂಕರರ ಕಡೆ ಮುಖಮಾಡಿ ನಮಸ್ಕಾರ ಮುದ್ರೆಯಲ್ಲಿ ನಿಂತಿರುವ ಮಾತಂಗ ಯಕ್ಷ ಚತುರ್ಭುಜವುಳ್ಳವನಾಗಿದ್ದಾನೆ. ತೀರ್ಥಂಕರರ ಪ್ರಭವಳಿಯ ಗೋಪುರ ಭಾಗದಲ್ಲಿ ಎರಡು ಬದಿಯಲ್ಲಿ ಗಿಳಿಯ ಕಲಾತ್ಮಕವಾದ ಭಂಗಿಯಲ್ಲಿ ನಿಂತಿದ್ದು. ಯಕ್ಷ ಯಕ್ಷಿಯರ ಪ್ರಭಾವಳಿಯ ಮೇಲೆ ಮಂಗದ ಎರಡು ಚಿತ್ರಗಳನ್ನು ಕಾಣಬಹುದು. ಯಕ್ಷ ಪ್ರಭಾವಳಿಯ ಮೇಲಿರುವ ಮಂಗವು ಗುಲಾಬಿ ಬಣ್ಣದಿಂದ ಕೂಡಿದ್ದು ಯಕ್ಷಿಯ ಪ್ರಭಾವಳಿಯ ಮೇಲೆ ಕುಳಿತಿರುವ ಮಂಗವು ಕಂದು ಬಣ್ಣವನ್ನು ಹೊಂದಿದೆ. ಒಟ್ಟಾರೆ ಈ ಕಾಗದ ಹಸ್ತಪ್ರತಿಯ ಮೇಲೆ ರಚಿಸಿರುವ ಕಲಾಕೃತಿ ಕಲಾವಿದನ ಕಲಾ ನೈಪುಣ್ಯದ ಜೊತೆಗೆ ಸೃಜನಶೀಲತೆಯನ್ನೂ ಇಲ್ಲಿ ಗಮನಿಸಬಹುದು.

**೮. ಶ್ರೇಯಾಂಸ ತೀರ್ಥಂಕರರು**

ವಿಶಿಷ್ಟವಾದ ಪ್ರಭಾವಳಿಯನ್ನು ಹೊಂದಿರುವ ತೀರ್ಥಂಕರರ ಹಿನ್ನೆಲೆ ಕೆಂಪು ವರ್ಣದಿಂದ ರಚನೆಯಾಗಿದೆ. ಕೆಂಪು ಬಣ್ಣದ ಬಾಹ್ಯವಾಗಿ ಹಸಿರು ವರ್ಣದಿಂದ ಕೊಡಿದೆ. ಕಂದು ಬಣ್ಣದಿಂದ ಕೂಡಿದ ಬಾಹ್ಯರೇಖೆಯು ತುಂಬ ನೈಜವಾಗಿ ಮೂಡಿದ್ದು, ಪ್ರಭಾವಳಿಯ ಕೀರ್ತಿಮುಖವು ತುಂಬ ವಿಶಿಷ್ಟವಾಗಿದ್ದು ಬಿಳಿ ವರ್ಣದ ಚುಕ್ಕಿಯಿಂದ ನಕ್ಷಾ ಚಿತ್ರಣವನ್ನು ಮಾಡಿದೆ. ಶ್ರೇಯಾಂಸ ತೀರ್ಥಂಕರರ ಮೈಬಣ್ಣವು ಸುವರ್ಣವಾಗಿದ್ದು ಈ ಕಲಾಕೃತಿಯಲ್ಲಿ ದಟ್ಟವಾದ ಹಳದಿ ಮಿಶ್ರಿತ ಕಂದು ಬಣ್ಣವನ್ನು ಹೊಂದಿದೆ. ತೀರ್ಥಂಕರರು ಖಡ್ಗಾಸನದಲ್ಲಿ ನಿಂತಿದ್ದು, ಬಲಭಾಗದಲ್ಲಿ ಕಿಂನರೇಶ ಯಕ್ಷ ತೀರ್ಥಂಕರರ ಕಡೆ ಮುಖಮಾಡಿ ತ್ರಿಭಂಗಿಯಲ್ಲಿ ನಿಂತಿದ್ದು, ನಾಲ್ಕು ಭುಜಗಳನ್ನು ಹೊಂದಿದ್ದು ಕೆಂಪು ಶಿಲ್ಪ ಹಾಗೂ ಬಿಳಿ ಪಂಚೆಯನ್ನು ಹೊಂದಿದೆ. ತೀರ್ಥಂಕರರ ಎಡ



ಬದಿಯಲ್ಲಿ ಗೌರಿ ಯಕ್ಷಿಯು ಚತುರ್ಭಜವುಳ್ಳವಳಾಗಿದ್ದು ಕೆಂಪು ಸೀರೆ, ಹಸಿರು ರವಿಕೆಯನ್ನು ತೊಟಿದ್ದು, ಎರಡು ಕೈ ಕಮಲವನ್ನು ಹಿಡಿದು ಮತ್ತೆರಡು ಕೈಯಲ್ಲಿ ಪುಷ್ಪ ಮಾಲೆಯನ್ನು ಸ್ವಾಮಿಗೆ ಅರ್ಪಿಸುತ್ತಿರುವುದನ್ನು ಕಾಣಬಹುದು. ಈ ಕಲಾಕೃತಿಯಲ್ಲಿ ಮತ್ತೊಂದು ವಿಶಿಷ್ಟವಾಗಿರುವುದು ಸ್ವಾಮಿಯ ಲಾಂಛನವಾದ ಗರುಡ. ತೀರ್ಥಂಕರರ ಪೀಠದ ಮುಂಭಾಗದಲ್ಲಿ ಕುಳಿತ್ತಿದ್ದು ಹಸಿರು ಬಣ್ಣದ ರೆಕ್ಕೆಯನ್ನು ಹೊಂದಿರುವುದು, ಚಿತ್ರ ಸಂಯೋಜನೆಯಲ್ಲಿ ಹೂ ಬಳ್ಳಿಯ ವೈಶಿಷ್ಟ ಸಂಯೋಜನೆಯನ್ನು ಹೊಂದಿದೆ.

**೯. ನೇಮಿನಾಥ ತೀರ್ಥಂಕರರು.**

ಕಪ್ಪು ಕೂಡಿದ ಕೆಂಪು ವರ್ಣದ ಮೈ ಬಣ್ಣವನ್ನು ಹೊಂದಿರುವ ಹದಿಮೂರನೆಯ ತೀರ್ಥಂಕರರ ಲಾಂಛನವು ಶಂಖವಾಗಿದ್ದು ಖಡ್ಗಾಸನದಲ್ಲಿ ನಿಂತಿರುವ ತೀರ್ಥಂಕರರ ಬಲಭಾಗದಲ್ಲಿ ಗೋವೇಧ ಯಕ್ಷ ಹಾಗೂ ಎಡಭಾಗದಲ್ಲಿ ಅಮ್ರೂ ಯಕ್ಷಿಯವು ತೀರ್ಥಂಕರ ಕಡೆ ಮುಖ ಮಾಡಿ ನಮಸ್ಕರಿಸುತ್ತಿದ್ದಾರೆ. ಈ ಯಕ್ಷ ಯಕ್ಷಿಯರು ಚತುರ್ಭುಜವನ್ನು ಹೊಂದಿದ್ದು ಒಂದೇ ಪೀಠದ ಮೇಲೆ ನಿಂತಿದ್ದಾರೆ. ಈ ಕಲಾಕೃತಿಯಲ್ಲಿ ಹೂ ಬಳ್ಳಿಯ ಸಂಯೋಜನೆ ಹಾಗೂ ತೀರ್ಥಂಕರರ ಪ್ರಭಾವಳಿಯು ವಿಶಿಷ್ಟವಾಗಿದೆ.

**೧೦. ಮುನಿಸುವ್ರತ ತೀರ್ಥಂಕರರು**

ಉತ್ತರ ಭಾರತೀಯ ಕಲಾಶೈಲಿಯ ಮೂರು ಮಂಟಪಗಳಲ್ಲಿ, ಖಡ್ಗಾಸನದಲ್ಲಿ ನಿಂತಿರುವ ಇಪ್ಪತ್ತನೆಯ ತೀರ್ಥಂಕರ ಮುನಿಸುವ್ರತ ತೀರ್ಥಂಕರರ ಮೈಬಣ್ಣವು ಮೂಲತಃ ಕೆಂಪು ವರ್ಣವಾಗಿದೆ. ಈ ಕಲಾಕೃತಿಯಲ್ಲಿ ಶ್ಯಾಮ ವರ್ಣದ ರೀತಿ ಕಂಡು ಬರುವುದು. ಹಳದಿ ಹಿನ್ನೆಲೆಯನ್ನು ಹೊಂದಿರುವ ತೀರ್ಥಂಕರರ ಲಾಂಛನವು ಆವಿ(ಅಮೆ)ಯಾಗಿದೆ. ಎಡಭಾಗದಲ್ಲಿ ವರುಣ ಹಾಗೂ ಬಲಭಾಗದಲ್ಲಿ ಅಪರಾಜಿತ ಯಕ್ಷ ಯಕ್ಷಿಯರನ್ನು ಹೊಂದಿದ್ದು ಮಂಟಪಗಳ ಮೇಲ್ಭಾಗದಲ್ಲಿ ನವಿಲುಗಳು ಹಾಗೂ ಗಿಳಿಗಳಿಂದ ಚಿತ್ರವನ್ನು ಸಂಯೋಜಿಸಲಾಗಿದೆ.

**೧೧. ಪಾರ್ಶ್ವನಾಥ ತೀರ್ಥಂಕರರು**

ಸರ್ಪ ಲಾಂಛನವುಳ್ಳ ತೀರ್ಥಂಕರರು ಪದ್ಮಾಸನದಲ್ಲಿ ಕುಳಿತಿದ್ದು ಧ್ಯಾನಸ್ಥರಾಗಿದ್ದಾರೆ. ತೀರ್ಥಂಕರರ ಹಿಂಭಾಗದಲ್ಲಿ ಒಂಭತ್ತು ಹೆಡೆಯ ಸರ್ಪವು ತೀರ್ಥಂಕರರಿಗೆ ನೆರಳನ್ನು ನೀಡುತ್ತಿದೆ. ತೀರ್ಥಂಕರರ ಬಲಭಾಗದಲ್ಲಿ ಪಾರ್ಶ್ವ ಅಥವಾ ಧರಣ ಯಕ್ಷ ತೀರ್ಥಂಕರರ ಕಡೆ ಮುಖ ಮಾಡಿ ನಮಸ್ಕರಿಸುತ್ತಿದ್ದು, ಯಕ್ಷಣ ಅರ್ಧ ದೇಹ ಮುಂಡದ ಕೆಳಭಾಗ ಹಾವಿನ ಆಕಾರಹೊಂದಿದೆ. ಈ ಯಕ್ಷ ನಾಲ್ಕು ಭುಜಗಳನ್ನು ಹೊಂದಿರುತ್ತಾನೆ, ತೀರ್ಥಂಕರರ ಎಡಭಾಗದಲ್ಲಿ ಪದ್ಮಾವತಿ ಯಕ್ಷಿಯು ಕುಳಿತು ಎರಡು ಕೈಯಲ್ಲಿ ದೀಪಗಳನ್ನು ಹಿಡಿದು ಮತ್ತೆರಡು ಕೈಯಲ್ಲಿ ನಮಸ್ಕರಿಸುತ್ತಿದ್ದಾಳೆ. ರಾಜಸ್ಥಾನಿ ವಾಸ್ತು ಶೈಲಿಯುಳ್ಳ ಮಂಟಪಗಳಿಂದ ಚಿತ್ರವನ್ನು ಸಂಯೋಜಿಸಲಾಗಿದೆ.

**೧೨. ಧರ್ಮ ತೀರ್ಥಂಕರರು**

ವಜ್ರದಂಡ ಲಾಂಛನವುಳ್ಳ ಹಾಗೂ ಸುವರ್ಣ ವರ್ಣದ ಮೈ ಬಣ್ಣವನ್ನು ಹೊಂದಿರುವ ತೀರ್ಥಂಕರರು ಖಡ್ಗಾಸನದಲ್ಲಿ ನಿಂತಿದ್ದು ಕೆಂಪು ಬಣ್ಣದ ಹಿನ್ನೆಲೆಯನ್ನು ಹೊಂದಿರುವ ತೀರ್ಥಂಕರರು ಸರಳವೂ ಸುಂದರವಾಗಿರುವ ಪ್ರಭಾವಳಿಯನ್ನು ಹೊಂದಿದ್ದಾರೆ. ಬಲಭಾಗದಲ್ಲಿ ಕಿನ್ನರರು ಹಾಗೂ ಎಡಭಾಗದಲ್ಲಿ ಅನಂತಗತಿ ಯಕ್ಷ-ಯಕ್ಷಿಯರು ತೀರ್ಥಂಕರರ ಸೇವೆಗೆ ನಿಂತಿದ್ದಾರೆ.

**೧೩. ಖಡ್ಗಾಸನದಲ್ಲಿ ನಿಂತಿರುವ ತೀರ್ಥಂಕರರು**

ಶ್ವೇತವರ್ಣದ ಮೈ ಬಣ್ಣವನ್ನು ಹೊಂದಿರುವ ತೀರ್ಥಂಕರರು ಏಡಿಯ ಲಾಂಛನವನ್ನು ಹೊಂದಿದ್ದಾರೆ. (ತೀರ್ಥಂಕರರ ಹೆಸರು ವಿವರ ಇಲ್ಲ) ಯಕ್ಷ ಯಕ್ಷಿಯರ ಸಮೇತನಾಗಿ ಒಂದೆ ಪೀಠದ ಮೇಲೆ ನಿಂತಿದ್ದು



ತೀರ್ಥಂಕರರಿಗೆ ಕೆಂಪು ಹಿನ್ನೆಲೆಯ ಸಾಧಕನ ಪ್ರಭಾವಳಿಯನ್ನು ಹೊಂದಿದ್ದು. ತೀರ್ಥಂಕರರಿಗೂ ಹಾಗೂ ಯಕ್ಷ ಯಕ್ಷಿಯರಿಗೂ ಕೂಡಿ ಒಂದು ವಿಶಿಷ್ಟ ಶೈಲಿಯ ಪ್ರಭಾವಳಿಯನ್ನು ಕೀರ್ತಿಮುಖದೊಂದಿಗೆ ಸಂಯೋಜಿಸಲಾಗಿದೆ. ಕೆಂಪು ಹೂ ಬಳ್ಳಿಯ ಕಲಾಕೃತಿಯಲ್ಲಿ ಖಾಲಿ ಇರುವ ಸ್ಥಳವನ್ನು ನಕ್ಷಾಚಿತ್ರದೊಂದಿಗೆ ಸಂಯೋಜಿಸಲಾಗಿದೆ.

೧೪. ಶೀತಲ ತೀರ್ಥಂಕರರು

ಹತ್ತನೇಯ ತೀರ್ಥಂಕರರಾಗಿದ್ದು ಇವರ ಲಾಂಛನ ಕಲ್ಪವೃಕ್ಷವಾಗಿದೆ, ಸುವರ್ಣ ಮೈ ಬಣ್ಣವನ್ನು ಹೊಂದಿರುವ ತೀರ್ಥಂಕರರು, ಈ ಕಲಾಕೃತಿಯಲ್ಲಿ ಹಳದಿ ಮಿಶ್ರಿತ ಕಡು ಬಣ್ಣವನ್ನು ಹೊಂದಿದ್ದಾರೆ. ಕೀರ್ತಿ ಮುಖವುಳ್ಳ ಪ್ರಭಾವಳಿಯನ್ನು ಹೊಂದಿರುವ ತೀರ್ಥಂಕರರ ಬಲಭಾಗದಲ್ಲಿ ಬ್ರಹ್ಮ ಯಕ್ಷ ಹಾಗೂ ಎಡಭಾಗದಲ್ಲಿ ಮಾನವೀ ಯಕ್ಷಿಯರಿಬ್ಬರು ನಾಲ್ಕು ಭುಜಗಳನ್ನು ಹೊಂದಿದ್ದು ತೀರ್ಥಂಕರರಿಗೆ ಹೂ ಮಾಲೆಯನ್ನು ಅರ್ಪಿಸುತ್ತಿದ್ದಾರೆ. ಸಾಮಾನ್ಯವಾಗಿ ಚಿತ್ರ ಸಂಯೋಜನೆಯಲ್ಲಿ ಹೂ ಬಳ್ಳಿಯ ನಕ್ಷಾ ಚಿತ್ರಗಳನ್ನು ಹೊಂದಿದೆ.

೧೫. ವಾಸುಪೂಜ್ಯ ತೀರ್ಥಂಕರರು

ಕೆಂಪು ಬಣ್ಣದ ಮೈಬಣ್ಣವನ್ನು ಹೊಂದಿರುವ ತೀರ್ಥಂಕರರು ಪೀಠದ ಮುಂಭಾಗದಲ್ಲಿ ಕೋಣದ ಲಾಂಛನವನ್ನು ಹೊಂದಿದ್ದಾರೆ. ಖಡ್ಗಾಸನದಲ್ಲಿ ನಿಂತಿರುವ ತೀರ್ಥಂಕರರ ಎತ್ತರದವರೆಗೆ ಮಂಟಪದ ವಿನ್ಯಾಸವನ್ನು ಹೊಂದಿದ್ದು ಕೀರ್ತಿಮುಖ ಒಳಗೊಂಡಿದೆ. ತೀರ್ಥಂಕರರ ಬಲಭಾಗದಲ್ಲಿ ಕುಮಾರ ಯಕ್ಷ ಹಾಗೂ ಎಡಭಾಗದಲ್ಲಿ ಗಾಂಧಾರಿಕಾ ಯಕ್ಷಿಯು ತೀರ್ಥಂಕರರ ಕಡೆ ಮುಖಮಾಡಿ ಹೂಮಳೆಯನ್ನು ಸಮರ್ಪಿಸುತ್ತಿದ್ದಾರೆ. ಎರಡು ಕಂಬಗಳುಳ್ಳ ಕಮಾನಿನಲ್ಲಿ ತೀರ್ಥಂಕರರ ಯಕ್ಷ ಯಕ್ಷಿಯರನ್ನು ಸಂಯೋಜಿಸಲಾಗಿದೆ. ಕೆಂಪು, ನೀಲಿ, ಪುಷ್ಪ ಹಾಗೂ ಹಸಿರು ಎಲೆಯ ಬಳ್ಳಿಯಿಂದ ಖಾಲಿ ಇರುವ ಸ್ಥಳವನ್ನು ಪೂರ್ಣಗೊಳಿಸಲಾಗಿದೆ.

೧೬. ವಿಮಲ ತೀರ್ಥಂಕರರು

ಕಾಡು ಹಂದಿಯ ಲಾಂಛನ ಹೊಂದಿರುವ ವಿಮಲ ತೀರ್ಥಂಕರರು ಸುವರ್ಣ ವರ್ಣದ ಮೈಬಣ್ಣ ಹೊಂದಿರುವ ಆದರೆ ಈ ಕಲಾಕೃತಿಯಲ್ಲಿ ಕಂದು ಬಣ್ಣದಲ್ಲಿ ಚಿತ್ರಿಸಿದ್ದು ಕೆಂಪು ಹಿನ್ನೆಲೆಯಲ್ಲಿ ಕಾಣಬಹುದು. ಖಡ್ಗಾಸನದಲ್ಲಿ ನಿಂತಿರುವ ತೀರ್ಥಂಕರರ ಬಲಭಾಗದಲ್ಲಿ ಪಾತಾಲ ಯಕ್ಷಿ ಹಾಗೂ ಎಡಭಾಗದಲ್ಲಿ ವೈರೋಟಿ ಯಕ್ಷಿ ಈ ಇಬ್ಬರು ತೀರ್ಥಂಕರರ ಕಡೆಗೆ ಮುಖಮಾಡಿ ಹೂಮಾಲೆಯೊಂದಿಗೆ ತೀರ್ಥಂಕರರಿಗೆ ನಮಸ್ಕರಿಸುತ್ತ ತ್ರಿಭಂಗಿಯಲ್ಲಿ ನಿಂತಿದ್ದಾರೆ. ಈ ಕಲಾಕೃತಿಯಲ್ಲಿ ವಿಶಿಷ್ಟವಾದ ವಾಸ್ತು ಶೈಲಿಯ ದೇವಾಲಯದಲ್ಲಿ ತೀರ್ಥಂಕರರನ್ನು ಹಾಗೂ ಯಕ್ಷಿ ಯಕ್ಷಿಯರನ್ನೊಳಗೊಂಡಿದೆ. ತೀರ್ಥಂಕರನ್ನು ಹಾಗೂ ಯಕ್ಷ ಯಕ್ಷಿಯರನ್ನು ಕೆಂಪು ಹಿನ್ನೆಲೆಯಲ್ಲಿ ಸಂಯೋಜಿಸಿ ತೀರ್ಥಂಕರರ ಎರಡು ಬದಿಯಲ್ಲಿ ಎತ್ತರವಾದ ಗೋಪುರವು ಪಿರಾಮಿಡ್ ಆಕಾರದಲ್ಲಿದೆ. ಈ ದೇವಾಲಯಗಳ ಬದಿಯಲ್ಲಿ ಎತ್ತರವಾದ ತೆಂಗಿನ ಮರವನ್ನು ಹೊಂದಿದೆ. ಯಕ್ಷ ಯಕ್ಷಿಯರ ಮಂಟಪದ ಮೇಲೆ ನಾಲ್ಕು ಕಂಬಗಳಲ್ಲಿ ಮಂಟಪದಲ್ಲಿ ಡಮರುಗ ಹೊಂದಿದೆ.

೧೭. ಪುಷ್ಪದಂತ ತೀರ್ಥಂಕರರು

ಒಂಭತ್ತನೆಯ ತೀರ್ಥಂಕರರಾದ ಪುಷ್ಪದಂತ ತೀರ್ಥಂಕರರು ಮಕರ(ಮೊಸಳೆ) ಲಾಂಛನವನ್ನು ಹೊಂದಿದ್ದು, ಈ ತೀರ್ಥಂಕರರು ಖಡ್ಗಾಸನದಲ್ಲಿ ನಿಂತಿದ್ದಾರೆ. ವಿಶಿಷ್ಟವಾದ ಎರಡು ಅಂತಸ್ತಿನ ಮಂಟಪದ ಹಿನ್ನೆಲೆ ಹೊಂದಿದ್ದು. ಬಲಭಾಗದಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಯಕ್ಷ ತಿಳಿಕೆಂಪು ಬಣ್ಣವನ್ನು ಹೊಂದಿದ್ದಾನೆ. ಎಡಭಾಗದಲ್ಲಿ ನಾಲ್ಕು ಭುಜಗಳುಳ್ಳ ಯಕ್ಷ ತ್ರಿಭಂಗಿಯಲ್ಲಿ ತೀರ್ಥಂಕರರ ಕಡೆ ಮುಖಮಾಡಿ ಎರಡು ಕೈಗಳನ್ನು ಮೇಲಕ್ಕೆ ಎತ್ತಿ



ನಮಸ್ಕಾರ ಮಾಡುತ್ತಿದ್ದಾಳೆ. ಯಕ್ಷನ ಬಲಭಾಗದಲ್ಲಿ ಹಾಗೂ ಯಕ್ಷಿಯ ಎಡಭಾಗದಲ್ಲಿ ಇಬ್ಬರು ಸ್ತ್ರೀಯರು ತೀರ್ಥಂಕರರ ಕಡೆಗೆ ಮುಖಮಾಡಿ ನವಿಲಿನ ಪುಚ್ಛದಿಂದ ಮಾಡಿರುವ ಹಸಿರು ಬಣ್ಣದ ಚಾಮರವನ್ನು ಹಿಡಿದು ತೀರ್ಥಂಕರಿಗೆ ಸೇವೆಯನ್ನು ಮಾಡುತ್ತಿದ್ದಾರೆ. ಮೊದಲನೆಯ ಅಂತಸ್ತಿನಲ್ಲಿ ಎಡ ಮತ್ತು ಬಲಭಾಗದಲ್ಲಿ ಸ್ತ್ರೀಯರು ಶ್ವೇತ ವರ್ಣದ ಚಾಮರದಿಂದ ತೀರ್ಥಂಕರರಿಗೆ ಸೇವೆಯನ್ನು ಮಾಡುತ್ತಿದ್ದಾರೆ. ತೀರ್ಥಂಕರರ ಮೇಲೆ ಭಾಗದಲ್ಲಿ ಇರುವ ಮಂಟಪದಲ್ಲಿ ಮೂರು ಅಂತಸ್ತಿನ ಛತ್ರಿಯನ್ನು ಕಾಣಬಹುದು. ತೀರ್ಥಂಕರರ ಮೊದಲನೆಯ ಅಂತಸ್ತಿನಲ್ಲಿ ನೀಲಿ ಬಣ್ಣದ ಹಿನ್ನೆಲೆಯನ್ನು ಒಳಗೊಂಡಿದೆ. ಈ ಕಲಾಕೃತಿಯ ವಾಸ್ತುವಿನ್ಯಾಸವು ರಾಜಸ್ಥಾನ ಶೈಲಿಯಿಂದ ಕೂಡಿದೆ. ಮಂಟಪದ ಎಡ ಮತ್ತು ಬಲಭಾಗದಲ್ಲಿ ಮಂಟಪದ ಎತ್ತರದವರೆಗೆ ಎರಡು ಮನೆಗಳಂತಿದ್ದು ಅವುಗಳಲ್ಲಿ ಫಲಪುಷ್ಪಗಳನ್ನು ಒಳಗೊಂಡಿದೆ.



### ೧೮. ಕುಂಥು ತೀರ್ಥಂಕರರು

ಹದಿನೇಳನೆಯ ತೀರ್ಥಂಕರರಾಗಿದ್ದು ಕುರಿಯ ಲಾಂಛನವನ್ನು ಹೊಂದಿದ್ದಾರೆ. ಗುಮ್ಮಟಕಾರರ ಮಂಟಪದಲ್ಲಿ ಮೂರು ಭಾಗವಾಗಿದ್ದು ಮಧ್ಯಭಾಗದಲ್ಲಿ ಕುಂಥು ತೀರ್ಥಂಕರರು ಖಡ್ಗಾಸನದಲ್ಲಿ ನಿಂತಿದ್ದಾರೆ. ಬಲಭಾಗದಲ್ಲಿ ಯಕ್ಷ ಹಾಗೂ ಎಡಭಾಗದಲ್ಲಿ ಯಕ್ಷಿಯ ಸಮೇತನಾಗಿರುವ ತೀರ್ಥಂಕರರು ಸುವರ್ಣವರ್ಣದ ಮೈಬಣ್ಣವನ್ನು ಕಾಣಬಹುದು. ಈ ಕಲಾಕೃತಿಯಲ್ಲಿ ಇಟ್ಟಿಗೆ ಗೋಡೆಯಿಂದ ಕೂಡಿದ ಸಾಮಾನ್ಯ ವಾಸ್ತು ಶೈಲಿಯನ್ನು ರಚಿಸಿದ್ದು ಮಂಟಪದ ಮೇಲೆ ಎರಡು ಗಿಳಿಗಳನ್ನು ಹೊಂದಿದೆ ಹಾಗೂ ಎರಡು ಬದಿಯಲ್ಲಿ ಹಾರಾಡುವ ಪಟಗಳನ್ನು ಕಾಣಬಹುದಾಗಿದೆ.



### ೧೯.ನೇಮಿನಾಥ ತೀರ್ಥಂಕರರು

ಇಪ್ಪತ್ತೆರಡನೆಯ ತೀರ್ಥಂಕರರಾಗಿದ್ದು ಶಂಖ ಲಾಂಛನವನ್ನು ಹೊಂದಿದ್ದಾರೆ. ಸಾಮಾನ್ಯವಾಗಿ ಕಪ್ಪು ಬಣ್ಣವನ್ನು ಹೊಂದಿರುವ ತೀರ್ಥಂಕರರು ಈ ಕಲಾಕೃತಿಯಲ್ಲಿ ತಿಳಿ ನೀಲಿ ಬಣ್ಣವನ್ನು ಹೊಂದಿದ್ದಾರೆ. ಪದ್ಮಾಸನದಲ್ಲಿ ಕುಳಿತಿರುವ ತೀರ್ಥಂಕರರು ಧ್ಯಾನಸ್ಥರಾಗಿದ್ದು ಹಿನ್ನೆಲೆ ಹಳದಿಬಣ್ಣವನ್ನು ಹೊಂದಿದ್ದಾರೆ. ಎತ್ತರವಾದ ಗುಮ್ಮಟಕಾರದ ಮಂಟಪದ ಮೇಲೆ ಗೋಪುರದ ಎರಡು ಬದಿಯಲ್ಲಿ ಎರಡು ಪಾರಿವಾಳಗಳು ಕುಳಿತಿವೆ. ಹಾಗೂ ತೀರ್ಥಂಕರರ ಬಲ ಬದಿ ಮತ್ತು ಎಡಬದಿಯಲ್ಲಿ ಯಕ್ಷ– ಯಕ್ಷಯರು ನಾಲ್ಕು ಭುಜಗಳನ್ನು ಹೊಂದಿದ್ದು ಪುಷ್ಪ ಮಾಲೆಯೊಂದಿಗೆ, ತೀರ್ಥಂಕರರ ಕಡೆ ಮುಖಮಾಡಿ ನಮಸ್ಕರಿಸುತ್ತಿದ್ದಾರೆ. ಈ ಯಕ್ಷ – ಯಕ್ಷಿಯರಿಗೆ ಪ್ರತ್ಯೇಕವಾದ ಗೋಪುರ ಮಂಟಪಗಳನ್ನು ಕಾಣಬಹುದು.

### ೨೦. ಮಲ್ಲಿ ತೀರ್ಥಂಕರರು

ಹತ್ತೊಂಭತ್ತನೆಯ ತೀರ್ಥಂಕರರಾಗಿದ್ದು ಕುಂಭ ಲಾಂಛನವನ್ನು ಹೊಂದಿರುವ ತೀರ್ಥಂಕರರ ಮೈಬಣ್ಣವು ಸುವರ್ಣವರ್ಣವಾಗಿದೆ. ರಾಜಸ್ಥಾನಿ ಶೈಲಿಯ ವಾಸ್ತು ಶೈಲಿ ವಿನ್ಯಾಸದ ಮಂಟಪವನ್ನು ಹೊಂದಿದ್ದು. ಎಡ ಮತ್ತು ಬಲಭಾಗದಲ್ಲಿ ಯಕ್ಷ ಯಕ್ಷಿಯರನ್ನು ಹೊಂದಿದ್ದಾರೆ. ತೀರ್ಥಂಕರರು ಖಡ್ಗಾಸನದಲ್ಲಿ ನಿಂತಿದ್ದು, ಹಸಿರು ಬಣ್ಣದ ಹಿನ್ನೆಲೆಯನ್ನು ಕಾಣಬಹುದಾಗಿದೆ.

### ೨೧. ವಾಸುಪೂಜ್ಯ ತೀರ್ಥಂಕರರು

ಹನ್ನೆರಡನೆಯ ತೀರ್ಥಂಕರರಾಗಿದ್ದು ಇವರ ಲಾಂಛನವು ಕೋಣವಾಗಿದೆ. ಕೆಂಪು ವರ್ಣದ ಮೈಬಣ್ಣವನ್ನು ಹೊಂದಿರುವ ತೀರ್ಥಂಕರರು ಈ ಕಲಾಕೃತಿಯಲ್ಲಿ ಕಂದು ಬಣ್ಣವನ್ನು ಹೊಂದಿದ್ದಾರೆ. ನೀಲಿ ಬಣ್ಣದ ಹಿನ್ನೆಲೆಯನ್ನು ಹೊಂದಿರುವ ತೀರ್ಥಂಕರರು ಖಡ್ಗಾಸನದಲ್ಲಿ ನಿಂತಿದ್ದಾರೆ. ಎತ್ತರವಾದ ಗುಮ್ಮಟದ ಗೋಪುರದಲ್ಲಿ ಮಂಟಪವನ್ನು



೧. ಋಷಭನಾಥ ತೀರ್ಥಂಕರರು



೨. ಅಜಿತ ತೀರ್ಥಂಕರರು



೩. ಶಂಭವ ತೀರ್ಥಂಕರರು



೪. ಅನಂತ ತೀರ್ಥಂಕರರು



೫. ಅಭಿನಂದನಾ ತೀರ್ಥಂಕರರು



೬. ಚಂದ್ರಪ್ರಭ ತೀರ್ಥಂಕರರು



೭. ಸುಪಾರ್ಶ್ವ ತೀರ್ಥಂಕರರು



೧೦. ಮುನಿಸುವ್ರತ ತೀರ್ಥಂಕರರು



೮. ಶ್ರೇಯಾಂಸ ತೀರ್ಥಂಕರರು



೧೧. ಪಾರ್ಶ್ವನಾಥ ತೀರ್ಥಂಕರರು



೯. ನೇಮಿನಾಥ ತೀರ್ಥಂಕರರು



೧೨. ಧರ್ಮ ತೀರ್ಥಂಕರರು



೧೩. ತೀರ್ಥಂಕರರು



೧೬. ಅನಂತ ತೀರ್ಥಂಕರರು



೧೪. ಭಗವಾನ್ ಶ್ರೀತಲ ತೀರ್ಥಂಕರರು



೧೭. ಪುಷ್ಪದಂತ ತೀರ್ಥಂಕರರರು



೧೫. ವಾಸು ಪೂಜ್ಯ ತೀರ್ಥಂಕರರು



೧೮. ಕುಂಥು ತೀರ್ಥಂಕರರು



೧೯. ಭಗವಾನ್ ನೇಮಿ ತೀರ್ಥಂಕರರು



೨೦. ಮಲ್ಲಿ ತೀರ್ಥಂಕರರು



೨೧. ವಾಸುಪೂಜ್ಯ ತೀರ್ಥಂಕರರು



೨೨. ಪದ್ಮಪ್ರಭಾ ತೀರ್ಥಂಕರರು



೨೩. ತೀರ್ಥಂಕರರ ಸಮೂಹ



೧



೨



೩



೪



೫



೬



೭



೮

ಶಾಸ್ತ್ರ ಸಂಬಂಧಿ ಕಾಗದ ಹಸ್ತಪ್ರತಿಗಳು



೯



೧೦



೧೧



೧೨



೧೩



೧೪



೧೫



೧೬

ಶಾಸ್ತ್ರ ಸಂಬಂಧಿ ಕಾಗದ ಹಸ್ತಪ್ರತಿಗಳು



ಹೊಂದಿದ್ದು ಎಡ ಮತ್ತು ಬಲಭಾಗದಲ್ಲಿ ಯಕ್ಷ – ಯಕ್ಷಿಯರು ನಾಲ್ಕು ಭುಜವನ್ನು ಹೊಂದಿದ್ದು, ನಮಸ್ಕಾರವನ್ನು ಮುದ್ರೆಯಲ್ಲಿ ನಿಂತಿದ್ದಾರೆ. ಪೀಠದ ಎರಡು ಬದಿಯಲ್ಲಿ ಎರಡು ವೃಕ್ಷಗಳನ್ನು ಕಾಣಬಹುದು. ಒಂದು ವೃಕ್ಷದಲ್ಲಿ ಹಳದಿ ಹೂಗಳನ್ನು ಹಾಗೂ ಮತ್ತೊಂದು ವೃಕ್ಷದಲ್ಲಿ ಹಸಿರು ಬಣ್ಣದ ಹೂಗಳನ್ನು ಹೊಂದಿದೆ.

**೨೨. ಪದ್ಮಾಪ್ರಭಾ ತೀರ್ಥಂಕರರು**

ಆರನೆಯ ತೀರ್ಥಂಕರರಾಗಿದ್ದು ಕೆಂಪು ಕಮಲದ ಲಾಂಛನವನ್ನು ಹೊಂದಿರುವ ತೀರ್ಥಂಕರರು ಸುವರ್ಣವರ್ಣದ ಮೈಬಣ್ಣವನ್ನು ಹೊಂದಿದ್ದು ಖಡ್ಗಾಸನದಲ್ಲಿ ನಿಂತಿದ್ದಾರೆ. ವಿಶಿಷ್ಟವಾದ ವಾಸ್ತು ವಿನ್ಯಾಸದ ಮಂಟಪವನ್ನು ಹೊಂದಿರುವ ತೀರ್ಥಂಕರರು ಹಿನ್ನೆಲೆಯು ಕೆಂಪು ಬಣ್ಣ ಹೊಂದಿದೆ. ಕೆಂಪು ಹಿನ್ನೆಲೆಯಲ್ಲಿ ತೂಗುಹಾಕಿದ ದೀಪಗಳು ಮೊಗಲ ಶೈಲಿಯನ್ನು ಹೋಲುತ್ತವೆ. ತೀರ್ಥಂಕರರ ಬಲ ಮತ್ತು ಎಡಭಾಗದಲ್ಲಿ ನಾಲ್ಕು ಭುಜದಲ್ಲಿ ಯಕ್ಷ – ಯಕ್ಷಿಯರು ತ್ರಿಭಂಗಿಯಲ್ಲಿ ತೀರ್ಥಂಕರರಿಗೆ ಪುಷ್ಪ ಮಾಲೆಯೊಂದಿಗೆ ನಮಸ್ಕರಿಸುತ್ತಿದ್ದಾರೆ. ತೀರ್ಥಂಕರರ ಎರಡು ಬದಿಯಲ್ಲಿ ಕಟ್ಟಿರುವ ಘಂಟೆಯು ತುಂಬ ವಿಶಿಷ್ಟವಾಗಿದೆ. ವಿರುದ್ಧ ದಿಕ್ಕಿನಲ್ಲಿ ಹಾರಾಡುವ ಬಾವುಟಗಳು ಹಾಗೂ ಹೂಬಳ್ಳಿಯ ಸಂಯೋಜನೆ ಈ ಕಲಾಕೃತಿಯಲ್ಲಿ ತುಂಬ ವಿಶಿಷ್ಟವಾಗಿದೆ.

**೨೩. ತೀರ್ಥಂಕರರ ಸಮೂಹ**

ಈ ಕಲಾಕೃತಿಯಲ್ಲಿ ಇಪ್ಪತ್ತನಾಲ್ಕು ತೀರ್ಥಂಕರರು ಪದ್ಮಾಸನದಲ್ಲಿ ಧ್ಯಾನಸ್ಥನಾಗಿ ಕುಳಿತಿದ್ದು ಉಳಿದ ಮೂರು ತೀರ್ಥಂಕರರು ಖಡ್ಗಾಸನದಲ್ಲಿ ನಿಂತಿದ್ದಾರೆ. ಎಡ ಮತ್ತು ಬಲಭಾಗದಲ್ಲಿ ಯಕ್ಷ ಯಕ್ಷಿಯರು ತೀರ್ಥಂಕರರ ಕಡೆಗೆ ಮುಖಮಾಡಿ ನಮಸ್ಕರಿಸುತ್ತಿದ್ದಾರೆ. ೨೭ ತೀರ್ಥಂಕರರನ್ನು ಒಂದೊಂದು ಅಂಕಣದಲ್ಲಿ ಸಂಯೋಜಿಸಿದ್ದು ತೀರ್ಥಂಕರರ ಸಂಕೇತವರ್ಣವನ್ನು ಇಲ್ಲಿ ಬಳಸಲಾಗಿದೆ. ಗೋಪುರದ ಮೇಲೆ ಭಾಗದಲ್ಲಿ ಹಳದಿ, ಹಸಿರು ಹಾಗೂ ಕೆಂಪು, ಬಿಳಿ ಪಟಗಳು ಕಾಣಬಹುದು.

**೨. ಮೈಸೂರು ಶೈಲಿಯ ಬಿಡಿ ಕಾಗದ ಹಸ್ತಪ್ರತಿಯ ವರ್ಣಚಿತ್ರಗಳು**

ಪ್ರಸ್ತುತ ಈ ಕಾಗದ ಹಸ್ತಪ್ರತಿಗಳು ಹಾಸನದಲ್ಲಿ ಇರುವ ಶ್ರೀ ಎ.ಜ್ವಾಲಯ್ಯನವರ ಮನೆಯಲ್ಲಿ ಸಂಗ್ರಹವಾಗಿದ್ದು ಈ ಕಲಾಕೃತಿಗಳನ್ನು ಸುಂದರವಾದ ಕಟ್ಟಿನಲ್ಲಿ ತುಂಬ ಜಾಗೃತವಾಗಿ ಅವರ ಮನೆಯವರು ಸಂಗ್ರಹಿಸಿರುತ್ತಾರೆ. ಯಾವುದೆ ಜೈನ ಪ್ರಕರಣಕ್ಕೆ ಸಂಬಂಧಿಸಿದ ಕಥಾ ಭಾಗದ ಬಿಧ್ರಿ ಚಿತ್ರಗಳಾಗಿವೆ. ಈ ಚಿತ್ರಗಳ ಕಾಲ ಮತ್ತು ಕಲಾವಿದರ ಹೆಸರು ಕಾಣುವದಿಲ್ಲ ಆದರೆ ಚಿತ್ರಗಳ ಶೈಲಿಯು ಮೈಸೂರು ಪ್ರಾಂತ್ಯದ ರಚನೆಯಾಗಿರುವುದನ್ನು ಕಾಣಬಹುದಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿ ಅವುಗಳ ವಸ್ತು ವಿಷಯ ಲಕ್ಷಣಗಳನ್ನು ಕುರಿತು ಚರ್ಚಿಸಲಾಗಿದೆ.

**೧. ಮಲ್ಲಿತೀರ್ಥಂಕರರು**

ಕುಂಭ ಲಾಂಛನವುಳ್ಳ ಸುವರ್ಣ ವರ್ಣ ಮೈಬಣ್ಣ ಹೊಂದಿರುವ ತೀರ್ಥಂಕರರು ಅರು ಪಟ್ಟಿಕೆಯಲ್ಲಿ ಪೀಠದ ಮೇಲೆ ಸುಖಾಸನದಲ್ಲಿ ಧ್ಯಾನಸ್ಥರಾಗಿ ಕುಳಿತಿದ್ದು ಸುಂದರವಾದ ಪ್ರಭಾವಳಿ ಕೀರ್ತಿಮುಖವನ್ನು ಹೊಂದಿದ್ದು ಕಡು ನೀಲಿ ಹಿನ್ನೆಲೆಯನ್ನು ಕಾಣಬಹುದು. ತೀರ್ಥಂಕರರ ಬಲಬದಿಯಲ್ಲಿ ಚತುರ್ಮುಖದಲ್ಲಿ ಕುಬೇರ ಯಕ್ಷ ಎಂಟು ಭುಜವನ್ನು ಹೊಂದಿದ್ದು ಕೃಪಾಣು ಬಾಣ, ಪಾಶ, ವರದ, ಗುರಾಣಿ, ಧನುಷ್, ದಂಡ, ಹಾಗೂ ಪದ್ಮ ಆಯಧಗಳನ್ನು ಹೊಂದಿದ್ದು ವೀರಾಸನದಲ್ಲಿ ಪೀಠದ ಮೇಲೆ ಕುಳಿತಿರುವುದನ್ನು ಕಾಣಬಹುದು. ಈ ಯಕ್ಷಣ ಪೀಠದ ಮುಂಭಾಗದಲ್ಲಿ ಯಕ್ಷನ ವಾಹನವಾದ ಆನೆಯನ್ನು ಹೊಂದಿದೆ. ತೀರ್ಥಂಕರರ ಎಡಭಾಗದಲ್ಲಿ ಇರುವ ಅರ್ಧಪರ್ಯಂಕಾಸನದಲ್ಲಿ ಪೀಠದ ಮೇಲೆ ಕುಳಿತಿರುವ ವಿಜಯಾ ಯಕ್ಷಿಯ ನಾಲ್ಕು ಭುಜಗಳನ್ನು ಹೊಂದಿದ್ದು ಬೀಜಪೂರ, ಶೂಲ, ಮುಷಂಢೀ, ಪದ್ಮ, ಆಯುಧವನ್ನು ಹೊಂದಿದ್ದು ದೇವಿಯ ಪೀಠದ ಬಲ



ಮಯೂರ ವಾಹನವನ್ನು ಕಾಣಬಹುದು. ದೇವಿಯ ವರ್ಣವು ಸಾಮಾನ್ಯವಾಗಿ ಗೌರ ವರ್ಣವನ್ನು ಹೊಂದಬೇಕಾಗಿದ್ದು ಇಲ್ಲಿ ನೀಲಿ ವರ್ಣವನ್ನು ಬಳಸಲಾಗಿದೆ. ಚಿತ್ರ ಸಂಯೋಜನೆಯನ್ನು ಸಾಂಪ್ರದಾಯಿಕ ಮೈಸೂರು ಶೈಲಿಯನ್ನು ಹೊಂದಿದ್ದು ಮಲ್ಲಿ ತೀರ್ಥಂಕರರ ಪೂಜಾ ಸಾಮಗ್ರಿಗಳನ್ನು ಮುಂದೆ ಚಿತ್ರಿಸಲಾಗಿದ್ದು ಮಹಾವೃಕ್ಷದ ಕಳಗೆ ಮೂರು ದೇವಾಲಯದ ಕಟ್ಟೆಯಂತೆ ಚಿತ್ರಿಸಿದ್ದು ಮೈಸೂರು ಶೈಲಿಯ ಗೋಪುರಗಳು ಇರುವುದನ್ನು ಕಾಣಬಹುದು. ಮಲ್ಲಿ ತೀರ್ಥಂಕರರ ಹಿನ್ನೆಲೆಯಲ್ಲಿ ಕಡು ನೀಲಿ ವರ್ಣದಿಂದ ರೂಪಿಸಿದ್ದ ಕಮಲದ ಹೂವುಗಳಿಂದ ಸಿಂಗರಿಸಿರುವುದನ್ನು ತೀರ್ಥಂಕರರ ಎರಡು ಬದಿಯಲ್ಲಿ ಚಾಮರವನ್ನು ಹೊಂದಿದ್ದು ಶಾಸ್ತ್ರ ಗ್ರಂಥಗಳನ್ನು ಹೊಂದಿದ ಪೀಠಗಳನ್ನು ಚಿತ್ರಿಸಲಾಗಿದೆ. ಯಕ್ಷ ಯಕ್ಷಿಯರ ಹಿನ್ನೆಲೆಯಲ್ಲಿ ಕೆಂಪು ವರ್ಣವನ್ನು ಕಾಣಬಹುದು. ಗೋಪುರದ ಮೇಲ್ಭಾಗದಲ್ಲಿ ಹಾರಾಡುವ ಪಕ್ಷಿಗಳನ್ನು ಹೊಂದಿದೆ.

**೨. ಶಾಂತಿ ತೀರ್ಥಂಕರರು**

ಸುವರ್ಣ ವರ್ಣದ ಮೈಬಣ್ಣವನ್ನು ಹೊಂದಿರುವ ತೀರ್ಥಂಕರರ ಜಿಗರೆ ಲಾಂಛನವನ್ನು ಕಾಣಬಹುದು. ಮಹಾವೃಕ್ಷದ ಕೆಳಗೆ ಅಲಂಕೃತ ಮಂಟಪದಲ್ಲಿ ಧ್ಯಾನಾಸಕ್ತನಾಗಿ ಕುಳಿತಿರುವ ತೀರ್ಥಂಕರರ ಹಿನ್ನೆಲೆ ನೀಲಿ ವರ್ಣವನ್ನು ಹೊಂದಿದ್ದು ತೀರ್ಥಂಕರರ ಬಲಭಾಗದಲ್ಲಿ ಇರುವ ಗರುಡ ಯಕ್ಷನು ಶ್ಯಾಮ ವರ್ಣ ಹೊಂದಿದ್ದು. ನಾಲ್ಕು ಬುಜವನ್ನು ಹೊಂದಿದ್ದು ವಜ್ರ, ಚಕ್ರವನ್ನು ಹಿಡಿದಿದ್ದು ವೀರಾಸನದಲ್ಲಿ ಕುಳಿತಿದ್ದಾನೆ. ಈ ಯಕ್ಷನ ಲಾಂಛನವನ್ನು ವರಾಹವಾಗಿದ್ದು ಯಕ್ಷನ ಪೀಠದ ಮುಂಭಾಗದಲ್ಲಿ ಕಾಣಬಹುದಾಗಿದೆ. ಶಾಂತಿ ತೀರ್ಥಂಕರರ ಎಡಭಾಗದಲ್ಲಿ ಮಹಾಮಾನಸೀ ಯಕ್ಷಿಯು ಅರ್ಧಪರ್ಯಾಂಕಾಸನದಲ್ಲಿ ಹಸಿರು ಬಣ್ಣದ ಸೀರೆಯನ್ನು ಸುವರ್ಣ ಮೈಬಣ್ಣವನ್ನು ಹೊಂದಿರುವ ಯಕ್ಷಿ ಧರಿಸಿದ್ದು ನಾಲ್ಕು  ಭುಜವುಳ್ಳ ಯಕ್ಷಿಯು ಫಲ ಚಕ್ರ, ಖಡ್ಗ, ಅಭಯವನ್ನು ಹೊಂದಿರುವುದನ್ನು ಕಾಣಬಹುದು. ಯಕ್ಷಿಯ ವಾಹನವಾದ ಮಯೂರವನ್ನು ಪೀಠದ ಬಳಿ ಕಾಣಬಹುದು. ತೀರ್ಥಂಕರರಿಗೆ ಗೌರವನೀಯವಾಗಿ ಪೂಜಾ ಸಾಮಗ್ರಿಯನ್ನು ಮುಂಭಾಗದಲ್ಲಿ ಚಿತ್ರಿಸಲಾಗಿದೆ. ವಿಜಯನಗರದ ಮುಂದುವರೆದ  ಮೈಸೂರು ಶೈಲಿಯ ಮಂಟಪದ ಅಲಂಕಾರ ಹಾಗೂ ಆಭರಣ ವಿನ್ಯಾಸವನ್ನು ಕಾಣಬಹುದು.

**೩. ಮುನಿಸುವ್ರತ ತೀರ್ಥಂಕರರು**

ಆವಿಯ ಲಾಂಛನವುಳ್ಳ ಮುನಿಸುವ್ರತ ತೀರ್ಥಂಕರರ ಮೈಬಣ್ಣ ನೀಲಿ ಮಿಶ್ರಿತ ಕಪ್ಪು ಹೊಂದಿರುವ ತೀರ್ಥಂಕರರ ಬಲಬದಿಯಲ್ಲಿ ವೀರಾಸನದಲ್ಲಿ ಕುಳಿತಿರುವ ವರುಣ ಅಷ್ಟಮುಖವನ್ನು ಹೊಂದಿದ್ದಾನೆ. ನಾಲ್ಕು ಭುಜವಳ್ಳವನಾಗಿದ್ದು ವರದ, ಕತ್ತಿ, ಗುರಾಣಿ, ಫಲವನ್ನು ಹೊಂದಿದ್ದು ಯಕ್ಷನ ವಾಹನ ವೃಷಭನಾಗಿದೆ. ತೀರ್ಥಂಕರರ ಎಡಭಾಗದಲ್ಲಿ ಅಪರಾಜಿತ ಯಕ್ಷಿಯು ನಾಲ್ಕು ಭುಜಗಳನ್ನು ಹೊಂದಿದ್ದು ಗುರಾಣಿ, ಕತ್ತಿ, ಫಲ, ವರದ ಹಸ್ತದಿಂದ ಕೂಡಿದ್ದು ಹಸಿರು ವರ್ಣದ ಮೈಬಣ್ಣವನ್ನು ಹೊಂದಿದ್ದಾಳೆ. ಈ ಯಕ್ಷಿಯು ಅಷ್ಟಾಪದ ವಾಹನವನ್ನು ಹೊಂದಿದ್ದಾಳೆ. ಮುನಿಸುವ್ರರತ ತೀರ್ಥಂಕರರ ಧ್ಯಾನಸ್ಥಿತನಾಗಿ ಕುಳಿತಿದ್ದು ಕೆಂಪು ಹಿನ್ನೆಲೆಯನ್ನು ಕಾಣಬಹುದಾಗಿದೆ. ತೀರ್ಥಂಕರರ ಮುಂಭಾಗ ಪೂಜಾ ಸಾಮಗ್ರಿಗಳನ್ನು ಹೊಂದಿದೆ.

**೪. ಧರ್ಮ ತೀರ್ಥಂಕರರ**

ವಜ್ರ ದಂಡ ಲಾಂಛನವುಳ್ಳ ಧರ್ಮ ತೀರ್ಥಂಕರ ಮೈಬಣ್ಣವು ಸುವರ್ಣವರ್ಣವಾಗಿದೆ. ನೀಲಿ ಹಿನ್ನೆಲೆಯಲ್ಲಿ ಕಮಲ, ಛತ್ರಿ, ಚಾಮರ, ಶಾಸ್ತ್ರ ಗ್ರಂಥಗಳ ಸಮೇತನಾಗಿ ಧ್ಯಾನಸ್ಥನಾಗಿದೆ. ಸುಖಾಸೀನದಲ್ಲಿ ಕುಳಿತಿದ್ದು ಬಲಭಾಗದಲ್ಲಿ ವೀರಾಸನದಲ್ಲಿ ಕುಳಿತಿದ್ದು ತ್ರಿಮುಖ ಯಕ್ಷ ರಕ್ತ ಮೈಬಣ್ಣವನ್ನು ಹೊಂದಿ ಆರು ಭುಜಗಳನ್ನು ಹೊಂದಿದ್ದು, ಬೀಜಪೂರ, ಗದೆ, ಅಭಯ, ನಕಲ, ಪದ್ಮ, ಅಕ್ಷಸೂತ್ರನಾಗಿ ತನ್ನ ವಾಹನವಾದ ಮೀನಿನ ಸಮೇತನಾಗಿ



ಮಂಟಪವನ್ನು ಅಲಂಕರಿಸಿದ್ದಾನೆ. ತೀರ್ಥಂಕರರ ಎಡಭಾಗದಲ್ಲಿ ಮಾನಸೀ ಯಕ್ಷಿಯು ಹವಳ (ಕೆಂಪು) ಮೈಬಣ್ಣ ಹೊಂದಿದ್ದು ಆರುಭುಜವುಳ್ಳ ಯಕ್ಷಿಯು ಕಮಲ, ಧನುಷ್, ವರದ, ಅಂಕುಶ, ಬಾಣ ಹಾಗೂ ಶ್ವೇತ ಪುಷ್ಪವನ್ನು ಒಳಗೊಂಡಿದ್ದು ತನ್ನ ವಾಹನವಾದ ವ್ಯಾಘ್ರ ಸಮೇತನಾಗಿ ಅರ್ಧಪರ್ಯಂಕಾಸನದಲ್ಲಿ ಮಂಟಪವನ್ನು ಅಲಂಕರಿಸಿದ್ದಾರೆ. ತೀರ್ಥಂಕರರ ಸಾಂಪ್ರಾದಾಯಿಕ ಪೂಜಾ ವಸ್ತುಗಳ ಸಮೇತ ಮೂರು ಮಂಟಪದಲ್ಲಿ ಮಹಾವೃಕ್ಷದ ಕೆಳಗೆ ಸಂಯೋಜಿಸಲಾಗಿದೆ.

### ೫. ಸುಮತಿ ತೀರ್ಥಂಕರರು

ಕ್ರೌಂಚ ಲಾಂಛನವುಳ್ಳ ಎತ್ತರದ ಪೀಠದ ಮೇಲೆ ಸುವರ್ಣ ವರ್ಣದ ಮೈಬಣ್ಣವನ್ನು ಹೊಂದಿರುವ ತೀರ್ಥಂಕರರು ಸುಖಾಸೀನದಲ್ಲಿ ಧ್ಯಾನಸ್ಥರಾಗಿ ಕುಳಿತಿದ್ದು ಬಲಭಾಗದ ತುಂಬುರ ಯಕ್ಷ ಗರುಡ ವಾಹನವುಳ್ಳವನಾಗಿದ್ದು ಎರಡು ಕೈಯಲ್ಲಿ ಸರ್ಪವನ್ನು ಹಿಡಿದು ವರದ ಹಾಗೂ ಫಲದೊಂದಿಗೆ ಶ್ಯಾಮ ವರ್ಣದ ಮೈಬಣ್ಣವುಳ್ಳವನಾಗಿದ್ದಾನೆ. ತೀರ್ಥಂಕರರ ಎಡಭಾಗದಲ್ಲಿ ಪುರುಷದತ್ತಾ ಯಕ್ಷಿಯು ಚಕ್ರ, ವಜ್ರ, ಹಾಗೂ ಫಲ ವರದ ಯಕ್ಷಿಯು ಸುವರ್ಣವರ್ಣ ಮೈಬಣ್ಣವನ್ನು ಹೊಂದಿದ್ದು. ಗಜ ವಾಹನದೊಂದಿಗೆ ಮಂಟಪವನ್ನು ಅಲಂಕರಿಸಿದೆ. ಈ ಮೂರು ಮಂಟಪದ ಬಲಭಾಗದಲ್ಲಿ ಕಾವಿವಸ್ತ್ರಧಾರಿಯಾದ ನವಿಲಿನ ಪಿಚ್ಛವನ್ನು ಹಿಡಿದು ತೀರ್ಥಂಕರಿಗೆ ನಮಸ್ಕಾರ ಮಾಡಿ ನಿಂತಿರುವ ವ್ಯಕ್ತಿಯು ಭಟ್ಟಾರಕ ಸಾಂಪ್ರದಾಯ ರೀತಿಯಲ್ಲಿ ಇದು ಮಂಟಪದ ಎಡಭಾಗದಲ್ಲಿ ಇಬ್ಬರು ಶ್ವೇತ ವಸ್ತ್ರಧಾರಿಗಳಾಗಿದ್ದು ಅಂಗವಸ್ತ್ರ ಹಾಗೂ ಬಿಳಿ ಮಂಡಾಸುವುಳ್ಳವರಾಗಿದ್ದಾರೆ. ನಮಸ್ಕಾರ ಮುದ್ರೆಯಲ್ಲಿ ತೀರ್ಥಂಕರರಿಗೆ ಮುಖಮಾಡಿ ನಿಂತಿದ್ದಾರೆ. ಸಾಂಪ್ರದಾಯಿಕ ಹೂಬಳ್ಳಿಯ ನಕ್ಷಾಚಿತ್ರಗಳು ತೆಂಗಿನ ಮರಗಳ ಅಲಂಕೃತವಾಗಿರುವ ಪಕ್ಷಿಗಳು ತೀರ್ಥಂಕರರ ಪೂಜಾಸಾಮಗ್ರಿಗಳು ತುಗೂವ ಘಂಟೆಗಳು ಅತ್ಯಂತ ಸುಂದರ ಸಂಯೋಜನೆಯ ಕಲಾಕೃತಿಯಾಗಿದೆ.

### ೬. ಕುಂಥು ತೀರ್ಥಂಕರರು

ಸುಖಾಸೀನದಲ್ಲಿ ಧ್ಯಾನಸ್ಥನಾದ ಕುಂಥು ತೀರ್ಥಂಕರರ ಮೈಬಣ್ಣವು ಸುವರ್ಣವರ್ಣವಾಗಿದ್ದು ಕುರಿ ಲಾಂಛನವುಳ್ಳ ತೀರ್ಥಂಕರರ ಸುಂದರವಾದ ಕೀರ್ತಿ ಮುಖವುಳ್ಳ ಪ್ರಭಾವಳಿಯಲ್ಲಿ ಅಲಂಕರಿಸಿದ್ದು ಬಲಭಾಗದಲ್ಲಿ ಗಂಧರ್ವ ಯಕ್ಷ ಪಕ್ಷಿ ವಾಹನವಾಗಿದ್ದು ವೀರಾಸನದಲ್ಲಿ ಪೀಠವನ್ನು ಅಲಂಕರಿಸಿರುವ ಯಕ್ಷ ನಾಲ್ಕು ಭುಜವನ್ನು ಯಕ್ಷ ಎರಡು ಕೈಯಲ್ಲಿ ನಾಗಪಾಶ ಹಾಗೂ ಧನುಷ್‌ನ್ನು ಹಿಡಿದಿದ್ದಾನೆ. ಯಕ್ಷನ ಮೈಬಣ್ಣವು ಶ್ಯಾಮ ವರ್ಣವಾಗಿದೆ. ತೀರ್ಥಂಕರರ ಎಡಭಾಗದಲ್ಲಿ ಸುವರ್ಣ ಮೈಬಣ್ಣವನ್ನು ಹೊಂದಿರುವ ಯಕ್ಷಿಯು ನಾಲ್ಕು ಭುಜವನ್ನು ಹೊಂದಿದ್ದು. ಫಲ, ಚಕ್ರ, ಖಡ್ಗ, ವರದ ರೂಪಿಯಾಗಿದ್ದು ಯಕ್ಷಿಯು ಮಯೂರ ವಾಹನವನ್ನು ಹೊಂದಿದ್ದಾಳೆ. ಒಟ್ಟಾರೆ ಚಿತ್ರ ಸಂಯೋಜನೆಯಲ್ಲಿ ನೀಲಿ ಹಿನ್ನೆಲೆಯನ್ನು ಹೊಂದಿದ್ದು ಆಕಾಶದ ಕಲ್ಪನೆಯಲ್ಲಿ ಹೊಂದಿದ ಚಲಿಸುವ ಬಿಳಿಮೋಡಗಳ ಹಾಗೂ ಪಟಗಳು ಮಂಟಪಗಳ ವಿನ್ಯಾಸ ಚಿತ್ರ ಸಂಯೋಜನೆಗೆ ಸಾಂಪದ್ರಾಯಿಕ ಚೌಕಟ್ಟನ್ನು ಕಾಣಬಹುದು.

### ೭. ಆರತೀರ್ಥಂಕರರು

ಸುಖಾಸೀನದಲ್ಲಿ ಪೀಠದ ಮೇಲೆ ಕುಳಿತಿರುವ ಆರತೀರ್ಥಂಕರನ ಮೈಬಣ್ಣವು ಸುವರ್ಣವರ್ಣವನ್ನು ಹೊಂದಿದ್ದು. ಬಲಭಾಗದಲ್ಲಿ ಖೇಂದ್ರ ಯಕ್ಷ ಆರು ಮುಖವುಳ್ಳವನಾಗಿದ್ದು ಹನ್ನೆರಡು ಭುಜಗಳ್ಳುವನಾಗಿದ್ದು ಬಾಣ, ಕಮಲ, ಫಲ, ಮಾಲಾ, ಅಕ್ಷಸೂತ್ರ, ಅಭಯ, ಧನುಷ್, ವಜ್ರಪಾಶ, ಮುದ್ಗರ ಹಾಗೂ ಅಂಕುಶ, ವರದ ಹಸ್ತಧಾರಿಯಾಗಿದ್ದು ಮೈಬಣ್ಣವು ಶ್ಯಾಮ ವರ್ಣವಾಗಿದೆ. ಹಾಗೂ ಶಂಖ ವಾಹನವನ್ನು ಹೊಂದಿದ್ದಾನೆ.



ತೀರ್ಥಂಕರರ ಎಡಭಾಗದಲ್ಲಿ ತಾರಾವತೀ ಯಕ್ಷಿಯು ಅರ್ಧಪರ್ಯಂಕಾಸನದಲ್ಲಿ ಪೀಠದ ಮೇಲೆ ಕುಳಿತಿದ್ದು ನಾಲ್ಕು ಭುಜಗಳುಳ್ಳ ಯಕ್ಷಿಯು ಸರ್ಪ, ವಜ್ರ ಹಾಗೂ ವರದ ಹಸ್ತಳಾಗಿ ಸುವರ್ಣ ಮೈಬಣ್ಣವನ್ನು ಹೊಂದಿದ್ದು ಹಂಸ ವಾಹನವುಳ್ಳವನಾಗಿದ್ದಾನೆ.

**೮. ಅಭಿನಂದನ ತೀರ್ಥಂಕರರು**

ಮಂಗ ಲಾಂಛನವುಳ್ಳ ಸುಖಾಸೀನದಲ್ಲಿ ಕುಳಿತಿರುವ ಅಭಿನಂದನ ತೀರ್ಥಂಕರರ ಬಲಭಾಗದಲ್ಲಿ ಯಕ್ಷೇಶ್ವರ ಯಕ್ಷ ವೀರಾಸನದಲ್ಲಿ ಪೀಠದ ಮೇಲೆ ಕುಳಿತಿದ್ದು ಶ್ಯಾಮ ವರ್ಣದ ಮೈವಣ್ಣವನ್ನು ಹೊಂದಿದ್ದು ನಾಲ್ಕು ಭುಜಗಳುಳ್ಳ ಯಕ್ಷ, ಬಾಣ, ಖಡ್ಗ, ಧನುಷ್, ಹಾಗೂ ಗುರಾಣಿಯನ್ನು ಹೊಂದಿದ್ದಾನೆ. ತನ್ನ ವಾಹನವಾದ ಕೆಂಪು ಬಣ್ಣದ ಆನೆಯನ್ನು ಹೊಂದಿದ್ದಾನೆ. ತೀರ್ಥಂಕರರ ಎಡಭಾಗದಲ್ಲಿ ವಜ್ರಶೃಂಖಲಾ ಯಕ್ಷಿಯು ಅರ್ಧಪರ್ಯಂಕಾಸನದಲ್ಲಿ ಪೀಠದ ಮೇಲೆ ಅಲಂಕರಿಸಿದ್ದು ನಾಲ್ಕು ಭುಜಗಳನ್ನುಳ್ಳ ಯಕ್ಷಿಯು ನಾಗಪಾಶ ಅಕ್ಷಸೂತ್ರ ಫಲ, ವರದ ಹಸ್ತದೊಂದಿಗೆ ತನ್ನ ವಾಹನವಾಗಿರುವ ಹಂಸದೊಂದಿಗೆ ಮಂಟಪವನ್ನು ಅಲಂಕರಿಸಿದ್ದಲೇ ಈ ಕಲಾಕೃತಿಯ ಬಲಭಾಗದಲ್ಲಿ ತೀರ್ಥಂಕರರ ಕಡೆಗೆ ಮುಖಮಾಡಿ ಕುಳಿತಿರುವ ವಸ್ತ್ರರಹಿತ ಸುಖಾಸೀನದಲ್ಲಿ ಪೀಠದ ಮೇಲೆ ಕುಳಿತ ಜಿನ ಮುನಿಯನ್ನು ಕಾಣಬಹುದು ಅದೇ ರೀತಿ ಎಡಭಾಗದಲ್ಲಿ ಇಬ್ಬರೂ ಮಹಿಳೆಯರು ನಮಸ್ಕಾರ ಮುದ್ರೆಯಲ್ಲಿ ನೀಡುತ್ತಿದ್ದು ಮೈಸೂರು ಸಾಂಪ್ರದಾಯಿಕ ಶೈಲಿಯ ವಸ್ತ್ರವಿನ್ಯಾಸವನ್ನು ಹೊಂದಿದ್ದಾರೆ. ಇವರು ಸಹ ತೀರ್ಥಂಕರರ ಕಡೆ ಮುಖಮಾಡಿ ನಿಂತ್ತಿದ್ದಾರೆ.

**೯. ಋಷಭನಾಥ ತೀರ್ಥಂಕರರು**

ಆದಿ ತೀರ್ಥಂಕರರ ಲಾಂಛನವು ವೃಷಭ (ಎತ್ತು) ಆಗಿದ್ದು ಎತ್ತರ ಪೀಠದ ಮೇಲೆ, ಸುಖಾಸೀನದಲ್ಲಿ ಧ್ಯಾನಸ್ಥರಾಗಿ ಕುಳಿತ್ತಿರುವ ತೀರ್ಥಂಕರರ ಮೈಬಣ್ಣವು ಸುವರ್ಣ ಬಣ್ಣವನ್ನು ಹೊಂದಿದೆ. ಬಲಭಾಗದಲ್ಲಿ ಗೋಮುಖ ಯಕ್ಷ ನಾಲ್ಕು ಭುಜಗಳ್ಳವನ್ನಾಗಿದ್ದು ಪರಶು, ಬೀಜಪೂರ, ಅಕ್ಷಸೂತ್ರ ಹಾಗೂ ವರದ ಹಸ್ತನಾಗಿದ್ದು ತೀರ್ಥಂಕರರ ಕಡೆಗೆ ಮುಖಮಾಡಿರುವ ಯಕ್ಷನ ಮೈಬಣ್ಣವು ಸುವರ್ಣ ವರ್ಣವನ್ನು ಹೊಂದಿರುವ ಯಕ್ಷ ವೀರಾಸನದಲ್ಲಿ ಕುಳಿತಿರುವ ಯಕ್ಷ ವೃಷಭ ವಾಹನವನ್ನು ಹೊಂದಿದ್ದಾನೆ. ಹಾಗೂ ತೀರ್ಥಂಕರರ ಎಡಭಾಗದಲ್ಲಿ ವೀರಾಸನದಲ್ಲಿ ಕುಳಿತಿರುವ ಚಕ್ರೇಶ್ವರಿ ಯಕ್ಷಿಯು ಹನ್ನೆರಡು ಭುಜಗಳನ್ನು ಹೊಂದಿದ್ದು ಎಂಟು ಕೈಯಲ್ಲಿ ಚಕ್ರ ಹಾಗೂ ಎರಡು ಕೈಯಲ್ಲಿ ವಜ್ರವನ್ನು ಹೊಂದಿದ್ದು ಫಲದೊಂದಿಗೆ ಅಭಯ ಹಸ್ತವನ್ನು ಕಾಣಬಹುದು. ಯಕ್ಷಿಯ ವಾಹನ ಗರುಡವಾಗಿದೆ. ತೀರ್ಥಂಕರರ ಬಲಭಾಗದಲ್ಲಿ ನಮಸ್ಕಾರ ಮುದ್ರೆಯಲ್ಲಿ ನವಿಲಿನ ಪುಚ್ಚವನ್ನು ತೋಲಿನಲ್ಲಿ ಹಿಡಿದು ನೆರವಾಗಿನಿಂತ ಜಿನಮುನಿ ಕಮಂಡಲದೊಂದಿಗೆ ತೀರ್ಥಂಕರರ ಕಡೆಗೆ ಮುಖಮಾಡಿ ನಿಂತ್ತಿದ್ದಾನೆ. ಅದೇ ರೀತಿ ಬಲಭಾಗದಲ್ಲಿ ಕೆಂಪು ವಸ್ತ್ರವನ್ನು ಧರಿಸಿದ ಸ್ತ್ರೀಯೋಬ್ಬಳು ತೀರ್ಥಂಕರರ ಕಡೆಗೆ ಮುಖಮಾಡಿ ನಮಸ್ಕರಿಸುತ್ತ ನಿಂತಿದ್ದಾಳೆ. ತೀರ್ಥಂಕರರ ಪೂಜಾ ಸಾಮಗ್ರಿಯೊಂದಿಗೆ ಅಲುಗಾಡುವ ಘಂಟೆಗಳನ್ನು ಈ ಕಲಾಕೃತಿಯಲ್ಲಿ ಕಾಣಬಹುದು.

**೧೦. ನೇಮಿನಾಥ ತೀರ್ಥಂಕರರು**

೨೨ನೇ ತೀರ್ಥಂಕರರರಾದ ನೇಮಿನಾಥ ತೀರ್ಥಂಕರರು ಶಂಖ ಲಾಂಛನವನ್ನು ಹೊಂದಿದ್ದು ಪೀಠದ ಮೇಲೆ ಸುಖಾಸೀನದಲ್ಲಿ ಧ್ಯಾನಸ್ಥರಾಗಿ ಕುಳಿತಿದ್ದಾರೆ. ಎಡಭಾಗದಲ್ಲಿ ಆಮ್ರ ಯಕ್ಷಿಯು ಹರಿತ ವರ್ಣದ ಮೈಬಣ್ಣವನ್ನು ಹೊಂದಿದ್ದು ನಾಲ್ಕು ಭುಜವುಳ್ಳ ಯಕ್ಷಿಯು ಪಾಶ ಮತ್ತು ಅಂಕುಶದೊಂದಿಗೆ ಆಮ್ರವೃಕ್ಷದ ನೆರಳಿನಲ್ಲಿ ಎರಡು ಮಕ್ಕಳ ಜತೆಗೆ ಅಭಯ ಮತ್ತು ಫಲದೊಂದಿಗೆ ಅರ್ಧಪರ್ಯಾಂಕಸನದಲ್ಲಿ ಕುಳಿತಿದ್ದಾಳೆ.



ಯಕ್ಷಿಯ ವಾಹನ ಸಿಂಹವಾಗಿದೆ. ತೀರ್ಥಂಕರರ ಬಲಭಾಗದಲ್ಲಿ ಪೀಠದ ಮೇಲೆ ನಾಲ್ಕು ಭುಜವುಳ್ಳ ವೀರಾಸನದಲ್ಲಿ 'ಕುಳಿತಿರುವ ಯಕ್ಷ ಆನೆಯ ವಾಹನವನ್ನು ಹೊಂದಿದ್ದು ಮೈಬಣ್ಣ ಶ್ಯಾಮ ವರ್ಣವಾಗಿದೆ.

**೧೧. ವರ್ಧಮಾನ ತೀರ್ಥಂಕರರು (ಮಹಾವೀರ)**

ಅಂತಿಮ ಹಾಗೂ ಇಪ್ಪತ್ತನಾಲ್ಕನೇಯ ತೀರ್ಥಂಕರರಾದ ವರ್ಧಮಾನ ಅಥವಾ ಮಹಾವೀರರ ಲಾಂಛನವು ಸಿಂಹವಾಗಿದೆ. ಸುಖಾಸೀನದಲ್ಲಿ ಧ್ಯಾನಸ್ಥನಾಗಿ ಕುಳಿತಿರುವ ತೀರ್ಥಂಕರರು ಸುವರ್ಣವರ್ಣದ ಮೈಬಣ್ಣವನ್ನು ಹೊಂದಿದ್ದಾರೆ. ತೀರ್ಥಂಕರರ ಬಲಭಾಗದಲ್ಲಿ ಮಾತಂಗ ಯಕ್ಷ ನಾಲ್ಕು ಭುಜಗಳನ್ನು ಹೊಂದಿದ್ದು ವರದ ಹಾಗೂ ಫಲದೊಂದಿಗೆ ಹಣೆಯಲ್ಲಿ ಧರ್ಮಚಕ್ರವನ್ನು ಹೊಂದಿದ್ದಾನೆ. ಈ ಯಕ್ಷಿಯ ಮೈಬಣ್ಣ ಮುದ್ಗ ಆದರೆ ಈ ಕಲಾಕೃತಿಯಲ್ಲಿ ಹಸಿರು ಬಣ್ಣವನ್ನು ಕಾಣಬಹುದು. ಈ ಯಕ್ಷನ ವಾಹನ ಆನೆಯಾಗಿದೆ. ತೀರ್ಥಂಕರರ ಎಡಭಾಗದಲ್ಲಿ ಸಿದ್ಧಯಿಕಾ ಯಕ್ಷಿಯು ವೀರಾಸನದಲ್ಲಿ ಕುಳಿತಿದ್ದು ಯಕ್ಷನ ವಾಹನ ಭದ್ರಾಸನವಾಗಿದೆ. (ಪಕ್ಷಿವಾಹನವನ್ನು ಕಾಣಬಹುದು.) ನಾಲ್ಕು ಭುಜಗಳುಳ್ಳ ದೇವಿಯ ಪುಸ್ತಕ ಹಾಗೂ ಬಿಜಾಪೂರ, ವೀಣೆ, ವರದ ಹಸ್ತವಾಗಿದ್ದಾಳೆ.

**೧೨. ನಮಿತೀರ್ಥಂಕರರು**

ಸುವರ್ಣ ವರ್ಣದ ಮೈಬಣ್ಣವನ್ನು ಹೊಂದಿರುವ ತೀರ್ಥಂಕರರ ಬಲಭಾಗದಲ್ಲಿ ಭೃಕುಟಿ ಯಕ್ಷ ವೀರಾಸನದಲ್ಲಿ ಕುಳಿತಿದ್ದು ಕೆಂಪು ವರ್ಣದ ಮೈಬಣ್ಣವನ್ನು ಹೊಂದಿರುವ ಯಕ್ಷ ಚತುರ್ಮುಖ ಎಂಟು ಭುಜಗಳನ್ನು ಹೊಂದಿದ್ದು ಗುರಾಣಿ, ಅಸಿ, ಧನುಷ್, ಬಾಣ, ಅಂಕುಶ, ಕಮಲ, ಚಕ್ರ ಹಾಗೂ ವರದ ಹಸ್ತನಾಗಿದ್ದಾನೆ. ಈ ಯಕ್ಷಣ ವಾಹನ ವೃಷಭವಾಗಿದೆ. ತೀರ್ಥಂಕರರ ಎಡಭಾಗದಲ್ಲಿ ಇರುವ ಯಕ್ಷಿ ಚಾಮುಂಡಾ ಯಕ್ಷಿಯ ಮೈಬಣ್ಣ ಹರಿತ್ (ಹಸಿರು ವರ್ಣ) ವರ್ಣವಾಗಿದ್ದು ಮಕರ ವಾಹನ ಹೊಂದಿರುವ ಯಕ್ಷಿಯ ನಾಲ್ಕು ಭುಜಗಳನ್ನು ಹೊಂದಿರುವ ಯಕ್ಷಿ ಗುರಾಣಿ, ಅಕ್ಷಸೂತ್ರ ಹಾಗೂ ಕತ್ತಿಯನ್ನು ಹೊಂದಿದ್ದಾಳೆ.

**೧೩. ಪುಷ್ಪದಂತ ತೀರ್ಥಂಕರರು**

ಒಂಬತ್ತನೆಯ ತೀರ್ಥಂಕರರಾದ ಪುಷ್ಪದಂತ ಅಥವಾ ಸುವಿಧಿನಾಥದ ಲಾಂಛನವು ಮಕರವಾಗಿದೆ. ಶ್ವೇತ ವರ್ಣದ ಮೈಬಣ್ಣವನ್ನು ಹೊಂದಿರುವ ತೀರ್ಥಂಕರರು ಸುಖಾಸೀನರಾಗಿ ಧ್ಯಾನಸ್ಥರಾಗಿ ಕುಳಿತಿದ್ದು ಬಲಭಾಗದಲ್ಲಿ ಅಜಿತ ಯಕ್ಷ ಶ್ವೇತ ವರ್ಣದ ಮೈಬಣ್ಣವನ್ನು ಹೊಂದಿದ್ದು ನಾಲ್ಕು ಭುಜವುಳ್ಳ ಯಕ್ಷ ಅಕ್ಷಸೂತ್ರ, ಶಕ್ತಿ, ಫಲ ಹಾಗೂ ವರದ ಹಸ್ತನಾಗಿದ್ದಾಳೆ. ಈ ಯಕ್ಷನ ವಾಹನ ಕೂರ್ಮವಾಗಿದೆ. ತೀರ್ಥಂಕರರ ಎಡಭಾಗದಲ್ಲಿ ಮಹಾಕಾಲೀ ಯಕ್ಷಿಯು ಅರ್ಧಪರ್ಯಾಂಕಾಸನದಲ್ಲಿ ಕುಳಿತಿದ್ದು ಕೃಷ್ಣವರ್ಣದ ಮೈಬಣ್ಣವನ್ನು ಹೊಂದಿದ್ದು ನಾಲ್ಕು ಭುಜವುಳ್ಳ ಯಕ್ಷಿಯು ವಜ್ರ, ಫಲ, ಮುದ್ಗದ ಹಾಗೂ ವರದ ಹಸ್ತರೂಪಯಾಗಿದ್ದಾನೆ. ಈ ಯಕ್ಷಿಯ ವಾಹನವು ಕೂರ್ಮವಾಗಿದೆ. ಮೂರು ಮಂಟಪದಲ್ಲಿ ಸಂಯೋಜಿಸಿರುವ ಚಿತ್ರಗಳ ಬಲಭಾಗದಲ್ಲಿ ಜೈನ ಶ್ರಾವಕಿಯ (ಸನ್ಯಾಸಿನಿಯ) ಬಳಿ ವಸ್ತ್ರವನ್ನು ಧರಿಸಿ ನವಿಲಿನ ಪಿಚ್ಛದೊಂದಿಗೆ ತೀರ್ಥಂಕರರ ಕಡೆಗೆ ಮುಖಮಾಡಿ ನಮಸ್ಕರಿಸುತ್ತಿದ್ದಾಳೆ. ಹಾಗೂ ಬಲಭಾಗದಲ್ಲಿ ಶ್ವೇತ ವಸ್ತ್ರದ ಮೈಸೂರು ಸಾಂಪ್ರದಾಯಿಕ ಉಡುಗೆಯನ್ನು ತೊಟ್ಟಿರುವ ಸ್ತ್ರೀ ತೀರ್ಥಂಕರರ ಕಡೆಗೆ ಮುಖಮಾಡಿ ಪುಷ್ಪಗಳನ್ನು ಅರ್ಪಿಸುತ್ತಿದ್ದಾಳೆ.

**೧೪.ಅಜಿತ ತೀರ್ಥಂಕರರು**

ಎರಡನೆಯ ತೀರ್ಥಂಕರರಾದ ಅಜಿತನಾಥ ತೀರ್ಥಂಕರರ ಲಾಂಛನವು ಆನೆಯಾಗಿದೆ. ಧ್ಯಾನಸ್ಥರಾಗಿ ಸುಖಾಸೀನದಲ್ಲಿ ಕುಳಿತಿರುವ ತೀರ್ಥಂಕರರ ಮೈಬಣ್ಣವು ಸುವರ್ಣವರ್ಣವಾಗಿದೆ. ತೀರ್ಥಂಕರರ ಬಲಭಾಗದಲ್ಲಿ



ಮಹಾಯಕ್ಷಿ ಚತುರ್ಮುಖನಾಗಿದ್ದು ಎಂಟು ಭುಜವುಳ್ಳ ಖಡ್ಗ, ದಂಡ, ಪರಶು, ಚಕ್ರ, ತ್ರಿಶೂಲ, ಕಮಲ, ಅಂಕುಶ ಹಾಗೂ ವರದ ಹಸ್ತನಾಗಿದ್ದಾನೆ. ಈ ಯಕ್ಷಿನ ಮೈಬಣ್ಣವು ಸುವರ್ಣವರ್ಣವಾಗಿದೆ. ಹಾಗೂ ಈ ಯಕ್ಷನ ವಾಹನ ಆನೆಯಾಗಿದೆ. ತೀರ್ಥಂಕರರರ ಎಡಭಾಗದಲ್ಲಿ ಇರುವ ಯಕ್ಷಿಯು ರೋಹಿಣಿಯಾಗಿದ್ದು ವೀರಾಸನದಲ್ಲಿ ಕುಳಿತಿರುವ ಯಕ್ಷಿಯ ಮೈಬಣ್ಣ ಸುವರ್ಣವರ್ಣವಾಗಿದೆ. ನಾಲ್ಕು ಭುಜಗಳುಳ್ಳ ಯಕ್ಷಿಯು ಚಕ್ರ, ಶಂಖ ಹಾಗೂ ಅಭಯ ವರದ ಹಸ್ತರೂಪಿಯಾಗಿದ್ದು ಲೋಹಾಸನವನ್ನು ಹೊಂದಿರುತ್ತಾಳೆ. ಈ ಮೂರು ಮಂಟಪದ ಎಡುಭಾಗದಲ್ಲಿ ಸಾಂಪ್ರದಾಯಿಕ ಮೈಸೂರು ಶೈಲಿಯ ವಸ್ತ್ರವಿನ್ಯಾಸವನ್ನು ಹೊಂದಿರುವ ಸ್ತ್ರೀಯರು ತೀರ್ಥಂಕರರ ಕಡೆಗೆ ಮುಖಮಾಡಿ ನಮಸ್ಕರಿಸುತ್ತಿದ್ದು ಅದೇ ರೀತಿ ಮಂಟಪಗಳ ಬಲಭಾಗದಲ್ಲಿ ಶ್ರಾವಕಿ (ಸಸ್ಯಸೀನಿ) ನವಿಲಿನ ಪುಚ್ಚವನ್ನು ಹಿಡಿದು ತೀರ್ಥಂಕರರಿಗೆ ನಮಸ್ಕಾರ ಮಾಡುತ್ತಿದ್ದು ಒಟ್ಟಾರೆ ಈ ಚಿತ್ರ ಸಂಯೋಜನೆಯು ಸುಂದರವಾಗಿದೆ.

**೧೫. ಚಂದ್ರ ಪ್ರಭತೀರ್ಥಂಕರರು**

ಎಂಟನೆಯ ತೀರ್ಥಂಕರರಾಗಿದ್ದು ಅರ್ಧಚಂದ್ರ ಲಾಂಛನವನ್ನು ಹೊಂದಿರುವ ತೀರ್ಥಂಕರರು ಸುಖಾಸೀನದಲ್ಲಿ ಧ್ಯಾನಸ್ಥರಾಗಿ ಕುಳಿತಿದ್ದಾರೆ. ಚಂದ್ರಪ್ರಭ ತೀರ್ಥಂಕರರ ಮೈಬಣ್ಣವು ಬಿಳಿಯಾಗಿದೆ. ತೀರ್ಥಂಕರರ ಬಲಭಾಗದಲ್ಲಿ ವಿಜಯ (ಶ್ಯಾಮ) ಯಕ್ಷ ನಾಲ್ಕು ಭುಜಗಳನ್ನು ಹೊಂದಿದ್ದು, ಯಕ್ಷಸೂತ್ರ ಪರಶು ಹಾಗೂ ಫಲ ವರದ ಹಸ್ತನಾಗಿದ್ದಾನೆ. ಈ ಯಕ್ಷಣ ಮೈಬಣ್ಣವು ಶ್ಯಾಮ(ನೀಲಿ)ಯಾಗಿದೆ. ಕಪೋತ ವಾಹನವುಳ್ಳ ಯಕ್ಷ ವೀರಾಸನದಲ್ಲಿ ಕುಳಿತಿದ್ದು ತೀರ್ಥಂಕರರ ಎಡಭಾಗದಲ್ಲಿ ಜ್ವಾಲಾಮಾಲಿನಿ ಯಕ್ಷಿಯು ಅರ್ಧಪಾರ್ಯಾಂಕಾಸನದಲ್ಲಿ ಪೀಠದ ಮೇಲೆ ಕುಳಿತಿದ್ದಾನೆ. ಎಂಟು ಭುಜಗಳು ಯಕ್ಷಿ ಚಕ್ರ, ಧನುಷ್, ಪಾಶ, ಗುರಾಣಿ, ತ್ರಿಶೂಲ, ಬಾಣ, ಮತ್ಸ್ಯ ಹಾಗೂ ಕತ್ತಿಯನ್ನು ಹೊಂದಿರುವ ಯಕ್ಷಿಯು ಶ್ವೇತವರ್ಣದ ಮೈಬಣ್ಣವನ್ನು ಹೊಂದಿದ್ದಾಳೆ. ಈ ಯಕ್ಷಿಯ ವಾಹನ ಮಹಿಷಿಯಾಗಿದೆ. ಮೂರು ಮಂಟಪದಲ್ಲಿ ಅಲಂಕೃತರಾಗಿರುವ ಯಕ್ಷ ಯಕ್ಷಿಯರು ಹಾಗೂ ತೀರ್ಥಂಕರರ ಪ್ರಭಾವಳಿಯಲ್ಲಿ ಕೀರ್ತಿಮುಖವನ್ನು ಕಾಣಬಹುದು. ಹಾಗೂ ಗೋಪುರ ಮಂಟಪದಲ್ಲಿ ತೂಗಾಡುವ ಘಂಟೆಯ ಚಿತ್ರವನ್ನು ಹೊಂದಿದೆ. ಮಂಟಪದ ಬಲಭಾಗದಲ್ಲಿ ಲಂಗೋಟಿಯುಳ್ಳ ಜೈನಶ್ರಾವಕ (ಸನ್ಯಾಸಿ) ನವಿಲಿನ ಪಿಂಚವನ್ನು ಹಿಡಿದು ಕಮಂಡಲದೊಂದಿಗೆ ತೀರ್ಥಂಕರರ ಕಡೆ ಮುಖಮಾಡಿ ನಮಸ್ಕರಿಸುತ್ತಿದ್ದಾನೆ. ಹಾಗೂ ಮಂಟಪದ ಎಡಭಾಗದಲ್ಲಿ ಇಬ್ಬರು (ಜೈನ) ಬ್ರಾಹ್ಮನರು ತೀರ್ಥಂಕರರ ಕಡೆ ಮುಖಮಾಡಿ ನಮಸ್ಕರಿಸುತ್ತಿದ್ದು ಒಬ್ಬ ವ್ಯಕ್ತಿಯು ತನ್ನ ಎರಡು ಕೈಗಳನ್ನು ಮೇಲೆತ್ತಿ ನಮಸ್ಕರಿಸುತ್ತಿದ್ದಾನೆ.

**೧೬. ಶೀತಲ ತೀರ್ಥಂಕರರು**

ಹತ್ತನೇಯ ತೀರ್ಥಂಕರಾದ ಶೀತಲ ತೀರ್ಥಂಕರರು ಲಾಂಛನವು ಕಲ್ಪವೃಕ್ಷವಾಗಿದೆ. ಸುವರ್ಣವರ್ಣದ ಮೈಬಣ್ಣವುಳ್ಳ ಈ ಚಿತ್ರದಲ್ಲಿ ಶ್ವೇತವರ್ಣವನ್ನು ಬಳಸಿದ್ದಾರೆ. ತೀರ್ಥಂಕರರು ಚಾಮರ ಹಾಗೂ ಶಾಸ್ತ್ರಗ್ರಂಥಗಳೊಂದಿಗೆ ಧ್ಯಾನಸ್ಥರಾಗಿ ಸುಖಾಸೀನದಲ್ಲಿ ಕುಳಿತಿದ್ದು ಸುಂದರವಾದ ಮಂಟಪವನ್ನು ಅಲಂಕರಿಸಿದ್ದಾರೆ. ತೀಥಂಕರರ ಬಲಭಾಗದಲ್ಲಿ ಬ್ರಹ್ಮ ಯಕ್ಷ ಎಂಟು ಭುಜಗಳನ್ನು ಹೊಂದಿದ್ದು ಬಾಣ, ಧನುಷ್, ಪರಶು, ದಂಡ, ಕತ್ತಿ, ಗುರಾಣಿ, ವಜ್ರ ಹಾಗೂ ವರದ ಹಸ್ತನಾಗಿದ್ದು ಚತುರ್ಮುಖವುಳ್ಳವನಾಗಿದ್ದಾನೆ. ಈ ಯಕ್ಷನ ವಾಹನವು ಪದ್ಮವಾಗಿದೆ. ತೀರ್ಥಂಕರರ ಎಡಭಾಗದಲ್ಲಿ ಮಾಣವೀ ಯಕ್ಷಿಯು ನಾಲ್ಕು ಭುಜಗಳನ್ನು ಹೊಂದಿದ್ದು ಮಾಲಾ, ವರದ, ಮತ್ಸ್ಯ ಹಾಗೂ ಫಲವನ್ನು ಹೊಂದಿದ್ದಾಳೆ ಯಕ್ಷಿಯ ಮೈಬಣ್ಣ ಹರಿತ್ (ಹಸಿರು) ವಾಗಿದ್ದು ಯಕ್ಷಿಯ ವಾಹನ ಹಂದಿ (ಸೂಕರ) ವಾಗಿದೆ. ಈ ಯಕ್ಷಿಯ ಎಡ ಭಾಗದಲ್ಲಿ ಜೈನ ಬ್ರಾಹ್ಮನ ದೇವಿಕಡೆ ಮುಖಮಾಡಿ ಆರತಿಯನ್ನು ಮಾಡುತ್ತಿದ್ದಾನೆ. ಈ ಕಲಾಕೃತಿಯು ಮೈಸೂರು ಶೈಲಿಯ ಬಂಗಾರದ ಕಾಗದವನ್ನು ಬಳಸಿ (ಎಂಬೋಸ್) ಚಿತ್ರಿಸಲಾಗಿದೆ.



## ೧೭. ಸುಪಾರ್ಶ ತೀರ್ಥಂಕರರು

ಏಳನೇಯ ತೀರ್ಥಂಕರರಾಗಿದ್ದು ಸ್ವಸ್ತಿಕ ಲಾಂಛನವುಳ್ಳ ತೀರ್ಥಂಕರರು ಧ್ಯಾನಸ್ಥರಾಗಿ ಸುಖಾಸೀನದಲ್ಲಿ ಪೀಠದ ಮೇಲೆ ಕುಳಿತ್ತಿದ್ದು ಹಸಿರು ಮೈಬಣ್ಣವನ್ನು ಹೊಂದಿದ್ದಾರೆ. ತೀರ್ಥಂಕರರ ತಲೆಯ ಮೇಲೆ ಸರ್ಪವು ಹೆಡೆ ಎತ್ತಿ ತೀರ್ಥಂಕರರಿಗೆ ನೆರಳನ್ನು ನೀಡುತ್ತಿದೆ. ತೀರ್ಥಂಕರರ ಬಲಭಾಗದಲ್ಲಿ ಮಾತಂಗ ಯಕ್ಷಿ ಸಿಂಹ ವಾಹನವನ್ನು ಹೊಂದಿದ್ದು ದಿಂಗಂಬರ ಸಾಂಪ್ರದಾಯದಲ್ಲಿ ಶ್ಯಾಮ ವರ್ಣದಿಂದ ಕೂಡಿದ (ಕಲಾಕೃತಿಯಲ್ಲಿ ಬಿಳಿಯನ್ನು ಹೊಂದಿದ) ಈ ಯಕ್ಷಿ ಎರಡು ಭುಜವುಳ್ಳವನಾಗಿದ್ದು ಶೂಲ ಹಾಗೂ ದಂಡವನ್ನು ಹಿಡಿದಿದ್ದಾನೆ. ತೀರ್ಥಂಕರರ ಎಡ ಬದಿಯಲ್ಲಿ ಕಾಲೀ ಯಕ್ಷಿಯು ನಾಲ್ಕು ಭುಜವನ್ನು ಹೊಂದಿದ್ದು ಘಂಟೆ, ತ್ರಿಶೂಲ, ಫಲ ಹಾಗೂ ವರದ ಹಸ್ತಳಾಗಿದ್ದು. ಶ್ವೇತವರ್ಣದ ಮೈಬಣ್ಣವನ್ನು ಹೊಂದಿದ್ದು ಅರ್ಧಪರ್ಯಂಕಾಸನದಲ್ಲಿ ಕುಳಿತ ಯಕ್ಷ ವೃಷಭ ವಾಹನವನ್ನು ಹೊಂದಿದ್ದಾಳೆ. ಮೂರು ಮಂಟಪದಲ್ಲಿ ಅಲಂಕೃತವಾಗಿರುವ ಯಕ್ಷ ಯಕ್ಷಿ ಹಾಗೂ ತೀರ್ಥಂಕರರ ಬಲ ಭಾಗದಲ್ಲಿ ಭಟ್ಟರ ಸಾಂಪ್ರದಾಯದ ವಸ್ತ್ರವನ್ನು ಧರಿಸಿದ ಜಿನಮುನಿಯ ತೀರ್ಥಂಕರರ ಕಡೆ ಮುಖಮಾಡಿ ನಮಸ್ಕರಿಸುತ್ತಿದ್ದು ಹಾಗೂ ಮಂಟಪದ ಎಡಭಾಗದಲ್ಲಿ ತಾಯಿ ಮಗುವಿನೊಂದಿಗೆ ಪುಷ್ಪವನ್ನು ಸಮರ್ಪಿಸುತ್ತಿರುವ ದೃಶ್ಯವನ್ನು ಕಾಣಬಹುದು.

## ೧೮. ವಾಸು ಪುಜ್ಯತೀರ್ಥಂಕರರು

ಹನ್ನೆರಡನೆಯ ತೀರ್ಥಂಕರರಾಗಿದ್ದು ಕೋಣ ಲಾಂಛನವನ್ನು ಹೊಂದಿರುವ ತೀರ್ಥಂಕರರ ಮೈಬಣ್ಣ ಕೆಂಪು ಧ್ಯಾನಸ್ಥರಾಗಿ ಸುಖಾಸೀನದಲ್ಲಿ ಕುಳಿತ್ತಿದ್ದು ಬಲಭಾಗದಲ್ಲಿ ಯಕ್ಷ ಶ್ವೇತವರ್ಣದ ಮೈಬಣ್ಣವನ್ನು ಹೊಂದಿದ್ದು ಆರು ಭುಜವುಳ್ಳ ಯಕ್ಷ ಬಾಣ, ಗದೆ, ವರದ, ಧನುಷ್, ನಕುಲ ಹಾಗೂ ಫಲವನ್ನು ಹೊಂದಿದ್ದು ತ್ರಿಮುಖನಾಗಿರುವ ಕುಮಾರ ತೀರ್ಥಂಕರರ ಯಕ್ಷನ ತಲೆಯ ಮೇಲೆ ಐದು ಹೆಡೆಯ ಸರ್ಪವು ನೆರಳಾಗಿ ನಿಂತಿದೆ. ಹಂಸವು ಈ ಯಕ್ಷನ ವಾಹನವಾಗಿದೆ. ಎಡಭಾಗದಲ್ಲಿ ಇರುವ ಗಾಂಧಾರಿ ಯಕ್ಷಿಯು ಹರಿತ್ ವರ್ಣವನ್ನು ಹೊಂದಿದ್ದು ಮಕರ ವಾಹನವುಳ್ಳ ಯುಕ್ಷಿಯು ನಾಲ್ಕು ಭುಜದಲ್ಲಿ ಪದ್ಮ, ವರದ, ಕಮಲ ಹಾಗೂ ಮುಸಲವನ್ನು ಹೊಂದಿದ್ದು ಅರ್ಧಪರ್ಯಂಕಾಸನದಲ್ಲಿ ಪೀಠವನ್ನು ಅಲಂಕರಿಸಿದ್ದಾಳೆ. ಮೂರು ಮಂಟಪ ಬಲಭಾಗದಲ್ಲಿ ನಿರ್ವಾಣ ಮತಿಯಾದ ಜಿನ ಮುನಿಯು ನವಿಲಿನ ಪುಚ್ಚದೊಂದಿಗೆ ತೀರ್ಥಂಕರರ ಕಡೆಗೆ ಮುಖಮಾಡಿ ನಮಸ್ಕರಿಸುತ್ತಿರುವ ಮಂಟಪದ ಎಡ ಭಾಗದಲ್ಲಿ ಅಲಂಕಾರ ಭೂಶೀತವಾದ ಸ್ತ್ರೀ ತೀರ್ಥಂಕರರ ಕಡೆಮುಖ ಮಾಡಿ ನಮಸ್ಕಾರ ಮುದ್ರೆಯೊಂದಿಗೆ ನಿಂತಿದ್ದಾಳೆ.

## ೧೯. ಅನಂತ ತೀರ್ಥಂಕರರು

ಕರಡಿ ಲಾಂಛನವುಳ್ಳ ತೀರ್ಥಂಕರರು ಧ್ಯಾನಸ್ಥರಾಗಿ ಸುಖಾಸೀನದಲ್ಲಿ ಕುಳಿತಿದ್ದು ಸುವರ್ಣ ವರ್ಣ ಮೈಬಣ್ಣವನ್ನು ಹೊಂದಿದ್ದಾರೆ. ತೀರ್ಥಂಕರರ ಬಲಭಾಗದಲ್ಲಿ ಪಾತಾಲ ಯಕ್ಷ ತ್ರಿಮೂಖನಾಗಿದ್ದು ರಕ್ತ ವರ್ಣ (ಕೆಂಪು) ಮೈಬಣ್ಣವನ್ನು ಹೊಂದಿದ್ದು ಆರು ಭುಜಗಳನ್ನು ಹೊಂದಿರುವ ಯಕ್ಷ ಅಂಕುಶ, ಶೂಲ, ಕಮಲ, ಕಶಾ, ಫಲ, ಹೊಂದಿದ್ದು ಯಕ್ಷನ ಮಕರ ವಾಹನವನ್ನು ಕಾಣಬಹುದು. ತೀರ್ಥಂಕರರ ಎಡಭಾಗದಲ್ಲಿ ಅನಂತರಿ ಮತೀ ಯಕ್ಷಿಯು ಸುವರ್ಣವರ್ಣ ಮೈಬಣ್ಣವನ್ನು ಹೊಂದಿರುವ ಯಕ್ಷಿಯ ನಾಲ್ಕು ಭುಜವನ್ನು ಹೊಂದಿದ್ದು ಧನುಷ್, ಬಾಣ, ಫಲ ಹಾಗೂ ವರದ ಹಸ್ತವಾಗಿದ್ದು ಹಂಸ ವಾಹನವನ್ನು ಹೊಂದಿದ್ದಾಳೆ.

## ೨೦. ಪದ್ಮಪ್ರಭ ತೀರ್ಥಂಕರರು

ಆರನೆಯ ತೀರ್ಥಂಕರರಾಗಿರುವ ಪದ್ಮಪ್ರಭ ತೀರ್ಥಂಕರರು ಕೆಂಪು ಕಮಲ ಲಾಂಛನವನ್ನು ಹೊಂದಿದ್ದಾರೆ. ಕೆಂಪು ವರ್ಣದ ಮೈಬಣ್ಣವನ್ನು ಹೊಂದಿರುವ ತೀರ್ಥಂಕರರು ಧ್ಯಾನಸ್ಥರಾಗಿ ಸುಖಾಸೀನದಲ್ಲಿ ಕುಳಿತ್ತಿದ್ದು



೧. ಮಲ್ಲಿ ತೀರ್ಥಂಕರರು



೨. ಶಾಂತಿ ತೀರ್ಥಂಕರರು



೩. ಮುನಿಸುವ್ರತ ತೀರ್ಥಂಕರರು



೪. ಧರ್ಮತೀರ್ಥಂಕರರು



೫. ಸುಮತಿ ತೀರ್ಥಂಕರರು



೬. ಕುಂಥು ತೀರ್ಥಂಕರರು



೭. ಅರ ತೀರ್ಥಂಕರರು



೮. ಅಭಿನಂದನ ತೀರ್ಥಂಕರರು



೯. ಋಷಭನಾಥ ತೀರ್ಥಂಕರರು



೧೦. ನೇಮಿ ತೀರ್ಥಂಕರರು



೧೧. ವರ್ಧಮಾನ ತೀರ್ಥಂಕರರು



೧೨. ನಮಿ ತೀರ್ಥಂಕರರು



೧೩. ಪುಷ್ಪದಂತ ತೀರ್ಥಂಕರರು



೧೪. ಅಜಿತ ತೀರ್ಥಂಕರರು



೧೫. ಚಂದ್ರಪ್ರಭ ತೀರ್ಥಂಕರರು



೧೬ ಶ್ರೀತಲ ತೀರ್ಥಂಕರರು



೧೭. ಸುಪಾರ್ಶ್ವ ತೀರ್ಥಂಕರರು




೧೮. ವಾಸುಪೂಜ್ಯ ತೀರ್ಥಂಕರರು



೧೯. ಅನಂತ ತೀರ್ಥಂಕರರು



೨೦. ಪದ್ಮಪ್ರಭ ತೀರ್ಥಂಕರರು



ಬಲಭಾಗದಲ್ಲಿ ಪುಷ್ಪ ಯಕ್ಷಿ ಶ್ಯಾಮ ವರ್ಣ ಮೈಬಣ್ಣವನ್ನು ಹೊಂದಿದ್ದು ನಾಲ್ಕು ಭುಜವುಳ್ಳ ಯಕ್ಷ ಗುರಾಣಿ, ಕುಂತ, ಅಭಯ ಹಾಗೂ ವರದ ಹಸ್ತನಾಗಿದ್ದು ಮೃಗ ವಾಹನವನ್ನು ಹೊಂದಿದ್ದು ವೀರಾಸನದಲ್ಲಿ ಪೀಠದ ಮೇಲೆ ಕುಳಿತ್ತಿದ್ದಾನೆ. ತೀರ್ಥಂಕರರ ಎಡ ಭಾಗದಲ್ಲಿ ಅರ್ಧಪರ್ಯಂಕಾಸನದಲ್ಲಿ ಕುಳಿತಿರುವ ಮನೋವೇಗಾ ಯಕ್ಷಿಯು ಸುವರ್ಣ ವರ್ಣ ಮೈಬಣ್ಣವನ್ನು ಹೊಂದಿದ್ದು ನಾಲ್ಕು ಭುಜವುಳ್ಳ ಯಕ್ಷಿ ಅಸಿ, ಗುರಾಣಿ, ಫಲ ಹಾಗೂ ವರದ ಹಸ್ತಳಾಗಿದ್ದು ಅಶ್ವ ವಾಹನವನ್ನು ಕಾಣಬಹುದು. ಮೊದಲನೆಯ ಮಂಟಪದ ಬಲಭಾಗದಲ್ಲಿ ತೀರ್ಥಂಕರರ ಕಡೆಗೆ ನಮಸ್ಕಾರ ಮಾಡಿನಿಂತಿರುವ ದಿಂಗಂಬರ ಸಾಂಪ್ರದಾಯಿಕ ಜೈನಮುನಿ ಹಾಗೂ ಮನೋವೇಗಾ ಯಕ್ಷಿಯು ಎಡಭಾಗದಲ್ಲಿ ಜೈನ ಶ್ರಾವಕಿಯರನ್ನು ಕಾಣಬಹುದಾಗಿದೆ.

**೩. ಕೊಲ್ಲಾಪುರದ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಮಠದಲ್ಲಿ ಇರುವ 'ಪ್ರತಿಷ್ಠಾ ತಿಲಕ' ಕಾಗದ ವರ್ಣಚಿತ್ರಗಳು.**

'ಪ್ರತಿಷ್ಠಾ ತಿಲಕ' ಕಾಗದ ಹಸ್ತಪ್ರತಿಗಳಾಗಿದ್ದು ಇವುಗಳಲ್ಲಿ ಪ್ರತಿಯೊಬ್ಬ ತೀರ್ಥಂಕರರನ ಜನ್ಮಸ್ಥಳ ಅವಸಾನ ಕಾಲಗಳನ್ನು ಸಚಿತ್ರವಾಗಿ ವಿವರಿಸಲಾಗಿದೆ. ಗ್ರಂಥದ ಪ್ರತಿಯಲ್ಲಿಯೂ ಬಸದಿಯ ಮೂರ್ತಿಗಳ ಪೂಜಾ ಸಮಾರಂಭಗಳನ್ನು ಚಿತ್ರಿಸಲಾಗಿದೆ. ಜೈನ ಹಸ್ತಪ್ರತಿಗಳಲ್ಲಿ ಅಡಕವಾಗಿರುವಂತೆ ಈ ಬಗೆಯ ಚಿತ್ರಗಳು ಎಂದಿನಿಂದ ಆರಂಭವಾದವು ಎಂಬ ಬಗ್ಗೆ ಚಿಂತನ ಹರಿಸಿದ ಆನಂದ ಕುಮಾರ ಸ್ವಾಮಿಯವರು ಚೈತ್ಯಾವಿಹಾರಗಳನ್ನು ಚಿತ್ರಗಳಿಂದ ಅಲಂಕರಿಸುವುದಕ್ಕಿಂತ ಜೈನ ಗ್ರಂಥಗಳನ್ನು ಚಿತ್ರಗಳಿಂದ ಅಲಂಕರಿಸುವ ಸಂಪ್ರದಾಯ ಕ್ರಿ.ಶ. ೬೫೦ ಕ್ರಿ.ಶ. ೧೫೪೪ರ ನಡುವಿನಲ್ಲಿ ಬೆಳೆದು ಬಂದಿರಬೇಕೆಂದು ಶಂಕಿಸುತ್ತಾರೆ. ಈ 'ಪ್ರತಿಷ್ಠಾತಿಲಕ' ಕಾಗದ ಹಸ್ತಪ್ರತಿಯ ಚಿತ್ರ ಸಂಯೋಜನೆ ಹಾಗೂ ವರ್ಣ ಸಂಯೋಜನೆಯ ದೃಷ್ಟಿಯಿಂದ ತುಂಬಾ ವಿಶಿಷ್ಟವಾಗಿದೆ. ಪ್ರಸ್ತುತ ಅಧ್ಯಯನವು ಕರ್ನಾಟಕದ ವ್ಯಾಪ್ತಿಯನ್ನು ಹೊಂದಿರುವುದರಿಂದ ಕೇವಲ ಎರಡು ಕಲಾಕೃತಿಯನ್ನು ನಮೂನೆಯಾಗಿ ಬಳಸಲಾಗಿದೆ.

ವಿಭಿನ್ನ ಚಿತ್ರಕಲಾ ವಿನ್ಯಾಸಗಳ ಮೂಲಭೂತ ಪರಿಚಯ ಪಡೆದ ಪೂರ್ವ ಕರ್ನಾಟಕದಲ್ಲಿ ವಿಶಿಷ್ಟ ಶೈಲಿಯು ಬೆಳೆದು ಬಂದುದು ಗಮನಾರ್ಹ. ಶಾಸ್ತ್ರದಾನಕ್ಕೆ ಸೌಂದರ್ಯದ ವರ್ಣಲೇಪನ ಕೊಟ್ಟು ಜೈನ ಮತೀಯರು ಚಿತ್ರಕಲಾ ಪ್ರಪಂಚ ಶ್ರೀಮಂತಗೊಳಿಸಿರುವರೆಂದು ಹೇಳಬಹುದು. ಚಿತ್ರಕಲಾ ಪರಂಪರೆಗೆ ಜೀವತುಂಬಿ ಮುನ್ನಡೆಸಿಕೊಂಡು ಬಂದ ಅವರ ಅದಮ್ಯ ಆಸಕ್ತಿ ಜನುಮದ ಆಶೋತ್ತರ ಅಭಿವ್ಯಕ್ತಿಯಲ್ಲಿ ಸ್ವತಂತ್ರ ಅಸ್ತಿತ್ವದಿಂದ ರೂಪಗೊಂಡ ಕಲಾಪ್ರತಿಭೆ ಇಂದಿಗೂ ತನ್ನ ಅಂತಃಸತ್ವವನ್ನು ಉಳಿಸಿಕೊಂಡು ಬಂದಿದೆ.

ನೂರು ಮಾತುಗಳಲ್ಲಿ ಹೇಳುವುದನ್ನು ಒಂದು ಚಿತ್ರ ಹೇಳುತ್ತದೆ. ಹಸ್ತಪ್ರತಿಗಳಲ್ಲಿರುವ ಚಿತ್ರಗಳಿಂದಾಗಿ ಒಂದು ಕೃತಿಯನ್ನು ಪರಿಪೂರ್ಣವಾಗಿ ಗ್ರಹಿಸಲು ಸಾಧ್ಯವಾಗುತ್ತದೆ. ಚಿತ್ರಕಲೆಯಲ್ಲಿ ಕಾಲದಿಂದ ಕಾಲಕ್ಕೆ ಉಂಟಾದ ಬದಲಾವಣೆಗೂ ಜೈನ ಹಸ್ತಪ್ರತಿಯ ಚಿತ್ರಗಳು ಆಧಾರವಾಗಬಲ್ಲವುಗಳಾಗಿವೆ. ಪ್ರಸ್ತುತ ಅಧ್ಯಯನಕ್ಕೆ ಕಾಲದ ಮಿತಿ ಇರುವುದರಿಂದ ಕೆಲವು ಹಸ್ತಪ್ರತಿಗಳನ್ನು ಮಾತ್ರ ಈ ಪ್ರಬಂಧದಲ್ಲಿ ಬಳಸಲಾಗಿದೆ. ಇನ್ನೂ ಕರ್ನಾಟಕದ ಬೇರೆ ಬೇರೆ ವಿಶ್ವವಿದ್ಯಾಲಯ ಮಠ- ಮಂದಿರಗಳ ಸರಕಾರಿ ಖಾಸಗಿ ಸಂಗ್ರಹಾಲಯದಲ್ಲಿರುವ ಜೈನ ಹಸ್ತಪ್ರತಿ ಚಿತ್ರಗಳ ವ್ಯಾಪಕವಾದ ಅಧ್ಯಯನದ ಅವಶ್ಯಕತೆಯಿದೆಯಂದೂ ಹೇಳುತ್ತಾ ಹೀಗೆ ಸಮಗ್ರವಾದ ಕ್ಷೇತ್ರಕಾರ್ಯದ ಅಧ್ಯಯನವಾದಾಗ ಮಾತ್ರ ಕರ್ನಾಟಕದ ಜೈನ ಚಿತ್ರಕಲೆಯ ಒಂದು ಸ್ಪಷ್ಟಚಿತ್ರಣವನ್ನು ನೀಡಲು ಸಾಧ್ಯವಾಗುತ್ತದೆ. ಇಲ್ಲಿ ಮಾದರಿಯಾಗಿ ಕೆಲವು ಹಸ್ತಪ್ರತಿಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆಯಂದು ತಿಳಿಸಬಯಸುತ್ತೇನೆ.

*****



೧. ಪ್ರತಿಷ್ಠಾ ತಿಲಕ



೨. ಪ್ರತಿಷ್ಠಾ ತಿಲಕ





ಅಧ್ಯಾಯ : ಐದು

# ಜೈನ ಸಂಕೀರ್ಣ ಮಾಧ್ಯಮದ ಚಿತ್ರಕಲೆ



ಕರ್ನಾಟಕ ಜೈನ ಧರ್ಮದ ಚಟುವಟಿಕೆಗಳ ಕೇಂದ್ರವೇನಿಸಿದೆ. ಜಿನಗಾರರ ಬಸದಿ ಮಠಗಳು ಅತ್ಯಧಿಕವಾಗಿರುವ ನೆಲೆಗಳೆಂದರೆ ಶ್ರವಣಬೆಳಗೊಳ, ಹೊಂಬುಜ, ಮೂಡಬಿದಿರೆ, ಕಾರ್ಕಳ, ವೇಣೂರು, ಧರ್ಮಸ್ಥಳ, ಸಿಂಹನಗದ್ದೆ ಮುಂತಾದ ದಕ್ಷಿಣ ಕನ್ನಡ ಜಿಲ್ಲೆಯ ಸ್ಥಳಗಳು ಹಾಗೆಯೆ ಸ್ತಪನಿಧಿ, ಫಲಾಸಿಕ್, ಬಾಬಾನಗರ, ವಿಜಾಪುರ, ಮುಳಗುಂದ. ಲಕ್ಷ್ಮೀನಗರ, ಮಳಖೇಡ ಮುಂತಾದವು ಉತ್ತರ ಕರ್ನಾಟಕದ ಸ್ಥಳಗಳಾಗಿವೆ. ದಕ್ಷಿಣ ಕನ್ನಡ ಜಿಲ್ಲೆಯೊಂದರಲ್ಲಿಯೇ ಸುಮಾರು ಎರಡುನೂರಕ್ಕಿಂತಲೂ ಹೆಚ್ಚು ಜಿನಬಸದಿಗಳಿರುವುದು ಗಮನಾರ್ಹವಾಗಿದೆ.

ಜೈನ ಧರ್ಮದ ಪ್ರಚಾರಕ್ಕೆ ಚಿತ್ರಿತಗೊಂಡ ಚಿತ್ರಗಳು ಹತ್ತು ಹಲವು ಬಗೆಯವು. ಈಗಾಗಲೇ ವಿವರಿಸಿದಂತೆ ಭಿತ್ತಿಚಿತ್ರಗಳು, ಹಸ್ತಪ್ರತಿ ಚಿತ್ರಗಳಲ್ಲದೆ ಇನ್ನೂ ಅನೇಕ ಬಗೆಯ ಚಿತ್ರಗಳು ಚಿತ್ರಿತಗೊಂಡಿವೆ. ಈ ಚಿತ್ರಗಳನ್ನು ಸಂಕೀರ್ಣ ಮಾಧ್ಯಮದ ಚಿತ್ರಗಳೆಂದು ವಿಂಗಡಿಸಿಕೊಳ್ಳಲಾಗಿದೆ. ೧. ಚಿತ್ರಪಟಗಳು ೨. ಲೆಪ್ಪದ ವಿಗ್ರಹಗಳು ೩. ಕಾಷ್ಠ ಶಿಲ್ಪ ಮೇಲಿನ ಬಣ್ಣದ ಚಿತ್ರಗಳು ೪. ಗಾರೆ ಶಿಲ್ಪಮೇಲಿನ ಬಣ್ಣದ ಚಿತ್ರಗಳು ೫. ಉಬ್ಬು ಶಿಲ್ಪಗಳ ಮೇಲಿನ ವರ್ಣಚಿತ್ರಗಳು (ಶಿಲೆ).

**೧. ಚಿತ್ರಪಟಗಳು**

ವಡ್ಡಾರಾಧನೆ ಪಂಪ ನಯಸೇನಾದಿಗಳು ಚಿತ್ರಪಟದ ಪ್ರಸ್ತಾಪ ಮಾಡುತ್ತಾರೆ. ಮನೆ– ಮಠಗಳಲ್ಲಿ ಇಂಥ ಪಟಗಳನ್ನು ಅಲಂಕಾರಕ್ಕಾಗಿ, ಪೂಜಾದಿಗಳಿಗೆ ಬಳಸುತ್ತಿರುವುದಾಗಿದೆ. ಇದರಲ್ಲಿ ೨೪ ತೀರ್ಥಂಕರರ ಯಕ್ಷ– ಯಕ್ಷಿಯರ ಹಾಗೂ ಲೋಕಾಕಾರ ಕಲ್ಪನೆಯ ಅನೇಕ ಚಿತ್ರಪಟಗಳು ರಚನೆಗೊಂಡಿರಬಹುದು. ಆದರೆ ಈ ಬಗೆಗಿನ ಅಧ್ಯಯನವು ನಡೆಯದ್ದಕ್ಕಾಗಿ ಜೈನ ಚಿತ್ರಪಟಗಳು ಬೆಳಕಿಗೆ ಬಂದಿಲ್ಲ. ಶ್ರೀಮತಿ ಸರಯೂ ದೋಶಿಯವರು 'ಚೌವೀಸಿ ಮಹಾವೀರ' ಎಂಬ ೧೮೨೪ರ ಅವಧಿಯಲ್ಲಿ ರಚಿತವಾದ ಚಿತ್ರಪಟದ ಪ್ರಸ್ತಾಪ ಮಾಡಿದ್ದಾರೆ. ಅದು ಮಹಾವೀರನನ್ನು ಪ್ರಮುಖವಾಗಿ ಚಿತ್ರಿಸಿದೆ. ಇನ್ನುಳಿದ ತೀರ್ಥಂಕರನ್ನು ಕೂಡ ಯಕ್ಷ–ಯಕ್ಷಿ ಸಹಿತವಾಗಿ ಚಿತ್ರಿಸಿದ ಸುಂದರವಾದ ಚಿತ್ರಪಟ ಇದಾಗಿದೆ. ಶ್ರವಣಬೆಳಗೊಳದ ಭಿತ್ತಿಚಿತ್ರಗಳ ವಿಶೇಷತೆಗಳನ್ನು ಇಲ್ಲಿ ಗುರುತಿಸಬಹುದು. ಇದರಲ್ಲಿ ಮೈಸೂರು, ತಂಜಾವೂರು ಶೈಲಿಯೇ ಒಡೆದು ಕಾಣುತ್ತದೆ.[೧]

೦೧. ಡಾ. ಬಿ.ಕೆ.ಹಿರೇಮಠ : ಸೃಷ್ಟಿ, ಪು.ಸಂ.೧೫೫



ಕನ್ನಡ ಸಾಹಿತ್ಯ ಪರಿಷತ್ತಿನ ಸಂಗ್ರಹದಲ್ಲಿಯೂ ಒಂದು ಚಿತ್ರಪಟವಿದೆ. ಅದರಲ್ಲಿ ಜಿನಭವನ ಹಾಗೂ ಅದರ ಸುತ್ತಿನ ವನ-ಕೋಟೆಯ ಚಿತ್ರಣವಿದ್ದು ಕೋಟೆಯ ಮೇಲೆ ನಾಲ್ಕು ಕಡೆಗೂ ತೋಪುಗಳನ್ನು ಚಿತ್ರಿಸಿರುವುದು ಕುತೂಲಹಕಾರಿಯಾಗಿದೆ. ಮಾನವಾಕೃತಿಗಳು ಶ್ರವಣಬೆಳಗೊಳದ ಚಿತ್ರಗಳನ್ನು ಹೋಲುತ್ತವೆಯಾದರೂ, ಅಲ್ಲಿನ ನಯ-ನಾಜೂಕುಗಳು ಇಲ್ಲಿಲ್ಲ ಹಳದಿ, ಹಸಿರು, ಕೆಂಪು ವರ್ಣಗಳನ್ನು ನೇರವಾಗಿ ಬಳಸಲಾಗಿದೆ. ಇದೊಂದು ಜಾನಪದ ಶೈಲಿಯ ಚಿತ್ರವೆನಿಸುತ್ತದೆ. ಜೈನ ಮಠಮಂದಿರ ಬಸದಿ ಹಾಗೂ ವೈಯಕ್ತಿಕ ಸಂಗ್ರಹಗಳಲ್ಲಿ ಇರಬಹುದಾದ ಇಂಥ ಚಿತ್ರಪಟಗಳನ್ನು ಸಂಗ್ರಹಿಸಿ ಅಭ್ಯಸಿಸುವುದು ಅತ್ಯಗತ್ಯವಾಗಿದೆ.[೨] ಸಧ್ಯ ಪುರಾತನ ಚಿತ್ರಗಳು ಲಭ್ಯವಿಲ್ಲ ಮಠ ಮತ್ತು ಬಸದಿಗಳಲ್ಲಿ ಇರುವ ಪಟಚಿತ್ರಗಳು ಇತ್ತೀಚಿನವುಗಳಾಗಿವೆ.

**೨. ಲೆಪ್ಪದ ವಿಗ್ರಹಗಳು**

ಲೆಪ್ಪದ ಜಿನಮೂರ್ತಿಯನ್ನು ತಯಾರಿಸುವ ವಿಷಯದಲ್ಲಿ ಜೈನಾಚಾರ್ಯರಲ್ಲಿಯೇ ಭಿನ್ನಾಭಿಪ್ರಾಯಪಟ್ಟಿದಂತೆ ತೋರುತ್ತದೆ. ವಸುನಂದಿ, ಭಟ್ಟಾಕಲಂಕ ವರ್ಧಮಾನ ಸೂರಿ ಮೊದಲಾದವರು, ಲೆಪ್ಪ, ಕಾಷ್ಠ, ದಂತಗಳಿಂದ ಜಿನಮೂರ್ತಿಯನ್ನು ತಯಾರಿಸಬಹುದೆಂದು ಹೇಳಿದರೆ ಜಯಸೇನ ಮತ್ತು ಇನ್ನಿತರ ಆಚಾರ್ಯರು ಇದನ್ನು ವಿರೋಧಿಸಿದಂತೆ ತೋರುತ್ತದೆ. ಆದರೂ ಜೈನಕಾಶಿ ಮೂಡಬಿದರೆಯಲ್ಲಿ ಎಲ್ಲಾ ರೀತಿಯ ಮೂರ್ತಿಗಳು ನಿರ್ಮಾಣಗೊಂಡು. ಒಂದು ಚರಿತ್ರಾರ್ಹವಾದ ದಾಖಲೆಯನ್ನೇ ನಿರ್ಮಿಸಿವೆ.[೩]

ಮೂಡಬಿದರೆಯ ಲೆಪ್ಪದ ಬಸದಿಯೆಂದೇ ಪ್ರಖ್ಯಾತಿ ಪಡೆದಿರುವ ಚಂದ್ರನಾಥನ ಬಸದಿಯ ಗರ್ಭಗೃಹದಲ್ಲಿ ನಾಲ್ಕೂ ಅಡಿ ಎತ್ತರದ ಪಲ್ಯಂಕಾಸನ ಭಂಗಿಯ ವಿಗ್ರಹ ಹಾಗೂ ನವರಂಗದಲ್ಲಿ ಆಳೆತ್ತರದ ಸುಖಾಸೀನ ಭಂಗಿಯಲ್ಲಿರುವ ಜ್ವಾಲಾಮಾಲಿನಿ ಮತ್ತು ಶ್ಯಾಮ ಯಕ್ಷನ ಲೆಪ್ಪದ ಅತ್ಯಂತ ಸುಂದರವಾದ ವಿಗ್ರಹಗಳಿವೆ. ಚಂದ್ರನಾಥನು ಸಿಂಹ ಪೀಠದ ಮೇಲೆ ಕುಳಿತಿದ್ದು ಹಿಂಭಾಗದಲ್ಲಿ ಒರಗು ದಿಂಬು ಕಲಾತ್ಮಕವಾಗಿ ರಚನೆಯಾಗಿದೆ. ಈ ಒಂದು ದಿಂಬನ್ನು ಹೊತ್ತುಕೊಂಡಂತಿರುವ ಎರಡು ವ್ಯಾಲಿಗಳು ವಿರುದ್ಧ ದಿಕ್ಕಿಗೆ ಮುಖಮಾಡಿ ನಿಂತಿದ್ದು. ಈ ದಿಂಬಿನ ಹಿಂಭಾಗದಲ್ಲಿ ಶೃಂಗಾರಗೊಂಡು ಇಬ್ಬರು ಚಾಮರಧಾರಿಯರು ನಿಂತಿದ್ದು ಇವರು ತೀರ್ಥಂಕರರಿಗಿಂತಲೂ ಎತ್ತರವಾಗಿದ್ದಾರೆ. ಇದು ಈ ಮೂರ್ತಿಯ ವೈಶಿಷ್ಟ್ಯ, ಇಂಥ ಒರಗು ದಿಂಬನ್ನು ಹೊಂದಿದ ಶಿಲೆಯಲ್ಲಿ ಕೊರೆದಿರುವ ಮಹಾವೀರನ ವಿಗ್ರಹವು ಬಾದಾಮಿಯ ಜೈನಗುಹೆಯಲ್ಲೂ ಮತ್ತೊಂದು ಐಹೊಳೆಯ ಮೇಗುತಿ ದೇವಾಲಯದ ಹತ್ತಿರವಿರುವ ಜೈನಗುಹೆಯಲ್ಲೂ ದ್ವಾರಬಂಧದ ಕೋಷ್ಠದಲ್ಲೂ ಕಂಡುಬಂದಿವೆ. ಈ ರೀತಿಯ ವಿನ್ಯಾಸವು ಪ್ರಾಚೀನ ಪದ್ಧತಿಯೊಂದನ್ನು ಅಭಿವ್ಯಕ್ತಪಡಿಸುತ್ತಿದೆಯೆಂದು ಹೇಳಬಹುದು.

ಇದೇ ರೀತಿಯ ಲೆಪ್ಪದ ವಿಗ್ರಹವಿರುವ ಚಂದ್ರನಾಥನ ಬಸದಿಯೊಂದನ್ನು ಹಟ್ಟಿಯಂಗಡಿಯಲ್ಲಿ ಸಾಂತರ ಜಿನದತ್ತನು ನಿರ್ಮಿಸಿದ್ದನೆಂದೂ, ಅದಕ್ಕೆ ಅಗ್ನಿಬಾಧೆ ಉಂಟಾಗಿ ಬಸದಿಯು ನಾಶವಾದ ಕಾರಣ ಕ್ರಿಶ ೧೩೮೮ರಲ್ಲಿ ಮಹಾಪ್ರಧಾನ ಬೈಚಪ್ಪದಣ್ಣಾಯಕರ ಮಗನಾದ ವಿರುಗಪ್ಪ ದಣ್ಣಾಯಕನು, ಬಾರಕುರಿನ ಎರಡು ಕೇರಿಯ ಹಲವರ ಸಹಾಯದಿಂದ ಶಿಲಾವಿಗ್ರಹವನ್ನು ಪ್ರತಿಷ್ಠಾಪಿಸಿ ಬಸದಿಯನ್ನು ಜೀರ್ಣೋದ್ಧಾರಗೊಳಿಸಿದನೆಂದೂ ಅಲ್ಲಿಯ ಶಾಸನದಲ್ಲಿ ಹೇಳಿದೆ.[೪] ಮೂಡಬಿದಿರೆಯ ಲೆಪ್ಪದ ಬಸದಿಯ ಗರ್ಭಗೃಹದಲ್ಲಿ ಈ ಲೆಪ್ಪದ ವಿಗ್ರಹಗಳು ಕಂಡುಬರುವುದರಿಂದ. ಗರ್ಭಗೃಹದ ಒಳಭಾಗಕ್ಕೆ ಅನ್ಯರಿಗೆ ಪ್ರವೇಶವಿಲ್ಲದ ಕಾರಣ, ಬಸದಿಯ ಪ್ರವೇಶ ಮಂಟಪದಿಂದ ಛಾಯಾಚಿತ್ರಣವನ್ನು ಕಾಣಬಹುದಾಗಿದೆ.

---

೦೨. ಡಾ. ಬಿ.ಕೆ.ಹಿರೇಮಠ : ಸೃಷ್ಟಿ, ಪು.ಸಂ.೧೫೬

೦೩. ಡಾ. ಎಸ್.ಡಿ.ಶೆಟ್ಟಿ : ಚಂದ್ರಪ್ರಭ, ಪು.ಸಂ.೯೧

೦೪. -ಅದೇ- ಪು.ಸಂ.೯೧



ಇದೇ ರೀತಿಯ ಲೆಪ್ಪದ ಬಿಂಬಗಳನ್ನು ಮೂಡಬಿದಿರೆಯ ಅಮ್ಮನವರ ಬಸದಿ ಅಥವಾ ಹಿರೇಬಸದಿ, ಇದರಲ್ಲಿನ ಶಾಂತಿನಾಥ ಬಿಂಬ ಹತ್ತನೆಯ ಶತಮಾನದ್ದು ಇದರ ಪಕ್ಕಕ್ಕೆ (ತೆಂಕಣಕ್ಕೆ) ಚತುರ್ವಿಂಶತಿ ತೀರ್ಥಂಕರರ ಲೆಪ್ಪದ ಮೂರ್ತಿಗಳಿವೆ. ಈ ೨೪ ತೀರ್ಥಂಕರರನ್ನು ಬಣ್ಣದಿಂದ ಅಲಂಕರಿಸಿದ್ದು ಇಲ್ಲಿ ತೀರ್ಥಂಕರರು ಖಡ್ಗಾಸನದಲ್ಲಿ ನಿಂತಿದ್ದು. ಜೈನ ಆಗಮಶಾಸ್ತ್ರದ ಪ್ರಕಾರ ಆಯಾ ತೀರ್ಥಂಕರರ ಬಣ್ಣವನ್ನು ಲೇಪಿಸಲಾಗಿದೆ. ತೀರ್ಥಕರರ ಬಿಂಬಕ್ಕೆ ಮಾತ್ರ ಸಂಕೇತ ವರ್ಣಗಳನ್ನು ಬಳಸಿ ಪ್ರಭಾವಳಿ ಮತ್ತು ಪೀಠಕ್ಕೆ ಕಡು ಹಸಿರು ವರ್ಣವನ್ನು ಲೇಪಿಸಲಾಗಿದೆ. ಬಹುಶಃ ಈ ವಿಗ್ರಹಗಳಿಗೆ ಇತ್ತೀಚಿನ ರಾಸಾಯನಿಕ ಬಣ್ಣಗಳನ್ನು ಬಳಸಿದಂತಿದೆ.

ಹಿರೇಬಸದಿಯನ್ನು ಅಮ್ಮನವರ ಬಸದಿ ಎಂದು ಕರೆಯಲು ಕಾರಣವಾದ ಹಾಗೂ ವಿಶಿಷ್ಟವಾದ ೨೪ ತೀರ್ಥಂಕರರ ಹರಿಪೀಠದ ಎರಡೂ ಕಡೆಗಳಲ್ಲಿ ಮನುಷ್ಯ ಪ್ರಮಾಣದ ಎರಡು ಲೆಪ್ಪದ ಸ್ತ್ರೀ ಮೂರ್ತಿಗಳನ್ನು ಅತ್ಯಂತ ಗಮನಾರ್ಹವಾಗಿವೆ. ಇವುಗಳಲ್ಲಿ ಪಶ್ಚಿಮಕ್ಕೆ ಮುಖ ಮಾಡಿರುವ ಬಿಂಬವೇ ಸರಸ್ವತಿಯದು. ಪೂರ್ವಕ್ಕೆ ಮುಖಮಾಡಿರುವ ಬಿಂಬ ಪದ್ಮಾವತಿಯದು. ಇದರಿಂದಾಗಿ ಶಾಂತಿನಾಥ ಬಸದಿಯಾಗಬೇಕಾಗಿದ್ದು ಅಮ್ಮನವರ ಬಸದಿಯಾಗಿದೆ. ಪಶ್ಚಿಮಕ್ಕೆ ಮುಖಮಾಡಿರುವ ಬಿಂಬ ವಿದ್ಯಾದೇವಿಯಾದ ಸರಸ್ವತಿಯಾಗಿದ್ದು ನಾಲ್ಕು ಭುಜಗಳನ್ನು ಹೊಂದಿದ್ದು ಅರ್ಧಲಲಿತಾಸನದಲ್ಲಿ ಕುಳಿತಿರುವ ವಿಗ್ರಹಕ್ಕೆ ಸೀರೆಯನ್ನು ತೊಡಿಸಿರುವುದರಿಂದ ದೇವಿಯ ಅಂಗ ರಚನೆಯನ್ನು ಕಾಣಲು ಸಾಧ್ಯವಿಲ್ಲ. ಆದರೆ ಮುಖ ಮತ್ತು ಕೈಗಳ ಭಾಗವನ್ನು ಕಾಣಬಹುದು. ಬಿಳಿಮಿಶ್ರಿತ ಹಳದಿ ಬಣ್ಣದಿಂದ ಕೂಡಿದ ಮೈಬಣ್ಣವನ್ನು ಹೊಂದಿದ್ದು ಗೋಪುರವನ್ನು ಕೀರಿಟವನ್ನು ಧರಿಸಿದ್ದು ಎರಡು ಕಿವಿಯಲ್ಲಿ ವೃತ್ತಾಕಾರದ ಕರ್ಣಾಭರಣವನ್ನು ಹೊಂದಿದ್ದು ಆಭರಣಗಳಿಗೆ ಬಂಗಾರದ ಬಣ್ಣವನ್ನೂ ಹಚ್ಚಿದ್ದು ಒಟ್ಟಾರೆ ದೇವಿಯ ಮುಖ ಮಂದಹಾಸದಿಂದ ಕೂಡಿದ ದೇವಿಯ ಶಿಲ್ಪವು ಒಂದು ಗೂಡಿನಲ್ಲಿ ರಚನೆಯಾಗಿದೆ. ಗೂಡಿನ ಹೊರಭಾಗದಲ್ಲಿ ಸುಂದರವಾದ ಪ್ರಭಾವಳಿಯನ್ನು ಗಾರೆಯಿಂದ ನಿರ್ಮಿಸಿದ್ದು ಪ್ರಭಾವಳಿಯ ಮೇಲ್ಭಾಗದಲ್ಲಿ ಕೀರ್ತಿಮುಖ ಹಾಗೂ ಎರಡು ಬದಿಯಲ್ಲಿ ವ್ಯಾಲಿಗಳನ್ನು ಹಾಗೂ ಕೆಳಭಾಗದಲ್ಲಿ ಚಾಮರವನ್ನು ಹಿಡಿದು ಸೇವೆಯನ್ನು ಮಾಡುತ್ತಿರುವ ಇಬ್ಬರು ಸ್ತ್ರೀ ವಿಗ್ರಹಗಳನ್ನು ಕಾಣಬಹುದು. ಹಾಗೂ ಪೀಠದ ಕೆಳಭಾಗದಲ್ಲಿ ಸಿಂಹದ ಕೆಲವು ವಿಶಿಷ್ಟ ಭಂಗಿಗಳನ್ನು ಕಾಣಬಹುದು.

ಪೂರ್ವಕ್ಕೆ ಮುಖಮಾಡಿರುವ ಬಿಂಬ ಪದ್ಮಾವತಿ ಅಮ್ಮನವರ ಬಿಂಬವಾಗಿದ್ದು. ದೇವಿಯ ಮುಖವರ್ಣವು ರಕ್ತ ವರ್ಣ ಅಥವಾ ಕೆಂಪು ಬಣ್ಣದಿಂದ ಕೂಡಿದ ನಾಲ್ಕು ಭುಜಗಳಲ್ಲಿ ದೇವಿಯ ಕೈಯಲ್ಲಿ ಅಂಕುಶ, ಅಕ್ಷಸೂತ್ರ, ಕಮಲ, ವರದ ಧಾರಣೆಯಾಗಿದ್ದು ಸರಸ್ವತಿ ವಿಗ್ರಹದ ಹಾಗೆ ಆಭರಣವನ್ನು ಹೊಂದಿದ್ದು ಕಿರೀಟದ ಮೇಲೆ ಮೂರು ಹೆಡೆಯ ಸರ್ಪವನ್ನು ಕಾಣಬಹುದು. ಸರಸ್ವತಿಯ ಪ್ರಭಾವಳಿಗಿಂತ ಪದ್ಮಾವತಿಯ ಪ್ರಭಾವಳಿಯು ವಿಶಿಷ್ಟವಾಗಿದ್ದು ದೇವಾಲಯದ ಗೋಪುರ ರಚನೆಯನ್ನು ಕಾಣಬಹುದು. ಕೀರ್ತಿಮುಖ ಮತ್ತು ವ್ಯಾಲಿ ಹಾಗೂ ಎರಡು ಬದಿಯಲ್ಲಿ ದೇವಿಗೆ ಸೇವೆ ಮಾಡುತ್ತಿರುವ ಸ್ತ್ರೀಯರ ಮೂರ್ತಿಗಳನ್ನು ಕಾಣಬಹುದು.

ಹದಿನಾಲ್ಕನೆಯ ಶತಮಾನಕ್ಕೆ ಸೇರಿದ ಮತ್ತು ಒಬ್ಬನೇ ಶಿಲ್ಪಿಯ ರಚನೆಯಾಗಿರುವುದನ್ನು ಇಲ್ಲಿ ಗಮನಿಸಬಹುದು. ಆದರೆ ೧೪ನೇಯ ಶತಮಾನಕ್ಕೆ ಸೇರಿದ ಈ ಕಲಾಕೃತಿಯ ಬಣ್ಣಗಳನ್ನು ಸದ್ಯದ ರಾಸಾಯನಿಕ ಮೂಲ ಬಣ್ಣಗಳನ್ನು ಬಳಸಿ ನವೀಕರಿಸಿರುವುದನ್ನು ಇಲ್ಲಿ ಗಮನಿಸಬಹುದು.

**೩. ಕಾಷ್ಠ ಶಿಲ್ಪ ಮೇಲಿನ ಬಣ್ಣದ ಚಿತ್ರಗಳು**

ಕಾಷ್ಠವು ಬಹುಕಾಲ ಬಾಳುವುದಿಲ್ಲವೆಂಬ ಕಾರಣದಿಂದ ಮೂರ್ತಿ ನಿರ್ಮಾಣ ಕಲೆಗೆ ಅಷ್ಟಾಗಿ ಬಳಸುವದಿಲ್ಲ ಎಂದು ಪ್ರೋ.ಎಸ್.ಪ್ರಭಾಕರರರು ಅಭಿಪ್ರಾಯಗಳನ್ನು ಗಮನಿಸಬಹುದು.[೫] ದಕ್ಷಿಣಕನ್ನಡದಲ್ಲಿ ಹೇರಳವಾಗಿ

೦೫. ಡಾ. ಎಸ್.ಡಿ.ಶೆಟ್ಟಿ : ಚಂದ್ರಪ್ರಭ, ಪು.ಸಂ.೧೯೧



ದೊರೆಯುವ ಮರಗಳಿಂದ ಜೈನಮಠ ಮತ್ತು ಬಸದಿಗಳನ್ನು ಮರದ ಹಲಗೆಯಿಂದ ನಿರ್ಮಿಸಿರುವುದನ್ನು ಕಾಣುತ್ತೇವೆ. ತ್ರಿಭುವನ ತಿಲಕ ಚೂಡಾಮಣಿ ಬಸದಿ (ಹೊಸ ಬಸದಿ) ಗೋಪುರದ ಹೊರಭಾಗದಲ್ಲಿ ಹೊರಚಾಚಿ ನಿಂತಿರುವಂತೆ ಇರುವ ಅನೇಕ ಮದನಿಕಾ ಶಿಲ್ಪಗಳನ್ನು ಇಲ್ಲಿ ಕಾಣಬಹುದು. ಆ ಶಿಲ್ಪಗಳಿಗೆ ವರ್ಣವನ್ನು ಲೇಪಿಸಿದ್ದು ಆದರೆ ಈ ವರ್ಣಗಳು ಸಧ್ಯಕ್ಕೆ ದೊರೆಯುವ ರಾಸಾಯನಿಕ ವರ್ಣಗಳಿಂದ ಕೂಡಿದ್ದು ಪೂರ್ಣ ನವೀಕೃತವಾಗಿ ಕಾಣುತ್ತವೆ. ಆದರೆ ಮೂಡಬಿದಿರೆಯ ಅನೇಕ ಬಸದಿಗಳ ಮೊದಲನೆಯ ಅಂತಸ್ತಿನಲ್ಲಿ ಗೋಪುರದ ಮುಖಭಾಗದಲ್ಲಿ ಮರದ ಹಲಗೆಯ ಮೇಲೆ ಭಿತ್ತಿಚಿತ್ರದ ಕುರುಹುಗಳನ್ನು ಕಾಣಬಹುದು. ಇದೇ ರೀತಿಯಲ್ಲಿ ಹೊಸ ಬಸದಿಯ ಮದನಿಕಾ ಶಿಲ್ಪಗಳಿಗೂ ಹಾಗೂ ಮರದ ಪಟ್ಟಿಕೆಯಲ್ಲಿ ಚಿತ್ರಗಳಿರಬಹುದು. ಎಂದು ಊಹಿಸಬಹುದು. ಸಧ್ಯ ಹೊಸಬಸದಿಯ ಜೀರ್ಣೋದ್ಧಾರ ಕೆಲಸ ನಡೆಯುತ್ತಿದ್ದು ಬಸದಿಗಳ ಛಾಯಾಚಿತ್ರಗಳನ್ನು ತೆಗೆಯಲು ಅನುಮತಿ ಇಲ್ಲದ ಕಾರಣ ಇಲ್ಲಿ ವಿಷಯವನ್ನು ಚರ್ಚಿಸಲಾಗಿದೆ.

### ೪. ಗಾರೆ ಶಿಲ್ಪಮೇಲಿನ ಬಣ್ಣದ ಚಿತ್ರಗಳು

ಜೈನಮಠ ಶ್ರವಣಬೆಳಗೊಳದ ಕಟ್ಟಡವು ಮೈಸೂರರಸರ ಕಾಲದ್ದಾಗಿದ್ದು, ಬಹುಶಃ ಇಲ್ಲಿದ್ದ ಹಳೆಯ ಕಟ್ಟಡವನ್ನು ಕಿತ್ತು ಹೊಸದಾಗಿ ಕಟ್ಟಿಸಿರಬಹುದು.[೬] ಭಾಂಡಾರ ಹುಳ್ಳಮಯ್ಯನು ಭಂಡಾರ ಬಸದಿಯನ್ನು ಇಲ್ಲಿ ಕಟ್ಟಿಸಿದ ಮೇಲೆ ಮಠವು ಅಕ್ಕನ ಬಸದಿ ಕಡೆಯಿಂದ (ದಾನ ಶಾಲಾ ಬಸದಿ ಹಾಗೂ ಸಿದ್ಧಾಂತ ಬಸದಿಯಿಂದ) ಇಲ್ಲಿಗೆ ಬದಲಾಯಿಸಿರಬಹುದು. ಈಗಿರುವ ಕಟ್ಟಡದ ಮೇಲುಪ್ಪರಿಗೆಯನ್ನು ಈ ಶತಮಾನದ ಸು.೧೯೩೦ ದಶಕದಲ್ಲಿ ನಿರ್ಮಿಸಿರುತ್ತಾರೆ. ಜೈನಮಠದ ಮಧ್ಯ ತೊಟ್ಟಿ ಮನೆಯಂತಿದ್ದು, ಮಠದ ಮಧ್ಯ ಮತ್ತು ಮುಖ್ಯದ್ವಾರದ ಮೇಲ್ಭಾಗದಲ್ಲಿ ಗಾರೆಯಿಂದ ಮಾಡಿರುವ ಮೂರ್ತಿ ಶಿಲ್ಪಗಳನ್ನು ಕಾಣಬಹುದು. ಈ ಮೂರ್ತಿಶಿಲ್ಪಗಳು ಹೊಯ್ಸಳ ಶೈಲಿಯಿಂದ ಕೂಡಿದ ಶಿಲ್ಪಗಳಾಗಿದ್ದು ಇಲ್ಲಿ ವಿಶೇಷವಾಗಿ ಜೈನ ಯಕ್ಷಿಯರನ್ನು ಹೊಯ್ಸಳ ಶೈಲಿಯ ಗಾರೆಶಿಲ್ಪಗಳನ್ನು ಕಾಣಬಹುದು. ಶಿಲ್ಪಗಳ ಮೇಲೆ ವಿವಿಧ ವರ್ಣಗಳಿಂದ ಚಿತ್ರಿಸಲಾಗಿದ್ದು. ಇಂದಿಗೂ ಅಳಿದುಳಿದ ವರ್ಣದ ತುಣುಕುಗಳು ಕಂಡು ಬರುತ್ತವೆ. ಹೆಚ್ಚಿನ ವರ್ಣ ಲೇಪನವು ಮಳೆ, ಗಾಳಿ, ಬಿಸಿಲು, ಮುಂತಾದ ಪ್ರಾಕೃತಿಕ ಆಪತ್ತಿನಿಂದ ನಾಶ ಹೊಂದಿದೆ ಎಂದು ಹೇಳಬಹುದು. ಇಲ್ಲಿ ಬಳಸಲಾದ ವರ್ಣಗಳು ಕೆಂಪು, ಹಳದಿ, ಹಸಿರು, ನೀಲಿ ಬಣ್ಣವನ್ನು ಅಲ್ಲಲ್ಲಿ ಕಾಣಬಹುದು. ಈ ಶಿಲ್ಪಗಳ ಮೇಲೆ ಬಿಳಿ ಸುಣ್ಣವನ್ನು ಲೇಪಿಸಿದ್ದು ಇಂದು ಈ ಚಿತ್ರಗಳು ತಮ್ಮ ಪ್ರಾಚೀನತೆಯನ್ನು ಕಳೆದುಕೊಂಡು ನವ್ಯ ಚಿತ್ರಗಳಂತೆ ಕಂಗೊಳಿಸುತ್ತಿವೆ.

### ೫. ಉಬ್ಬು ಶಿಲ್ಪಗಳ ಮೇಲಿನ ವರ್ಣಚಿತ್ರಗಳು (ಶಿಲೆ)

ಮೂಡಬಿದಿರೆಯ ಲೆಪ್ಪದ ಬಸದಿಯ ಪ್ರವೇಶ ದ್ವಾರದಲ್ಲಿ ಬರುವ ದ್ವಾರಪಾಲಕರ ಕಲ್ಲಿನ ಉಬ್ಬು ಶಿಲ್ಪಗಳನ್ನು ವರ್ಣಲೇಪನದಿಂದ ಕೂಡಿದ್ದು ಇವು ಇತ್ತೀಚಿನ ದಿನಗಳಲ್ಲಿ ವರ್ಣವನ್ನು ಲೇಪಿಸಿರುವುದಾಗಿ ಕಂಡು ಬರುತ್ತದೆ. ಆದರೆ ಈ ಉಬ್ಬುಶಿಲ್ಪಗಳು ತುಂಬಾ ವೈವಿಧ್ಯಮಯವಾಗಿದ್ದು. ಜಾನಪದ ಶೈಲಿಯನ್ನು ಹೋಲುತ್ತವೆ. ಶಿಷ್ಟಪದಕ್ಕೆ ಭಿನ್ನವಾದ ಶೈಲಿಯಾಗಿದೆ. ಈ ಉಬ್ಬು ಶಿಲ್ಪಗಳಿಗೆ ಕಪ್ಪು ಬಾಹ್ಯರೇಖೆಯನ್ನು ಹೊಂದಿದ್ದು ತಿಳಿನೀಲಿ ಬಣ್ಣದಿಂದ ಕೂಡಿದೆ. ಬಲಭಾಗದ ದ್ವಾರಪಾಲಕ ಶಿಲ್ಪವು ಸಾಧಾರಣ ಮುಂಡಾಸನ್ನು ಸುತ್ತಿದ್ದು ಏಕಪಾದದಲ್ಲಿ ಕೋಲನ್ನು ಒರಗಿಕೊಂಡು ನಿಂತಿರುವುದನ್ನು ಗಮನಿಸಬಹುದು. ಅದೇ ರೀತಿ ಎಡಭಾಗದಲ್ಲಿ ಇರುವ ದ್ವಾರ ಪಾಲಕರ ಶಿಲ್ಪವು ಮುನಿಯ ರೀತಿ ತಲೆಯ ತುಂಬ ಕೂದಲನ್ನು ಹೊಂದಿದ್ದು ಅದನ್ನು ಗಂಟು ಹಾಕಿಕೊಂಡಿದ್ದು ಉದ್ದನೆಯ ಗಡ್ಡವನ್ನು ಹೊಂದಿದ್ದು ಬಲಗೈಯಲ್ಲಿ ಗದೆಯ ರೂಪದ ದಂಡ ಹಾಗೂ ಎಡಭುಜದಲ್ಲಿ ಚಾಮರವನ್ನು ಹೊಂದಿದ್ದು ಎಡಕಾಲನ್ನು ಊರಿ ನಿಂತಿರುವುದನ್ನು ಕಾಣಬಹುದು. ಒಟ್ಟಿನಲ್ಲಿ

೦೬. ಡಾ. ದೇವರಕೊಂಡಾ ರೆಡ್ಡಿ : ಶ್ರವಣಬೆಳಗೋಳದ ಬಸದಿಗಳ ವಾಸ್ತುಶಿಲ್ಪ, ಪು.ಸಂ.೬೮



ಉಬ್ಬುಶಿಲ್ಪಗಳಿಗೆ ಬಣ್ಣವನ್ನು ಲೇಪಿಸಿದಾಗ ಒಂದು ಕಲಾಕೃತಿ (2D) ವೈವಿಧ್ಯತೆಯನ್ನು ಈ ಶಿಲ್ಪದಲ್ಲಿ ಕಾಣಬಹುದಾಗಿದೆ. ಇಲ್ಲೆಲ್ಲ ವರ್ಣ ವಿನ್ಯಾಸವಿದ್ದು ಅದು ಕ್ರಮೇಣ ಕಡಿಮೆಯಾಗಿರುವುದು ಕಂಡು ಬರುತ್ತದೆ. ಪ್ರಾಚೀನ ಕಾಲದಲ್ಲಿ ಸುಂದರವಾದ ಅಲಂಕಾರಕ್ಕಾಗಿ ಶಿಲ್ಪಗಳಿಗೆ ಮೇಲೆ ವರ್ಣವಿನ್ಯಾಸ ಮಾಡುತ್ತಿದ್ದುದು ಒಂದು ಪರಂಪರೆಯಾಗಿ ಬೆಳೆದುಬಂದಂತೆ ಕಂಡು ಬರುತ್ತದೆ. ಉದಾಹರಣೆಗೆ ಬಾದಾಮಿಯ ಗುಹಾಲಯಗಳು ಪೂರ್ಣವಾಗಿ ವರ್ಣಗಳಿಂದ ಅಲಂಕೃತವಾಗಿದ್ದುವಂತೆ. ಈಗಲೂ ಅಲ್ಲಲ್ಲಿ ವರ್ಣವಿನ್ಯಾಸ ಮಾಡಿದ ಅಂಶ ಸ್ಪಷ್ಟವಾಗಿ ಕಂಡು ಬರುತ್ತದೆ. ಹಾಗೆಯೇ ಜೈನ ಶಿಲ್ಪಗಳಿಗೂ ವರ್ಣವಿನ್ಯಾಸ ಮಾಡಿದ ವಿವರಗಳು ನಮಗೆ ಲಭ್ಯವಾಗುತ್ತಿದ್ದು ಇಲ್ಲಿ ಕೆಲವನ್ನು ಮಾತ್ರ ಮಾದರಿಗಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

*****





ಮೂಡಬಿದರೆಯ ಲೆಪ್ಪದ ಬಸದಿ







ಮೂಡಬಿದರೆಯ ಅಮ್ಮನವರ ಬಸದಿ



ಅಂಗಡಿಯ ವಾಸಂತಿಕಾ ದೇವಾಲಯ








ಶ್ರವಣಬೆಳಗೊಳದ ಗಾರೆ ಶಿಲ್ಪಗಳು (ಯಕ್ಷಿಯರು)



ಉತ್ತರ ಭಾರತದಿಂದ ಶ್ರವಣಬೆಳಗೊಳಕ್ಕೆ ಕ್ರಿ.ಪೂ. ಮೂರನೇ ಶತಮಾನದ ಸುಮಾರಿಗೆ ಬಂದು ನೆಲೆಸಿದ ಜೈನಧರ್ಮವು ಕೆಲವು ಕಾಲದ ಬಳಿಕ ಹಂತ ಹಂತವಾಗಿ ತನ್ನ ಕ್ಷೇತ್ರವನ್ನು ವಿಸ್ತರಿಸಿಕೊಳ್ಳುತ್ತಾ "ಕರ್ನಾಟಕದ ಇತಿಹಾಸವೆಂದರೆ ಜೈನ ಧರ್ಮದ ಇತಿಹಾಸವೆನ್ನುವಷ್ಟುರ ಮಟ್ಟಿಗೆ" ಇಲ್ಲಿಯ ಸಾಂಸ್ಕೃತಿಕ ಬದುಕಿನ ಒಳಪದರಗಳಲ್ಲಿ ಪ್ರವೇಶ ಪಡೆದು ತನ್ನ ಪ್ರಭುತ್ವದ ವರ್ಚಸ್ಸನ್ನು ಹೆಚ್ಚಿಸಿಕೊಂಡಿತು. ಸುಮಾರು ಒಂದು ಸಾವಿರ ವರ್ಷಗಳಷ್ಟು ಧೀರ್ಘ ಒಡನಾಟದಲ್ಲಿ ಜೈನ ಮತ್ತು ಸ್ಥಳೀಯ ಸಂಸ್ಕೃತಿಗಳು ಪರಸ್ಪರ ಹಾಸೂಹೊಕ್ಕಾಗಿ ಬೆರತುಕೊಂಡವು. ಮಾತ್ರವಲ್ಲ ಈ ಹೊಕ್ಕಳು ಹುರಿಯ ಸಂಬಂಧಗಳು ಇಲ್ಲಿಯ ಚರಿತ್ರೆ, ಆಚರಣೆ, ನಂಬಿಕೆ ಮೊದಲಾದ ಅಂತರ್ ಶಿಸ್ತಿನ ನಡುವೆಯೂ ಅಭಿವ್ಯಕ್ತಿಗೊಂಡವು. ಜೈನ ಧರ್ಮದ ಈ ಯಶೋಗಾಥೆಯ ಚಿತ್ರವು ಕರ್ನಾಟಕದ ಇತರ ಭಾಗಗಳಲ್ಲಿ ಕಂಡುಬಂದಿರುವಂತೆ ಮೇಲ್ಮಟ್ಟದ ತಾತ್ವಿಕ ನೆಲೆಯಲ್ಲಿ ಮಾತ್ರವಾಗಿರದೆ, ದಿನ ನಿತ್ಯದ ಜೀವನ ವಿಧಾನದಲ್ಲಿ ಚಾಲ್ತಿಯಲ್ಲಿರುವುದು ಇದರ ಅನನ್ಯತೆಗೆ ಸಾಕ್ಷಿಯಾಗಿದೆ. ಇಲ್ಲಿ ಬೆಳೆದು ಬಂದಿರುವ ಎಲ್ಲಾ ಕಲಾಪ್ರಕಾರಗಳಲ್ಲೂ ಒಂದೇ ರೀತಿಯ ಧರ್ಮ ಸಮನ್ವಯ ಸಾಮರಸ್ಯಗಳನ್ನು ಗುರುತಿಸಬಹುದಾಗಿದೆ.

ಕರ್ನಾಟಕದ ಜೈನ ಚಿತ್ರಗಳಿಗೆ ಅದರದೇ ಆದ ಒಂದು ಪರಂಪರೆಯಿದೆ. ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ ಬರುವಾಗ ಜೈನ ಧರ್ಮವು ಉತ್ತರ ಭಾರತದಲ್ಲಿ ಬೆಳೆದು ಬಂದಿದ್ದ ಎಲ್ಲಾ ವೈವಿಧ್ಯತೆ ಮತ್ತು ವೈಲಕ್ಷಣಗಳನ್ನು ಮೈಗೂಡಿಸಿಕೊಂಡೇ ಬಂದಿದ್ದು, ತೀರ್ಥಂಕರರ ಮೂರ್ತಿ ನಿರ್ಮಾಣ ಚೈತ್ಯಾಲಯ ರಚನೆ, ಯಕ್ಷ- ಯಕ್ಷಿಯರ ಕೆತ್ತನೆ, ಸ್ತೂಪರಚನೆ, ಸಮಾಧಿ ಗೃಹ ರಚನೆಗಳೆಲ್ಲವೂ ಅಲ್ಲಿ ಬೆಳೆದು ಬಂದಿದ್ದ ಸಂಪ್ರದಾಯವೇ ಆಗಿತ್ತು, ಮುಂದೆ ಕರ್ನಾಟಕಕ್ಕೆ ಆಗಮಿಸಿದ ವೇಳೆ ಇಲ್ಲಿಯ ಶೈಲಿಯನ್ನು ಈ ಕಲೆ ಅಳವಡಿಸಿಕೊಂಡಿತ್ತು. ಹೀಗೆ ಜೈನ ಕಲೆಗೆ ಒಂದು ವಿಶಿಷ್ಟವಾದ ಶಕ್ತಿ ಇಲ್ಲಿ ದೊರೆಯಿತು.

ದಕ್ಷಿಣ ಭಾರತವನ್ನು ಅಳಿದ ರಾಜಮನೆತನಗಳು ಅನೇಕ, ತಮ್ಮ ಅಳ್ವಿಕೆ ಕಾಲದಲ್ಲಿ ಇನ್ನಿತರ ಕ್ಷೇತ್ರಗಳಿಗಿಂತ ವಾಸ್ತುಶಿಲ್ಪ ಹಾಗೂ ಚಿತ್ರಕಲಾ ಕ್ಷೇತ್ರಕ್ಕೆ ನೀಡಿದ ಕೊಡುಗೆ ಅಪಾರವಾದದ್ದು, ಬದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳ, ವಿಜಯನಗರ, ಮೈಸೂರು ಹಾಗೂ ನೆರೆಯ ಚೋಳ, ಪಲ್ಲವ, ಮುಂತಾದ



ರಾಜಮನೆತನಗಳು ವಾಸ್ತುಶಿಲ್ಪ ಹಾಗೂ ಚಿತ್ರಕಲೆಗಳಲ್ಲಿ ತಮ್ಮದೇ ಆದ ಶೈಲಿಯನ್ನು ಹುಟ್ಟುಹಾಕಿದವು. ಹೀಗೆ ಹುಟ್ಟಿಕೊಂಡ ಶೈಲಿಗಳಿಗೆ ಅಯಾ ರಾಜಮನೆತನಗಳ ಹೆಸರುಗಳನ್ನು ಅನ್ವಯಿಸಿಕೊಂಡಿವೆ.[೧] ಪ್ರಸ್ತುತ ಅಧ್ಯಾಯದಲ್ಲಿ ಜೈನ ಚಿತ್ರಕಲೆಯ ಶೈಲಿ, ತಂತ್ರಗಾರಿಕೆ. ಪ್ರಭಾವ ಪ್ರೇರಣೆ ಮತ್ತು ಲಕ್ಷಣಗಳನ್ನು ಕುರಿತು ಪರಿಶೀಲಿಸುವ ಪ್ರಯತ್ನವಾಗಿದೆ.

ಕರ್ನಾಟಕದ ಜೈನ ಭಿತ್ತಿಚಿತ್ರಗಳು ವಿಜಯನಗರದ ಅಂತ್ಯದ ಅಥವಾ ಮುಂಚಿನ ಮೈಸೂರು ಶೈಲಿಯನ್ನು ಹೋಲುತ್ತವೆ. ಹಸ್ತಪ್ರತಿಯಲ್ಲಿ ಧವಲ, ಜಯಧವಲ, ಮಹಾಧವಲ ಗ್ರಂಥಗಳು ಮತ್ತು ಶ್ರವಣಬೆಳಗೊಳದ ಮಹಾಪುರಾಣ ಹಾಗೂ ಕೊಲ್ಲಾಪುರದ ಲಕ್ಷ್ಮೀಸೇನ ಭಟ್ಟಾರಕರ ಸಂಗ್ರಹದಲ್ಲಿರುವ ಹಸ್ತಪ್ರತಿಗಳು ಉತ್ತರ ಭಾರತದಲ್ಲಿ ಭಾರತೀಯ ಕಲಾ ಶೈಲಿಯನ್ನು ಹೊಂದಿದೆ. ಸಾಮಾನ್ಯವಾಗಿ ಧವಳ ಗ್ರಂಥಗಳಲ್ಲಿನ ಚಿತ್ರಗಳನ್ನು ಡಾ. ಶಿವರಾಮ ಕಾರಂತರು "ಚಿಕಣಿ ಚಿತ್ರ" ಗಳೆಂದು (Maniatures) ಕರೆದಿದ್ದಾರೆ.[೨] ಕಿರುರೂಪದ ಈ ಚಿತ್ರಗಳಲ್ಲಿ ಸೂಕ್ಷ್ಮ ಪ್ರತಿರೂಪ ಕಲೆ ಅಮೋಘವಾದ ರೀತಿಯಲ್ಲಿಯೂ ಮೂಡಿಬಂದಿದೆ. ಗುಜರಾತ ಭಾಗದ ಚಿಕಣಿ ಚಿತ್ರಗಳು ಪ್ರತ್ಯೇಕ ಜೈನ ಶೈಲಿಯೇ ಬೆಳೆದು ಬಂದಿದೆ. ಗುಜರಾತಿನ ಜೈನರಲ್ಲಿ ಧಾರ್ಮಿಕ ಗ್ರಂಥಗಳನ್ನು ಪ್ರತಿಮಾಡಿಸಿರುವುದು ಒಂದು ವಿಧಿಯಾಗಿರುವುದರಿಂದ ಗುಜರಾತಿ ಶೈಲಿಯು ಮುಖ್ಯವಾಗಿ ಮೂರನೇಯ ಒಂದು ಭಾಗ ಪಾರ್ಶ್ವಕ್ಕೆ ಹೊಂದಿರುವ ಮುಖ ಚೂಪಾದ ಮೂಗು, ಹತ್ತಿರವಾದ ದೊಡ್ಡ ಕಣ್ಣುಗಳು ಗಲ್ಲ ಮುಖ ಹೊರ ಚಾಚಿರುವುದು ಮುಖ್ಯ ಲಕ್ಷಣವಾಗಿದೆ. ತೀರ್ಥಂಕರ ಹಾಗೂ ಯಕ್ಷ ಎದೆ ಅಗಲ ಸೊಂಟ ಕಿರಿದಾಗಿದ್ದು ಯಕ್ಷಿಯರ ಸುಪುಷ್ಪ ಎದೆ ಎತ್ತರ ಅತಿ ಅಲಂಕಾರವಾಗಿರುವುದು ಈ ಪ್ರಮುಖವಾಗಿ ಈ ಲಕ್ಷಣಗಳು ಪ್ರಸ್ತುತ ಶ್ರವಣಬೆಳಗೊಳದ ಮಹಾಪುರಾಣದ ಕಾಗದ ಹಸ್ತಪ್ರತಿಗಳಲ್ಲಿ ಹಾಗೂ ಧವಳ ಗ್ರಂಥಗಳಲ್ಲಿ ಗುಜರಾತಿಯ ಮೂರು ಲಕ್ಷಣಗಳನ್ನು ಕಾಣಬಹುದು. ಆದರೆ ಧವಲ ಗ್ರಂಥಗಳಲ್ಲಿ ಹೊಯ್ಸಳ ಶೈಲಿಯ[೩] ಹಾಗೂ ಗುಜರಾತಿ ರಾಜಸ್ಥಾನ ಶೈಲಿಯ ಸಮನ್ವಯವನ್ನು ಕಾಣಬಹುದು. ಕರ್ನಾಟಕದಲ್ಲಿ ಅದೇ ರೀತಿ ಹಾಸನದ ಜ್ವಾಲನಯ್ಯನವರ ಸಂಗ್ರಹದಲ್ಲಿ ಇದ್ದು ಕಾಗದ ಹಸ್ತಪ್ರತಿಗಳು ಮೈಸೂರು ಶೈಲಿಯಾಗಿದ್ದು ಸಂಪ್ರದಾಯಕ ಶಿಷ್ಟಪದ ಕಲೆಯಿಂದ ಕೂಡಿದೆ.

ಕರ್ನಾಟಕದ ಜೈನ ಚಿತ್ರಕಲೆಯಲ್ಲಿ ಭಿತ್ತಿಚಿತ್ರಗಳ ರಚನಾ ತಂತ್ರವು ಅನೇಕ ಚಿತ್ರದಲ್ಲಿ ಅನೇಕ ಬಗೆಯ ತಂತ್ರಗಾರಿಕೆಯಿಂದ ಬಣ್ಣ ಲೇಪನ ಮಾಡಿದ್ದು ಕಂಡಬರುತ್ತದೆ. ಕೆಲವು ಕಡೆಗೆ ವರ್ಣವನ್ನು ದಟ್ಟವಾಗಿ ಲೇಪಿಸಿದ್ದರೆ ಮತ್ತು ಕೆಲವು ಕಡೆ ತೆಳುವಾಗಿ ಲೇಪಿಸಿಲಾಗಿದೆ. ಅಲ್ಲಲ್ಲಿ ಒಂದು ವರ್ಣ ಲೇಪನದ ಮೇಲೆ ಮತ್ತೊಂದು ವರ್ಣ ಲೇಪಿಸಿರುವ ತಂತ್ರಗಾರಿಕೆಯೂ ಕಂಡು ಬರುವುದು, ಕೆಲವು ಚಿತ್ರಗಳ ಉಡುಪುಗಳನ್ನು ರೇಖಾಕೃತಿಯಿಂದ ಶೃಂಗರಿಸಿದ್ದರೆ ಮತ್ತೆ ಹಲವು ಕಡೆ ಚುಕ್ಕೆಗಳು ಹೂ ಬಳ್ಳಿಯ ನಕ್ಷೆ ಹಾಗೂ ಜ್ಯಾಮಿತಿಯ ಚಿತ್ರಗಳನ್ನು ರಚಿಸಲಾಗಿದೆ. ನೀರನ್ನು ತೋರಿಸುವಲ್ಲಿ ಹಾಗೂ ಕಾಡಿನ ಹಸಿರು ತೋರಿಸುವಲ್ಲಿ ಕುಂಚವನ್ನು ಬಳಸುವ ವಿಧಾನಗಳನ್ನು ಅಡ್ಡ ಗರೆ ಉದ್ದಗೆರೆ ಹಾಗೂ ಚಪ್ಪಟೆಯಾಗಿ ವರ್ಣವನ್ನು ಲೇಪಿಸುವ ತಂತ್ರಗಾರಿಕೆಯು ವಿಶಿಷ್ಟವಾಗಿದೆ. ಕಿರುರೂಪಕ ಶೈಲಿಯ ಸೂಕ್ಷ್ಮತೆ ಬೃಹತ ಪ್ರಮಾಣದ ಭಿತ್ತಿಚಿತ್ರಗಳಲ್ಲಿ ಕಾಣಬಹುದು. ಜನಪದ ಚಿತ್ರಗಳ ಸಹಜತೆ ಮುಗ್ಧತೆಗಳು ಅಲ್ಲದೇ ಶಿಷ್ಟ ಸಂಪ್ರದಾಯದ ಕ್ಲಿಷ್ಟತೆಗಳು ಕರ್ನಾಟಕದ ಜೈನ ಚಿತ್ರಗಳಲ್ಲಿ ಕಂಡುಬರುತ್ತವೆ.

ಕರ್ನಾಟಕದ ಜೈನ ಚಿತ್ರಕಲೆಯ ಶೈಲಿಯು ನವ ಇತಿಹಾಸದೊಂದಿಗೆ ಮಹತ್ವ ಪಡೆದಿದೆ. ಇದರ ಜೊತೆಗೆ ಇನ್ನೊಂದು ಆಂಶವನ್ನು ಗಮನಿಸಬಹುದು. ವಿಶಿಷ್ಟ ಶೈಲಿ ಎನ್ನುವುದು ಇತರ ಕಲಾ ಶೈಲಿಯಿಂದ

---

೦೧. ಡಾ.ಸಿ.ಮಹದೇವ : ವಿಜಯನಗರದ ಗಾರೆ ಶಿಲ್ಪ, ಪು.ಸಂ.೧

೦೨. ಡಾ.ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪು.ಸಂ.೩೨

೦೩. ಎಚ್.ಆರ್.ರಘುನಾಥ್ ಭಟ್ : ಚಿತ್ರಕಲೆ ಪ್ರಪಂಚ , ಪು.ಸಂ.೧೨೭



ಸಂಪೂರ್ಣವಾಗಿ ಭಿನ್ನವಾಗಿರಲೇಬೇಕೆಂಬ ಸಿದ್ಧಾಂತವೇನಿಲ್ಲ. ಎಷ್ಟೋಸಲ ಒಂದರಂತೆ ಒಂದು ಶೈಲಿ ಬೆಳೆದುಬಂದಿರುತ್ತವೆ. ಕರ್ನಾಟಕದ ಜೈನ ಕಲೆಗಳು ಮತ್ತು ಅವುಗಳನ್ನು ರೂಪಿಸಿದ ಜೀವನ ದೃಷ್ಟಿಯಿಂದ ಸಹ ಇದು ವ್ಯಕ್ತವಾಗುತ್ತದೆ. ಇತರ ಶೈಲಿಗಳಲ್ಲಿ ಕಾಣುವ ಒಳ್ಳೆಯ ಅಂಶಗಳನ್ನು ಅಳವಡಿಸಿಕೊಂಡು ಮತ್ತು ಅರಗಿಸಿಕೊಂಡು ಪರಿಪುಷ್ಟವಾಗಿ ಈ ಕಲೆ ಬೆಳೆದಿದೆ. ಕಲಾವಂತಿಕೆಯಿರಬೇಕಾದ ಈ ಉದಾರ ಮನೋಭಾವದ ವಿಕಾಸಕ್ಕೆ ಕರ್ನಾಟಕದ ಜೈನ ಪೋಷಕರ ಭೂಮಿಕೆಯಾಗಿ ಪರಿಣಮಿಸುತೆನ್ನಬಹುದು. ಧರ್ಮದಲ್ಲಿಯೇ ಆಗಲಿ ಸಾಹಿತ್ಯದಲ್ಲಿಯೇ ಆಗಲಿ ಮತ್ತು ಇತರ ಯಾವ ಕಲಾ ಮಾಧ್ಯಮಗಳಲ್ಲಿಯೇ ಆಗಲಿ ಇನ್ನೊಂದು ಕಡೆಯಿಂದ ಒಳ್ಳೆಯದನ್ನು ತಗೆದುಕೊಳ್ಳಲು ಕರ್ನಾಟಕದ ಜೈನ ಚಿತ್ರಕಲೆ ಎಂದೂ ಹಿಂದುಮುಂದೆ ನೋಡಿಲ್ಲ. ರಾಜಸ್ಥಾನಿ, ಗುಜರಾತಿ. ರಜಪೂತ, ಪಹಾಡಿ, ಮೋಗಲ್ ಮಾಗೂ ಅಜಂತಾ ಮುಂತಾದ ಕಲಾ ಶೈಲಿಯನ್ನು ಅಳವಡಿಸಿಕೊಂಡಿರುವುದನ್ನು ಕಾಣುವದರೊಂದಿಗೆ ತನ್ನದೇ ಆದ ನೂತನವಾಗಿ ಚಿತ್ರ ಶೈಲಿಯನ್ನು ಸೃಷ್ಟಿಸಿದೆ. ಆದುದರಿಂದಲೇ ಕರ್ನಾಟಕದಲ್ಲಿ ಜೈನ ಚಿತ್ರಕಲೆ ಮತ್ತು ಅದರ ಕಲಾಭಿವ್ಯಕ್ತಿಯಲ್ಲಿ ಎಲ್ಲ ಒಳ್ಳೆಯ ಅಂಶಗಳು ಸಮಾವೇಶಗೊಂಡಿದೆ. ಅಲ್ಲದೇ ವಿಫುಲವೂ, ವೈವಿಧ್ಯಪೂರ್ಣವೂ, ವಿಸ್ತಾರವೂ, ವ್ಯಾಪಕವೂ, ಗಂಭೀರವೂ ಹಾಗೂ ಪೂರ್ಣ ದೃಷ್ಟಿ ಸಮನ್ವಿತವೂ ಆದ ಕರ್ನಾಟಕದ ಜೈನ ಚಿತ್ರಕಲಾ ಶೈಲಿಯಲ್ಲಿ ಈ ವಿಶಿಷ್ಟ ಲಕ್ಷಣಗಳ ಈ ಮನೋಧರ್ಮವನ್ನು ಕಾಣಬಹುದು.

**ಜೈನ ಕಲೆಯ ಪ್ರಮುಖ ಕೆಲವು ಲಕ್ಷಣಗಳು**

೧. ಇವು ಜೈನ ಧರ್ಮದ ಕಥಾನಕಗಳನ್ನು ಹೊಂದಿವೆ.

೨. ಜೈನ ಧರ್ಮ ಪ್ರಸಾರದ ಉದ್ದೇಶವು ಈ ಚಿತ್ರರಚನೆಯ ಹಿನ್ನೆಲೆಯಲ್ಲಿದೆ.

೩. ಜೈನ ಧರ್ಮದ ಧಾರ್ಮಿಕ ಆಚರಣೆಯ ವಿಧಿಕ್ರಿಯೆಯಾಗಿ ಈ ಚಿತ್ರ ಪರಂಪರೆ ಬೆಳೆದುಬಂದಿದೆ.

೪. ಜೈನ ತೀರ್ಥಂಕರರು, ಯಕ್ಷಯಕ್ಷಿಯರು, ನೋಂಪಿ ವ್ರತಗಳು ಆರು ಲೇಶ್ಯುಗಳು ಭವಾವಳಿಗಳ ಚಿತ್ರಣಗಳು ವಿಶೇಷವಾಗಿ ಕಂಡು ಬರುತ್ತವೆ.

೫. ಕರ್ನಾಟಕದ ಕಿರು ರೂಪ ಚಿತ್ರಶೈಲಿಯನ್ನು ಪ್ರಥಮ ಬಾರಿಗೆ ಹಸ್ತಪ್ರತಿ, ಭಿತ್ತಿಚಿತ್ರಣದಲ್ಲಿ ಶ್ರೇಯಸ್ಸು ಜೈನ ಕಲೆಗೆ ಸಲ್ಲುತ್ತದೆ.

೬. ಹಸ್ತಪ್ರತಿ, ಭಿತ್ತಿ ಚಿತ್ರಗಳ ನಿರ್ಮಾಣದಲ್ಲಿ ಕಿರುರೂಪ ಚಿತ್ರದ ತಂತ್ರ, ಶೈಲಿ ಬಳಕೆಯಾಗಿದೆ.

೭. ಮನೆಗಳಲ್ಲಿ ಧಾರ್ಮಿಕ ಆಚರಣೆಯಾಗಿ ವಿಧಿಕ್ರಿಯೆಗಳಿಗಾಗಿ ಚಿತ್ರ ರಚಿಸಿದ್ದು ಈ ಕಲೆಯ ಇನ್ನೊಂದು ಲಕ್ಷಣವಾಗಿದೆ.

೮. ಗ್ರಂಥದಾನ, ಜೈನ ಧರ್ಮದ ತತ್ವಗಳಲ್ಲಿ ಒಂದಾಗಿದ್ದು ಅದು ಧರ್ಮಪ್ರಸಾರದ ಮಾಧ್ಯಮ ಆಗಿತ್ತು. ಹೀಗಾಗಿ ಅದನ್ನು ತುಂಬ ಕಲಾತ್ಮಕವಾಗಿ ವಿನ್ಯಾಸಗೊಳಿಸುವ ಅನಿವಾರ್ಯತೆಯಿಂದ ಇಲ್ಲಿ ಚಿತ್ರರಚನೆಗೆ ಹೆಚ್ಚಿನ ಅವಕಾಶ ಸಿಕ್ಕಿಬೇಕೆನಿಸುತ್ತದೆ.

೯. ಜೈನ ಧರ್ಮದ ಹಿನ್ನೆಲೆಯಲ್ಲಿ ಚಿತ್ರರಚನೆಯಾದರೂ ರಾಮಾಯಣ, ಮಹಾಭಾರತದ ನಿಸರ್ಗದ ಪ್ರಾಣಿ ಪಕ್ಷಿ ಇನ್ನಿತರ ವಸ್ತುವಿಷಯದ ಚಿತ್ರಗಳಿಗೂ ಇಲ್ಲಿ ಸ್ಥಾನಮಾನ ನೀಡಲಾಗಿದೆ.

೧೦. ಕರ್ನಾಟಕದ ಜೈನ ಚಿತ್ರಕಲೆ ಬೇರೆ ಬೇರೆ ರಾಜ್ಯದ ಶೈಲಿಗಳನ್ನು ಅನುಸರಿಸಿದ್ದಲ್ಲದೆ ಕರ್ನಾಟಕದ ಆಯಾಪ್ರದೇಶದ ಜನಪದ ಕಲಾಶೈಲಿಗಳನ್ನು ಅಳವಡಿಸಿಕೊಂಡು ರಚನೆಯಾಗಿದೆ. ಉದಾ: ಕರಾವಳಿಯ ಯಕ್ಷಗಾನ ಶೈಲಿ, ಶಿಷ್ಟಪದ ಮೈಸೂರು ಶೈಲಿ, ವಿಜಯನಗರ ಶೈಲಿ, ಇತ್ಯಾದಿಗಳ ಪ್ರಭಾವವನ್ನು ಅದು ಹೊಂದಿದೆ. ಹೀಗೆ ಹತ್ತು ಹಲವು ಅಂಶಗಳನ್ನು ಒಳಗೊಂಡು ಒಂದು ವಿಶಿಷ್ಟ ಕಲಾಶೈಲಿಯಾಗಿ ಜೈನಕಲೆ ಕರ್ನಾಟಕದಲ್ಲಿ ಬೆಳವಣಿಗೆಯಾಗಿದೆ ಎನ್ನಬಹುದು.



ಭರತಖಂಡದಲ್ಲಿ ವೈಶಿಷ್ಟ್ಯಪೂರ್ಣ ಧರ್ಮಗಳಲ್ಲಿ ಜೈನ ಧರ್ಮ ಒಂದು. ಪ್ರಾಚೀನ ಕರ್ನಾಟಕದಲ್ಲಿ ಜೈನ ಧರ್ಮ ಪುರಾಷಾರ್ಥ ಪ್ರಕ್ರಿಯೆಯಲ್ಲಿ ಬಸದಿ ನಿರ್ಮಾಣ, ಬಸದಿಗೆ ದಾನ, ವಿಗ್ರಹ ಪ್ರತಿಷ್ಠಾಪನೆ, ಚತುರ್ವಿಧ ದಾನ ಎಂಬ ನಾಲ್ಕು ಪ್ರಕಾರಗಳು ಮಹತ್ವ ಪಡೆದಿದ್ದವು ಅಹಾರ ಅಭಯ ಭೈಷಜ ಶಾಸ್ತ್ರದಾನಗಳು ಪ್ರತಿ ಜೈನ ಹೃದಯಗಳ ಮೈಮನಸ್ಸುಗಳ ರಕ್ಷಣೆಗೆ ಮತ್ತು ಪಾವಿತ್ರ್ಯತೆಗೋಸ್ಕರ ಕೈಗೊಳ್ಳುವ ಮೌಲಿಕ ಕ್ರಿಯೆಗಳೆನಿಸಿದವು ಆಹಾರ, ಅಭಯ ಭೈಷಜಗಳಂತಹ ಜೀವನಾವಶ್ಯಕ ಕ್ರಿಯೆಗಳು ಧರ್ಮದ ಬೆಳವಣಿಗೆಯಲ್ಲಿ ಒಂದು ಮುಖವಾದರೆ. ಶಾಸ್ತ್ರದಾನ ಜೈನ ಮತೀಯರ ಮೌಲಿಕ ಕೊಡುಗೆ ಏಕಕಾಲಕ್ಕೆ ಧಾರ್ಮಿಕ ಸಾಹಿತ್ಯವನ್ನು ಉಳಿಸುವ, ಅದನ್ನು ಪ್ರಸಾರ ಮಾಡುವ ಕಾರ್ಯವನ್ನು ಪೂರೈಸುವ ವಿಶೇಷ ದಾನವಾಗಿದೆ. ಶಾಸ್ತ್ರದಾನದ ಕೃತಿಗಳಿಗೆ ವಿಶೇಷವಾಗಿ ಬಹುಕಾಲ ಜನಮನದಲ್ಲಿ ನೆಲೆ ನಿಲ್ಲುವ ಮೌಲ್ಯಯುಕ್ತ ಕೃತಿಗಳಿಗೆ ವಿನ್ಯಾಸಪೂರ್ಣ ಚಿತ್ರ ವರ್ಣಚಿತ್ರಗಳಿಂದ ಅಲಂಕರಿಸಿ ದಾನ ಕೈಗೊಳ್ಳುವಲ್ಲಿ ಅವರದು ತೆರದ ಹೃದಯ ಚಿತ್ರಕಲೆಗೆ ಜೀವತುಂಬಿ ಲಲಿತಕಲೆಗಳ ಉನ್ನತ ಮಟ್ಟದ ಬೆಳವಣಿಗೆಯ ಬಗ್ಗೆ ಆಸಕ್ತಿ ತೋರಿದ ಜೈನ ಮತೀಯರು ಮತ್ತು ಅವರ ಕಲಾಸೇವೆಯನ್ನು ಸ್ಮರಿಸಬಹುದು. ಅಲ್ಲದೇ ತಮ್ಮ ಜೀವನದ ಕೊನೆಯವರೆಗೂ ಅವುಗಳನ್ನು ಅತ್ಯಂತ ಜೋಪಾನದಿಂದ ಸಂರಕ್ಷಿಸಿಕೊಂಡು, ಉಳಸಿಕೊಂಡು ಬಂದವರಾಗಿದ್ದಾರೆ. ಆದರೆ ಅವರ ಈ ಅಮೂಲ್ಯ ಕಲಾ ಸಂಪತ್ತನ್ನು ಸಂರಕ್ಷಿಸುವ ಆಸಕ್ತಿ ಮುಂದಿನ ಪೀಳಿಗೆಯವರಿಗೆ ಇರಬೇಕಲ್ಲವೇ? ಒಂದು ವೇಳೆ ಆಸಕ್ತಿಯಿರದಾಗಿದ್ದಾಗ ಮಾತ್ರ ತಮ್ಮ ಪೂರ್ವಿಕರಿಂದ ಸಂರಕ್ಷಿಸಿಕೊಂಡು ಬಂದ ಈ ಅಮೂಲ್ಯ ಕಲಾ ಸಂಪತ್ತನ್ನು ಸಂರಕ್ಷಿಸಿಕೊಂಡು ಬರುತ್ತಾರೆ. ಮುಂದಿನ ಪೀಳಿಗೆಯವರಿಗೆ ಆಸಕ್ತಿಯಿಲ್ಲದೇ ಹೋದರೆ ಪರಂಪರಾಗತವಾಗಿ ಸಂರಕ್ಷಿಸಿಕೊಂಡು ಬಂದ ಈ ಕಲಾ ಸಂಪತ್ತನ್ನು ಅನೇಕ ಬಗೆಯ ಆಪತ್ತುಗಳಿಗೀಡಾಗುವುದರಲ್ಲಿ ಅನುಮಾನಪಡಬೇಕಾಗಿಲ್ಲ. ಈ ರೀತಿಯ ಆಪತ್ತುಗಳಿಲ್ಲದೇ ಸಂಪೂರ್ಣ ಹಾಳಾದ ಅನೇಕ ಸಂಗತಿಗಳು ನಡೆದಿದ್ದನ್ನು ನಾವು ಕಾಣಬಹುದು. ಇದು ಒಂದು ರೀತಿಯಲ್ಲಿ ಅಮೂಲ್ಯ ಚಿತ್ರಗಳಿಗೆ ಬಂದೊದಗಿದ ವ್ಯಕ್ತಿಗತ ಆಪತ್ತು ಎಂದೇ ಹೇಳಬಹುದು.

ಕರ್ನಾಟಕದಲ್ಲಿ ಜೈನ ಚಿತ್ರಕಲಾ ಸಂಪತ್ತನ್ನು ಮುಂದಿನ ಪೀಳಿಗೆಯವರು ಅತ್ಯಂತ ಜೋಪಾನದಿಂದ ಕಾಪಾಡಿಕೊಂಡು ಬರುತ್ತಿರುವರಾದರೂ ಕೆಲವು ಸಂದರ್ಭದಲ್ಲಿ ಇವುಗಳಿಗೆ ಪ್ರಾಕೃತಿಕ ಅಥವಾ ಸ್ವಾಭಾವಿಕ ಆಪತ್ತುಗಳಿಂದ ಭಯವು ಸಹ ಕಾಡದೇ ಇರಲಾರದು. ಪ್ರತಿಯೊಂದು ವಸ್ತುವಾಗಲಿ, ಜೀವಿಯಾಗಲಿ ಅವುಗಳ



ಇತಿಮಿತಿಗನುಸಾರವಾಗಿ ಇಂತಿಷ್ಟೇ ಕಾಲಮಾನವೆಂದಿರುತ್ತದೆ. ಜೈನ ಚಿತ್ರಗಳಲ್ಲಿ ಭಿತ್ತಿಚಿತ್ರಗಳಲ್ಲದೇ ಮರ ಅಥವಾ ಕಾಗದದ ಮೇಲೆ ಚಿತ್ರಿಸಿದ ಅನೇಕ ಚಿತ್ರಗಳುಂಟು, ಹೆಚ್ಚಿನ ಪ್ರಮಾಣದಲ್ಲಿ ರಚನೆಗೊಂಡ ಚಿತ್ರಗಳಿಗೆ ಬಳಸಿದ ಮಾಧ್ಯಮ ಕಾಗದ, ಲೋಹ, ಕಲ್ಲು, ಮಣ್ಣು ಮುಂತಾದ ಗಟ್ಟಿ ಪದಾರ್ಥ ಎಷ್ಟು ದಿನಗಳಂತೆ ಉಳಿಯಲು ಸಾಧ್ಯ ಕರ್ನಾಟಕದ ಜೈನ ಚಿತ್ರಕಲೆಗೆ ಒದಗಿದ ಆಪತ್ತುಗಳಲ್ಲಿ ವ್ಯಕ್ತಿಗತ ಆಪತ್ತು, ಪ್ರಾಕೃತಿಕ ಆಪತ್ತು ಹಾಗೂ ಸ್ವಾಭಾವಿಕ ಆಪತ್ತುಗಳಂತಹ ವಿನಾಶಕಾರಿ ಅಂಶಗಳನ್ನು ನೀಗಿಸಲು ಚಿತ್ರಗಳ ಸಂರಕ್ಷಣೆಗೆ ಕೈಗೊಳ್ಳಬಹುದಾದ ಅನೇಕ ಬಗೆಯ ಸಂರಕ್ಷಣಾ ಕ್ರಮಗಳನ್ನು ಕುರಿತು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ರಾಜ್ಯ ಮತ್ತು ರಾಷ್ಟ್ರದ ಹಾಗೂ ಅಂತರಾಷ್ಟ್ರಿಯ ಅನೇಕ ಕಡೆಗಳಲ್ಲಿರುವ ಸರಕಾರಿ ಹಾಗೂ ಖಾಸಗಿ ಸಂಗ್ರಹಾಲಯಗಳಲ್ಲಿ ಕರ್ನಾಟಕದ ಜೈನ ಚಿತ್ರಗಳನ್ನು ಸಂಗ್ರಹಿಸಿದ್ದಾರಲ್ಲದೆ. ಎಲ್ಲ ಬಗೆಯ ಆಪತ್ತುಗಳಿಂದ ಅವುಗಳನ್ನು ಸಂರಕ್ಷಿಸುತ್ತಾ ಬರುತ್ತಿದ್ದಾರೆ. ಈ ಚಿತ್ರಗಳನ್ನು ಹೊರತುಪಡಿಸಿ ಇನ್ನೂ ಅನೇಕ ಹೆಚ್ಚಿನ ಚಿತ್ರಗಳು ಕಂಡುಬರುತ್ತವೆ. ಜೈನ ಮಠಗಳಲ್ಲಿ ಶ್ರಾವಕರ ಮನೆಗಳಲ್ಲಿ ಚಿತ್ರಗಳ ಸ್ಥಿತಿ-ಗತಿಯನ್ನು ನೋಡಿದರೆ ಬಹುಶಃ ಇನ್ನೆರಡು ದಶಕಗಳಲ್ಲಿ ಈ ಚಿತ್ರಗಳು ಹಾಳಾಗಬಹುದು. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ ವಿನಾಶದಂಚಿನಲ್ಲಿರುವ ಕರ್ನಾಟಕದ ಜೈನ ಚಿತ್ರಕಲೆಯ ಆಪತ್ತುಗಳೊಂದಗಿದ ಚಿತ್ರಗಳ ಸಂರಕ್ಷಣೆಯನ್ನು ಕೈಗೊಳ್ಳಬಹುದಾಂತಹ ಅನೇಕ ವಿಚಾರಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

**ಭಿತ್ತಿ ಚಿತ್ರಗಳ ಸ್ಥಿತಿ-ಗತಿ**

ಕರ್ನಾಟಕದ ಜೈನ ಭಿತ್ತಿಚಿತ್ರಗಳು ಇಂದು ಹೆಚ್ಚಿನ ಪ್ರಮಾಣದಲ್ಲಿ ಉಳಿದಿಲ್ಲ, ಕಾರಣ ಈ ಭಿತ್ತಿ ಚಿತ್ರಗಳಿಗೆ ರಚಿಸಲು ಬಳಸಿದ ಭಿತ್ತಿ ಸಿದ್ಧತೆಯಲ್ಲದೆ, ಚಿತ್ರಗಳಿಗೆ ಪ್ರಾಕೃತಿಕ ಹಾಗೂ ವ್ಯಕ್ತಿಗತ ಆಪತ್ತುಗಳಿಂದಾಗಿ ಅವನತಿಯ ಹಾದಿಯಲ್ಲಿವೆ ಎಂದು ತಿಳಿಯಬಹುದಾಗಿದೆ. ಈ ಆಧ್ಯಯನದ ಅನುಕೂಲತೆಗಾಗಿ ಮೂರು ಭಾಗಗಳನ್ನಾಗಿ ವಿಂಗಡಿಸಿಕೊಂಡು ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.[೧]

೧. ಸ್ವಾಭಾವಿಕ ಆಪತ್ತು ೨. ಪ್ರಾಕೃತಿಕ ಆಪತ್ತು ೩. ವ್ಯಕ್ತಿಗಳ ಆಪತ್ತು

**೧. ಸ್ವಾಭಾವಿಕ ಆಪತ್ತು**

ಭಿತ್ತಿ ಚಿತ್ರಗಳಿಗೆ ಉಪಯೋಗಿಸಿರುವ ಮೂಲ ವಸ್ತುಗಳ ಸ್ವತಃ ಕಾಲಕ್ರಮೇಣ ಕಡಿಮೆಯಾಗಿ ಭಿತ್ತಿ ಚಿತ್ರಗಳು ಹಾಳಾಗಿರುವುದನ್ನು ಇಲ್ಲಿ ಸ್ವಾಭಾವಿಕ ಆಪತ್ತು ಎಂದು ಪರಿಗಣಿಸಲಾಗಿದೆ. ಭಿತ್ತಿ ಚಿತ್ರಗಳಿಗೆ ಉಪಯೋಗಿಸಿದ ಬಣ್ಣಗಳು ಕಾಲಾಂತರದಲ್ಲಿ ಮುಸುಕಾಗುವುದು. ಉದುರುಹೋಗುವುದು ಸಹಜಕ್ರಿಯೆ, ಹೀಗೆ ಬಣ್ಣ ಮಸುಕಾಗಿರುವುದು, ಉದುರಿಹೋಗುವುದು, ಹೆಚ್ಚಿನ ಎಲ್ಲ ಪ್ರಾಚೀನ ಭಿತ್ತಿ ಚಿತ್ರಗಳಲ್ಲಿಯೂ ಕಾಣಬಹುದು. ಇದಕ್ಕೆ ಪೂರಕವೆನ್ನುವಂತೆ ಜೈನ ಶ್ರಾವಕರ ಮನೆ- ನೆಲ್ಲಿಕಾರು, ಕತ್ತಲ ಬಸದಿ ಮತ್ತು ಜೈನ ಮಠ, ಕಾರ್ಕಳ ಹಾಗೂ ಜೈನಮಠ ಮೂಡುಬಿದಿರೆ ಮುಂತಾದ ಜೈನ ಬಸದಿಗಳಲ್ಲಿ ಚಿತ್ರಿಸಲಾದ ಭಿತ್ತಿ ಚಿತ್ರಗಳ ವರ್ಣಗಳು ಉದುರಿಹೋಗಿದ್ದನ್ನು ಕಾಣಬಹುದು. ಈ ರೀತಿಯಲ್ಲಿ ಅನೇಕ ಜೈನ ಶ್ರಾವಕರ ಮನೆಯಲ್ಲಿ ಸ್ವಾಭಾವಿಕ ಆಪತ್ತುಗಳಿಂದ ಹಾಳಾಗಿವೆಯಂದು ಪರಿಗಣಿಸಲಾಗಿದೆ.

**೨. ಪ್ರಾಕೃತಿಕ ಆಪತ್ತು**

ಭಿತ್ತಿ ಚಿತ್ರಗಳಿಗೆ ಹೊದಗುವ ಹಲವಾರು ಆಪತ್ತುಗಳಲ್ಲಿ ಪ್ರಾಕೃತಿಕ ಆಪತ್ತಿನಿಂದಲೇ ಭಿತ್ತಿ ಚಿತ್ರಗಳಿಗೆ ಹೆಚ್ಚಿನ ಹಾನಿ ಸಂಭವಿಸುತ್ತಲಿದೆ. ಅದರಲ್ಲೂ ಹೆಚ್ಚಿನ ಹಾನಿ ನೀರಿನಿಂದಲೇ ಸಂಭವಿಸುತ್ತಲಿದೆ. ಮೇಲ್ಛಾವಣಿಯಿಂದ

೦೧. ಡಾ.ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಪು.ಸಂ.೧೨೩



ನೀರು ಸೋರುವುದು ಗೋಡೆಯಲ್ಲಿನ ಬಿರುಕುಗಳಿಂದ ನೀರು ಜಿನುಗುವುದು ಹೆಚ್ಚಾಗಿ ಕಂಡುಬರುತ್ತದೆ. ದಕ್ಷಿಣ ಕರ್ನಾಟಕದ ಬಹುಭಾಗ ಭಿತ್ತಿ ಚಿತ್ರಗಳು ಮಳೆಯಿಂದ ಮತ್ತು ಕರಾವಳಿ ತೀರದ ಸಮುದ್ರದ ಹಬೆಯಿಂದ ಭಿತ್ತಿ ಚಿತ್ರಗಳು ನಾಶವಾಗಿರುವುದನ್ನು ಕಾಣಬಹುದು.

ಮೇಲಿನ ವಿಷಯಕ್ಕೆ ಸಂಬಂಧಿಸಿದ್ದಂತೆ ನೆಲ್ಲಿಕಾರಿನ ಜೈನ ಪೇಟೆಯಲ್ಲಿರುವ ಪಂಡಿತರ ಮನೆ ಮತ್ತು ದೊಡ್ಡ ಮನೆ, ಜೈನ ಮಠ, ಕಾರ್ಕಳ ಹಾಗೂ ಬಜಗೋಳಿಯ ಸುಬ್ಬಯ್ಯ ಶಾಸ್ತ್ರಿಗಳ ಮನೆಯನ್ನು ಚಿತ್ರಗಳಿಗೊದಗಿದ ಆಪತ್ತನ್ನು ಹೆಸರಿಸಬಹುದು. ಈ ಭಿತ್ತಿ ಚಿತ್ರದ ನೆಲೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಜೀರ್ಣಗೊಂಡಿದೆ. ಅಲ್ಲದೇ ಈ ಕಟ್ಟಡಗಳು ಮಣ್ಣಿನಿಂದ ನಿರ್ಮಾಣಗೊಂಡಿದೆ. ಈ ಪರಿಸರದ ಹವಾಗುಣ ತೇವಾಂಶ ಇರುವುದರಿಂದ ಗೋಡೆಗಳು ಕುಸಿದು ಅಲ್ಲಿರುವ ಬಹುತೇಕ ಇದೇ ರೀತಿ ಚಿತ್ರಗಳು ನಾಶವಾಗಿರುವುದನ್ನು ಕಾಣಬಹುದು. ಇದೇ ರೀತಿ ಶ್ರವಣಬೆಳಗೊಳದ ಜೈನಮಠ ಮತ್ತು ಸುತ್ತಲಿನ ಪರಿಸರದ ಭಿತ್ತಿ ಚಿತ್ರಗಳು ಪ್ರಾಕೃತಿಕ ಆಪತ್ತಿನಿಂದಲೇ ವಿನಾಶವಾಗಿರುವುದನ್ನು ಗಮನಿಸಬಹುದು.

**೩. ವ್ಯಕ್ತಿಗತ ಆಪತ್ತು**

ಇಲ್ಲಿ ವ್ಯಕ್ತಿ ಅಥವಾ ಅವನು ನಡೆಸುವ ಯಾವುದೇ ರೀತಿಯ ಚಟುವಟಿಕೆಗಳಿಂದ ಭಿತ್ತಿ ಚಿತ್ರಗಳಿಗೆ ಹಾನಿ ಸಂಭವಿಸುವುದನ್ನು ವ್ಯಕ್ತಿಗತ ಆಪತ್ತುಗಳಿಂದ ಪರಿಗಣಿಸಬಹುದು. ಈ ವ್ಯಕ್ತಿಗತ ಆಪತ್ತುಗಳಲ್ಲಿ ಹೊಗೆಯಿಂದಾಗುವ ಆಪತ್ತು ಮತ್ತು ಕಟ್ಟಿದ ನವೀಕರಣದಿಂದಾಗುವ ಆಪತ್ತು ಎಂದು ಎರಡು ಬಗೆಯಲ್ಲಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

**೧. ಹೊಗೆಯಿಂದಾಗುವ ಆಪತ್ತು**

ಭಿತ್ತಿಚಿತ್ರಗಳಿರುವ ಸ್ಥಳದಲ್ಲಿ ಅಥವಾ ಅದಕ್ಕೆ ಸಮೀಪವೇ ಆಗಲಿ ಅಡುಗೆ ಮಾಡುವುದಾಗಲಿ, ದೇವರಿಗೆ ಧೂಪ ಹಾಕಿರುವುದಾಗಲಿ ಅಥವಾ ಹೋಮ, ಮಂಗಳಾರತಿ ಮಾಡುವ ಇನ್ನಿತರ ಯಾವುದೇ ರೀತಿಯ ಬೆಂಕಿ ಹೊತ್ತಿಸಿ ಹೊಗೆಯೆಬ್ಬಿಸುವುದರಿಂದ ಅದರಿಂದಾಗುವ ಶಾಖ ಹಾಗೂ ಹೊಗೆಯಿಂದ ಚಿತ್ರಗಳಿಗೆ ಹಾನಿಯಾಗಬಹುದೆಂದು ಹೇಳಬಹುದು. ಕರ್ನಾಟಕದ ಜೈನ ಮಠಗಳು ಬಸದಿಗಳು ಮತ್ತು ಶ್ರಾವಕರ ಮನೆಯಲ್ಲಿ ರಚನೆಯಾದ ಭಿತ್ತಿಚಿತ್ರಗಳಿಗೂ ಈ ರೀತಿಯ ತೊಂದರೆಯಿಂದ ಎಂದು ಹೇಳಬಹುದು. ಜೈನ ಮಠಗಳಲ್ಲಿ ಜೈನ ಮುನಿಗಳು (ಗುರುಗಳು) ವಾಸಿಸುವುದರಿಂದ ಅವರಿಗೆ ಅಡುಗೆ ಮಾಡುವ ಸಂಧರ್ಭದಲ್ಲಿ ಅಥವಾ ಒಲೆಯ ಹೊತ್ತಿಸಿದಾಗ ನೇರವಾಗಿ ಭಿತ್ತಿಚಿತ್ರಗಳಿಗೆ ತಗುಲುತ್ತದೆ. ಹಾಗೂ ಪಂಡಿತರ ಮನೆ ಹಾಗೂ ದೊಡ್ಡಮನೆ ನೆಲ್ಲಿಕಾರು ಹಾಗೂ ಭಜಗೋಳಿಯಲ್ಲರುವ ಶ್ರಾವಕರು ಮನೆಯಲ್ಲಿ ವಾಸವಾಗಿರುವುದರಿಂದ ಈ ರೀತಿಯ ಆಪತ್ತುಗಳನ್ನು ಗಮನಿಸಬಹುದು.

**೨. ಕಟ್ಟಿದ ನವೀಕರಣದಿಂಗಾಗುವ ಆಪತ್ತು**

ಭಿತ್ತಿಚಿತ್ರಗಳಿರುವ ಕಟ್ಟಡಗಳನ್ನು ಜೀರ್ಣೋದ್ದಾರಗೊಳಿಸುವುದು ನವೀಕರಿಸುವಂತಹ ಕ್ರಮಗಳಿಂದ ಅಲ್ಲಿರುವ ಭಿತ್ತಿಚಿತ್ರಗಳಿಗೆ ಹಾನಿಯಾಗುತ್ತಿರುವುದನ್ನು ನೋಡಬಹುದಾಗಿದೆ. ಹಳೆಯ ಕಟ್ಟಡಗಳನ್ನು ಸಂಪೂರ್ಣ ಕೆಡವಿ ಹೊಸದಾಗಿ ನಿರ್ಮಿಸುವುದು ಇಲ್ಲವೇ ಜೀರ್ಣವಾದ ಭಾಗವನ್ನು ಮಾತ್ರ ನವೀಕರಿಸುವುದು ಅಥವಾ ಸುಣ್ಣ ಬಣ್ಣ ಸಾರಿಸಿ ನವೀಕರಿಸುವುದು ಹಳೆಯ ಭಿತ್ತಿಚಿತ್ರಗಳಿಗೆ ಆಧುನಿಕ ವರ್ಣಗಳಿಂದ ಪುನರಲೇಪಿಸುವುದು, ವಿದ್ಯುತ್ ಉಪಯೋಗಕ್ಕಾಗಿ ಇಲ್ಲವೇ ಇನ್ನಿತರ ಉಪಯೋಗಕ್ಕಾಗಿ ಭಿತ್ತಿಚಿತ್ರಗಳಿದ್ದವು ಕಟ್ಟಡಗಳಲ್ಲಿ ಮೊಳೆ ಹೊಡೆಯುವುದು, ಪಟ್ಟಿಗಳನ್ನು ಅಳವಡಿಸುವುದು ಇಂತಹ ಅನೇಕ ಕ್ರಮಗಳಿಂದ ಆ ಸ್ಥಳಗಳಲ್ಲಿರುವಂತಹ ಭಿತ್ತಿಚಿತ್ರಗಳು ನಾಶವಾಗುತ್ತವೆ.



ಭಿತ್ತಿಚಿತ್ರಗಳಿರುವ ಹಳೆಯ ಕಟ್ಟಡಗಳನ್ನು ಹೊಸದಾಗಿ ರೂಪಾಂತರಿಸುವುದರಿಂದ ಅಲ್ಲಿರುವ ಭಿತ್ತಿಚಿತ್ರಗಳು ಸಂಪೂರ್ಣ ನಾಶವಾಗಿರುವ ಸಂಗತಿಗಳು ಹೆಚ್ಚಾಗಿ ತಿಳಿದು ಬರುತ್ತದೆ. ದಕ್ಷಿಣ ಕನ್ನಡದ ನೆಲ್ಲಿಕಾರುವಿನಲ್ಲಿ ಇರುವ ಪಂಡಿತರ ಮನೆ ಸಂಪೂರ್ಣ ನವೀಕರಿಸುವ ಹಂತದಲ್ಲಿ ಇರುವುದನ್ನು ಕಾಣಬಹುದು. ಅದೇ ರೀತಿ ಶ್ರವಣಬೆಳಗೊಳ ಹಾಗೂ ಕಾರ್ಕಳ ಹಾಗೂ ಅನೇಕ ಜೈನಮಂದಿರ (ಬಸದಿ) ಮತ್ತು ಜೈನ ಶ್ರಾವಕರ ಮನೆಗಳಲ್ಲಿನ ಭಿತ್ತಿಚಿತ್ರಗಳು ಇವೆಲ್ಲ ಕಟ್ಟಡಗಳು ನವೀಕರಣಗೊಂಡಿರುವುದರಿಂದ ಅಲ್ಲಿರುವ ಅಮೂಲ್ಯ ಭಿತ್ತಿಚಿತ್ರಗಳು ನಾಶವಾಗಿರುವುದನ್ನು ಕಾಣಬಹುದು.

ಹೀಗಾಗಿ ಇಂದು ಕರ್ನಾಟಕದ ಜೈನ ಭಿತ್ತಿಚಿತ್ರವು ತನ್ನ ಪ್ರಾಚೀನತೆ ಹಾಗೂ ಮೂಲ ಸ್ವರೂಪವನ್ನು ಕಳೆದುಕೊಂಡಿವೆ. ಹೀಗೆ ಪ್ರಾಚೀನ ಭಿತ್ತಿಚಿತ್ರಗಳನ್ನು ಈ ಮೇಲೆ ವಿವರಿಸಿದೆ. ಅನೇಕ ರೀತಿಯ ಭಿತ್ತಿಚಿತ್ರಗಳನ್ನು ಆಪತ್ತುಗಳಿಂದ ನಾಶವಾಗಿರುವುದನ್ನು ನಾವು ಕಾಣಬಹುದು.

**ಭಿತ್ತಿಚಿತ್ರಗಳ ಸಂರಕ್ಷಣೆ**

ಭಿತ್ತಿಚಿತ್ರಗಳ ಸಂರಕ್ಷಣೆಯಲ್ಲಿ ಅನುಸರಿಸುವ ವೈಜ್ಞಾನಿಕ ವಿಧಾನಗಳನ್ನು ಕೈಗೊಳ್ಳಬಹುದಾದ ಕ್ರಮಗಳು ೧.ನೇರ ಕ್ರಮಗಳು ೨.ಪೂರಕ ಕ್ರಮಗಳು ಎಂದು ಎರಡು ಪ್ರಕಾರದಲ್ಲಿ ವಿಂಗಡಿಸಿಕೊಳ್ಳಬಹುದು.

**೧. ನೇರ ಕ್ರಮಗಳು**

ಭಿತ್ತಿಚಿತ್ರಗಳ ಸಂರಕ್ಷಣೆಯ ನೇರ ಕ್ರಮಗಳಲ್ಲಿ ಹಾಳಾದ ಭಿತ್ತಿಚಿತ್ರಗಳನ್ನು ಪುನಃ ರೂಪಿಸುವುದು ಒಂದಾಗಿದೆ. ಮೂಲ ಕಲಾಕೃತಿಯನ್ನು ಅಳತೆ ಬದ್ಧವಾಗಿ, ಯಥಾವತ್ತಾಗಿ ಚಿತ್ರಗಳನ್ನು ಪ್ರತಿಕೃತಿ ಮಾಡಿಕೊಂಡು ಮೂಲ ಚಿತ್ರವನ್ನು ಹೋಲುವಂತೆಯೇ ವರ್ಣಲೇಪಿಸುವುದು ಮತ್ತು ತಂತ್ರಗಾರಿಕೆಯನ್ನು ನುರಿತ ಕಲಾವಿದರಿಂದ ಮಾಡುವುದು ಸಹ ಒಂದು ಕ್ರಮವಾಗಿದೆ. ಹಾಗೂ ಭಿತ್ತಿಚಿತ್ರಗಳ ಸಂರಕ್ಷಣೆಯ ಮತ್ತೊಂದು ಕ್ರಮವೆಂದರೆ ಛಾಯಾಚಿತ್ರಣ ಮಾಡುವುದು ಹಾಗೂ ಸ್ಲೈಡ್‌ಗಳನ್ನಾಗಿ ಪರಿವರ್ತಿಸಿ ಮಾಡಿಟ್ಟುಕೊಳ್ಳುವುದಾಗಿದೆ. ಇದೇ ರೀತಿ ಭಿತ್ತಿಚಿತ್ರಗಳನ್ನು ವಿಡಿಯೋ ಚಿತ್ರಣ ಮಾಡುವುದು ಸಂರಕ್ಷಣೆ ದೃಷ್ಟಿಯಿಂದ ಹಾಗೂ ದಾಖಲೆಯ ದೃಷ್ಟಿಯಿಂದ ಸೂಕ್ತವಾದದು. ವಿಡಿಯೋ ಚಿತ್ರಣ ಮಾಡಿಸಿದಂತೆಯೇ ಭಿತ್ತಿಚಿತ್ರಗಳನ್ನು ಮೈಕ್ರೊಫಿಲಂನಲ್ಲಿ ಅಳವಡಿಸಿ ಕಾಯ್ದಿಟ್ಟುಕೊಳ್ಳಬಹುದು. ಈ ಮೇಲಿನ ಎಲ್ಲ ಕ್ರಮಗಳಲ್ಲದೇ ಮುಂದುವರೆದ ತಾಂತ್ರಿಕತೆಯಿಂದಲೂ ಭಿತ್ತಿಚಿತ್ರಗಳನ್ನು ಸಂರಕ್ಷಿಸಬಹುದಾಗಿದೆ.

**೨. ಪೂರಕ ಕ್ರಮಗಳು**

ಭಿತ್ತಿಚಿತ್ರಗಳ ಸಂರಕ್ಷಣೆಯಲ್ಲಿ ಅನುಸರಿಸುವ ಕ್ರಮಗಳಲ್ಲಿ ನೇರ ಕ್ರಮಗಳಂತೆ ಪೂರಕವಾಗಿಯೂ ಕೆಲವು ಕ್ರಮಗಳಿಂದ ಭಿತ್ತಿಚಿತ್ರಗಳನ್ನು ಸ್ವಲ್ಪ ಮಟ್ಟಿಗಾದರೂ ಸಂರಕ್ಷಣೆಗೊಳಪಡಿಸಬಹುದು. ಮೊದಲನೆಯದಾಗಿ ಇತಿಹಾಸ ಹಾಗೂ ಕಲೆಗೆ ಸಂಬಂಧಪಟ್ಟಂತಹ ಪುಸ್ತಕಗಳಲ್ಲಿ ಸಾಂದರ್ಭಿಕವಾಗಿಯಾದರೂ ಅವಶ್ಯವಿದ್ದಲ್ಲಿ ಸಂಬಂಧಿಸಿದ ಭಿತ್ತಿಚಿತ್ರಗಳ ಛಾಯಾಚಿತ್ರಣ ಮಾಡಿದ ವರ್ಣದ ಚಿತ್ರಗಳನ್ನು ಬಳಸುವುದು. ಉದಾಹರಣೆಯಗಿ ಹೇಳುವುದಾದರೆ ಗಂಗ, ಕದಂಬ, ಚಾಲುಕ್ಯ, ಹೊಯ್ಸಳ, ಮೈಸೂರು ಅರಸರು ಜೈನ ಧರ್ಮಕ್ಕೆ ನೀಡಿದ ಪ್ರೋತ್ಸಾಹ ಮತ್ತು ಧರ್ಮದ ಆದರ್ಶಗಳನ್ನು ಹಾಗೂ ಕಲಾತ್ಮಕ ಕೊಡುಗೆಗಳನ್ನು ನೀಡಿದ ಸಂದರ್ಭದಲ್ಲಿ ಭಿತ್ತಿಚಿತ್ರಗಳನ್ನು ಬಳಸಬಹುದು. ಜೈನ ಧರ್ಮದ ಇತಿಹಾಸವನ್ನು ಹೇಳುವ ಸಂದರ್ಭದಲ್ಲಿ ಸಂಬಂಧಿಸಿದ ಚಿತ್ರಗಳನ್ನು ಬಳಸುವುದು ಸೂಕ್ತವಾಗಿದೆ. ಮಕ್ಕಳ ಪಠ್ಯಪುಸ್ತಕದಲ್ಲಿ ಪ್ರಾಚೀನ ಭಿತ್ತಿಚಿತ್ರಗಳನ್ನು ಕುರಿತು ಮಕ್ಕಳಿಗೆ ತಿಳುವಳಿಕೆ ಕೊಡುವುದು ಸಹಾಯವಾಗುತ್ತಲ್ಲದೆ, ಈ ಮೂಲಕ ಪ್ರಾಚೀನ ಭಿತ್ತಿಚಿತ್ರಕಲೆಯಯನ್ನು ಪರಿಚಯಿಸಿದಂತೆಯೂ ಆಗುವುದು.



ಇದೇ ರೀತಿಯಾಗಿ ಪಠ್ಯಪುಸ್ತಕಗಳ ಮುಖಪುಟಗಳಲ್ಲಿಯೂ ಪ್ರಾಚೀನ ಭಿತ್ತಿಚಿತ್ರಗಳಿಂದ ಅಲಂಕರಿಸುವ ಕ್ರಮವನ್ನು ಅನುಸರಿಸಬಹುದು. ಈ ರೀತಿಯಲ್ಲಿ ನಮ್ಮ ಪ್ರಾಚೀನ ಜೈನ ಭಿತ್ತಿಚಿತ್ರಗಳನ್ನು ಸಂರಕ್ಷಿಸಬಹುದು.

**ಹಸ್ತಪ್ರತಿಗಳ ಚಿತ್ರಗಳ ಸ್ಥಿತಿ-ಗತಿ**

ಹಸ್ತಪ್ರತಿಕಾರರು ಭಕ್ತಿ ಧರ್ಮಪ್ರಚಾರ ಜನಾಕರ್ಷಣೆ ಹಾಗೂ ವೈಯಕ್ತಿಕ ಅಭಿರುಚಿಯ ಕಾರಣವಾಗಿ ಒಂದು ಕೃತಿಯನ್ನು ವಿನ್ಯಾಸಗೊಳಿಸಲು ಮಾಡುತ್ತಿದ್ದಷ್ಟೇ ಅಲ್ಲದೇ ಅದನ್ನು ಕಲಾತ್ಮಕವಾಗಿ ವಿನ್ಯಾಸಗೊಳಿಸಲು ಯತ್ನಿಸಿದರು. ಪರಿಣಾಮವಾಗಿ ಹಸ್ತಪ್ರತಿಗಳಲ್ಲಿಯೂ ಚಿತ್ರಕಲೆ ಕಾಣಿಸಿಕೊಂಡಿತು. ಕರ್ನಾಟಕದ ಜೈನ ಹಸ್ತಪ್ರತಿಗಳಲ್ಲಿ ವೈವಿಧ್ಯಮಯವಾಗಿ ವಿಶೇಷವಾಗಿ ಕಂಡುಬರುವುದನ್ನು ಕಾಣಬಹುದು.

ಸಂಶೋಧನಾ ಅಧ್ಯಯನದ ನಿಮಿತ್ಯ ಕೈಗೊಂಡ ಕ್ಷೇತ್ರಕಾರ್ಯದಲ್ಲಿ ನಮಗೆ ದೊರೆತಿರುವ ಮಾಹಿತಿಯ ಪ್ರಕಾರ ಇನ್ನೂ ಅನೇಕ ಚಿತ್ರಿತ ಜೈನಹಸ್ತಪ್ರತಿಗಳು ನಮ್ಮ ನಾಡಿನುದ್ದಕ್ಕೂ ಸಂಗ್ರಹಗೊಂಡಿರಬೇಕು. ಜೈನ ಮಠಗಳಲ್ಲಿ ಜೈನ ಶ್ರಾವಕರ ಮನೆಗಳಲ್ಲಿ ಅನೇಕ ಹಸ್ತಪ್ರತಿಗಳು ಸಂಗ್ರಹಗೊಂಡಿದ್ದು ಅವುಗಳಲ್ಲಿ ಸಂದರ್ಭೋಚಿತವಾಗಿ ಚಿತ್ರಗಳನ್ನು ಹೊಂದಿದೆ. ಹಾಗೂ ಕೆಲವು ಹಸ್ತಪ್ರತಿಗಳಲ್ಲಿ ರೇಖಾಚಿತ್ರಗಳಿಂದ ಕೂಡಿದ್ದು ಇನ್ನು ಕೆಲವು ಬರಿ ಲಿಪಿಯಿಂದ ಕೂಡಿರುವುದನ್ನು ಕಾಣಬಹುದು. ಅದರಲ್ಲೂ ಹಸ್ತಪ್ರತಿಗಳು ನಶಿಸಿ ಹೋಗುತ್ತಿರುವುದನ್ನು ಹೆಚ್ಚಾಗಿ ಕಾಣಬಹುದು. ಅದರಲ್ಲೂ ಹಸ್ತಪ್ರತಿಗಳ ಸಂರಕ್ಷಣೆಗೆಂದು ಮಾಡಲಾದ ಕಟ್ಟಿಗೆ ಕಟ್ಟುಗಳ ಮೇಲೆ ಚಿತ್ರಿತಗೊಂಡಿರುವ ಚಿತ್ರಗಳು ಇಂದು ನಶಿಸಿ ಹೋಗಿದೆ. ಹಸ್ತಪ್ರತಿಗಳನ್ನು ಪಠಣ ಮಾಡುವವರು ಹಸ್ತಪ್ರತಿಗಳಿಗೆ ಕಟ್ಟಿದ ಕಟ್ಟುಗಳನ್ನು ಬಿಚ್ಚುವಾಗ ನಿಧಾನವಾಗಿ ಜಾಗರೂಕತೆವಹಿಸಿದ ಅವಸರವನ್ನು ಮಾಡುವುದರಿಂದ ಆ ಕಟ್ಟಿಗೆ ಕಟ್ಟುಗಳ ಮೇಲಿನ ಚಿತ್ರಗಳ ವರ್ಣವು ಉದುರಿಹೋಗುತ್ತವೆ. ಮರ ಲೋಹಗಳಂತಹ ಶಿಲ್ಪಗಳು ಸಹ ಇಂದು ವಿನಾಶದ ಅಂಚಿನಲ್ಲಿರುವ ಇನ್ನೂ ಹಸ್ತಪ್ರತಿಗಳು ಹಾಗೂ ಈ ಚಿತ್ರಿತ ಹಸ್ತಪ್ರತಿಗಳನ್ನು ಸಂರಕ್ಷಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಅದಕ್ಕಾಗಿ ಈ ಮೇಲೆ ಹೇಳಿದ ಹಸ್ತಪ್ರತಿಗಳನ್ನು ಸಂರಕ್ಷಿಸಲು ಕಂಡುಕೊಳ್ಳಬಹುದಾದ ಮಾರ್ಗೋಪಾಯಗಳಲ್ಲದೆ ಸಂರಕ್ಷಣಾ ವಿಧಾನಗಳನ್ನು ಕುರಿತು ಈ ಮುಂದೆ ಚರ್ಚಿಸಲಾಗಿದೆ.

**ಹಸ್ತಪ್ರತಿಗಳ ಸಂರಕ್ಷಣಾ ವಿಧಾನ**

ಹಸ್ತಪ್ರತಿಗಳನ್ನು ಸಂರಕ್ಷಿಸುವುದು ಕೂಡ ಧರ್ಮದ ಸಂರಕ್ಷಣೆಯ ಒಂದು ವಿಧಾನ ಎಂದು ತಿಳಿಯಬಹುದು. ನಮ್ಮ ಹಿರಿಯರು ಅನುಸರಿಸುತ್ತಿದ್ದ ಕೆಲವು ವಿಧಾನಗಳನ್ನು ಗಮನಿಸಬಹುದು.

ಹಸ್ತಪ್ರತಿಗಳಿಗೆ ಎರಡೂ ಕಡೆಗಳಲ್ಲಿ ಮರದ ಹಲಗೆಗಳನ್ನು ಇಟ್ಟು ಕಟ್ಟುತ್ತಿದ್ದ ವಿಧಾನವನ್ನು ಗಮನಿಸಬಹುದು. ಓಲೆಗರಿಗಳು ಅಸ್ತವ್ಯಸ್ತವಾಗದಂತೆ ಓಲೆಯ ಆಕೃತಿಗೆ ಅನುಸಾರವಾಗಿ ರಂಧ್ರಗಳನ್ನು ಕೊರೆದು ಆ ಮೂಲಕ ದಾರವನ್ನು ಪೋಣಿಸುತ್ತಿದ್ದ ವಿಧಾನ ಹಾಗೂ ರಂಧ್ರಗಳು ದಿನದಿಂದ ದಿನಕ್ಕೆ ದೊಡ್ಡದಾಗದಂತಿರಲೆಂಬ ಉದ್ದೇಶದಿಂದ ಅವುಗಳಿಗೆ ಬೆಳ್ಳಿ ಬಂಗಾರದ ಉಂಗುರವನ್ನು ಅಳವಡಿಸಿದ್ದನ್ನು ಕಾಣಬಹುದು. ಈ ರೀತಿಯ ಸಂರಕ್ಷಣಾ ವಿಧಾನವನ್ನು ಕೂಡಿದ ಅನೇಕ ಹಸ್ತಪ್ರತಿಗಳನ್ನು ಅಧ್ಯಯನ ಸಂಸ್ಥೆಯಲ್ಲಿ ಗ್ರಂಥ ಭಂಡಾರಗಳಲ್ಲಿ ಹಾಗೂ ಮಠ ಮತ್ತು ಹಸ್ತಪ್ರತಿಕಾರರ ಮನೆಯಲ್ಲಿ ಸಂಗ್ರಹಿಸಿರುವುದನ್ನು ನಾವು ಕಾಣಬಹುದು. ಓಲೆಗರಿಗಳು ಹಾಳಾಗದಂತೆ ನೋಡಿಕೊಳ್ಳಲು ಅದಕ್ಕೆ ವಿಶಿಷ್ಟವಾದ ಎಣ್ಣೆಯನ್ನು ತಯಾರಿಸಿ ಬಳಿಯಲಾಗುತ್ತಿದ್ದು, ಈ ಎಣ್ಣೆಯನ್ನು ದೇವದಾರು ಹಾಗೂ ಕೆಲವು ಗಿಡಮೂಲಿಕೆಗಳಿಂದ ತಯಾರಿಸಿದ ತೈಲವರ್ಣವನ್ನು ಹಸ್ತಪ್ರತಿಗಳಿಗೆ ಲೇಪಿಸುವುದರಿಂದ ಕೀಟನಾಶಕವಾಗುದೆಂದು ತಿಳಿಯಬಹುದು.

ಹಸ್ತಪ್ರತಿ ಸಂರಕ್ಷಣೆಯ ಕಾರ್ಯದಲ್ಲಿ ಹಿಂದಿನಿಂದಲೂ ನಡೆದುಬಂದ ಇನ್ನೊಂದು ಪದ್ಧತಿಯೆಂದರೆ ಅವುಗಳನ್ನು ನಕಲು ಮಾಡುವುದು ಓಲೆಯ ಪ್ರತಿಗಳನ್ನಾಗಲಿ, ಕಾಗದದ ಹಸ್ತಪ್ರತಿಗಳನ್ನಾಗಲಿ ಪುನಃ ಬಳಸುವುದರಿಂದ



ಅವು ಜೀರ್ಣವಾಗಿದ್ದುಂಟು. ಆದ್ದರಿಂದ ಎಷ್ಟೋ ಹಸ್ತಪ್ರತಿಯ ಭಂಢಾರಗಳಲ್ಲಿ ಅಸಲು ಪ್ರತಿಗಳನ್ನು ಸಂರಕ್ಷಣೆಮಾಡಲು ನಕಲು ಮಾಡುವ ಕಾರ್ಯ ಸತತವಾಗಿ ಸಾಗುತ್ತಿರುತ್ತದೆ. ಇತ್ತೀಚಿಗೆ ಝುರಾಕ್ಸ ಮೈಕ್ರೋಫಿಲ್ಮ ಮತ್ತು ಕಂಪ್ಯೂಟರ್ ಯಂತ್ರೋಪಕರಣಗಳಿಂದ ಈ ಪ್ರತಿ ಮಾಡುವ ಕಾರ್ಯ ಅಷ್ಟೇನೂ ಕಷ್ಟವಾಗುವದಿಲ್ಲ, ಅಲ್ಲದೆ ನಿರ್ದಿಷ್ಟವಾಗಿಯೂ ಆಗುತ್ತದೆ.

ನಮ್ಮ ಹಿರಿಯರು ಅನುಸರಿಸುತ್ತಿದ್ದ ಕೆಲವು ವಿಧಾನಗಳಲ್ಲಿ ಹಸ್ತಪ್ರತಿಗಳನ್ನು ವಿವಿಧ ಬಣ್ಣದ ಬಟ್ಟೆಗಳನ್ನು ಉಪಯೋಗಿಸುವುದರಿಂದ ಕೀಟಗಳು ಹಸ್ತಪ್ರತಿಗಳ ಹತ್ತಿರ ಸುಳಿಯುವದಿಲ್ಲವೆಂದು ಇಂದಿನ ಗ್ರಂಥಾಲಯ ಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ.[೨]

ಹಸ್ತಪ್ರತಿಗಳನ್ನು ಹಸುಗೂಸಿನಂತೆ ಕಾಪಾಡಬೇಕು ಎನ್ನವುದಕ್ಕೆ ಹಸ್ತಪ್ರತಿ ಲಿಪಿಕಾರರು ಉದಾಹರಿಸುವ ಶ್ಲೋಕಗಳನ್ನು ಅಲ್ಲಿ ಕಾಣಬಹುದು.

"ಅಗ್ನಿ ಮೂಶಿಕ ಜೋರೇಭ್ಯೋಶಿವೋ ರಕ್ಷಂತು ಪುಸ್ತಕಂ "
ತೈಲದ್ರಕ್ಷೇಜ್ಜಲಾದ್ರಕ್ಷೇಚ್ಛಿಥಿಲ ಬಂಧನಾತ್
ಮೂರ್ಖಹಸ್ತೇನ ದಾತಮ್ಯವೇವಂ ವದತಿ ಪುಸ್ತಕಂ"

ಅಗ್ನಿ, ಮೂಶಿಕ, ತೈಲ, ಜಲ, ಚೋರ, ಶಿಥಿಲ, ಬಂಧನ, ಮೂರ್ಖಹಸ್ತ, ಅಶಿವ-ಇವುಗಳಿಂದ । 'ರಕ್ಷೇತ್' ನದಾತವ್ಯಂ' ಎಂಬುದಾಗಿ ಎಚ್ಚರಿಕೆ ಕೊಟ್ಟ ಮಾತಿನಲ್ಲಿಯೇ ಇವೆಲ್ಲ ಹಸ್ತಪ್ರತಿಗಳಿಗೆ ಆಪತ್ಕಾರಿಗಳು ಎಂಬುದು ಸ್ವಯಂ ಸೂಚಿತನಾಗಿದೆ.[೩]

ಆಪತ್ತುಗಳಲ್ಲಿ ಪ್ರಮುಖವಾದವುಗಳೆಂದರೆ ಎಣ್ಣೆ ಮತ್ತು ನೀರು ಹಸ್ತಪ್ರತಿಗಳು ಪೂಜಾಸಾಮಗ್ರಿಗಳೆಂದು ಪರಿಗಣಿತವಾದ ಮೇಲೆ ಅವುಗಳಗೆ ಪ್ರತಿನಿತ್ಯ ಈ ಶೈತ್ಯೋಪಚಾರವೇ ಸಲ್ಲುವುದೆಂಬ ಬಳಿಕ ಅವು ನೀರಿನಿಂದ ಪಾರಾಗಲು ಹೇಗೆ ಸಾಧ್ಯ? ಹಸ್ತಪ್ರತಿಗಳನ್ನು ಬಳಸುವಲ್ಲಿ ಎಷ್ಟು ಎಚ್ಚರಿಕೆವಹಿಸಿದರೂ ಸಾಲದು. ಓಲೆಯ ಪ್ರತಿಯು ಆಗಲಿ ಕಾಗದದ ಪ್ರತಿಯೇ ಆಗಲಿ ದಾರದಿಂದ ಅದನ್ನು ಅತೀ ಬಿಗಿಯಾಗಿ ಕಟ್ಟಬಾರದು. ಎಲ್ಲಕ್ಕಿಂತಲೂ ಹೆಚ್ಚಾಗಿ ಮೂರ್ಖನ ಕೈಗೆ ಹಸ್ತಪ್ರತಿಗಳನ್ನು ಕೊಡಬಹುದು ಎಂದು ಈ ಶ್ಲೋಕ್ ತಿಳಿಸುತ್ತದೆ.

ಓಲೆಗರಿಗಳಿಗಾಗಲಿ ಹಸ್ತಪ್ರತಿಗಳಿಗಾಗಲಿ ಅನೇಕ ಬಗೆಯ ಪ್ರಾಕೃತಿಕ ಆಪತ್ತುಗಳುಂಟು ಪ್ರಕೃತಿಯಲ್ಲಿನ ವಾತಾವರಣ ವೈಪರಿತ್ಯದಿಂದ ಓಲೆಗರಿ, ಹಸ್ತಪ್ರತಿ, ಪುಸ್ತಕಗಳಿಗೆ ಬೂಷ್ಟು ಬರುವುದು ಸರ್ವೆಸಾಮಾನ್ಯ ಆದ್ದರಿಂದ ಹವಾನಿಯಂತ್ರಿತ ಸ್ಥಳಗಳಲ್ಲಿ ಹಸ್ತಪ್ರತಿಗಳನಿಟ್ಟು ಸಂಗ್ರಹಿಸುವುದು ಇಂದು ಕಾಣಬಹುದು. ಹಾಗೂ ಇಲಿಗಳ ಬಾಯಿಗೆ ಬೀಳದಂತೆ ನೋಡಿಕೊಳ್ಳುವುದು ಎಷ್ಟು ಅಗತ್ಯವೋ ಅಷ್ಟೇ ಬೆಳ್ಳಿ ಮೀನು (Silver Fish) ಜಿರಲೆ(Cockroach) ಪುಸ್ತಕ ಕ್ರಿಮಿ(Book Warm) ಗೆದ್ದಲು ಹುಳು (Termite) ಮೊದಲಾದ ಸೂಕ್ಷ್ಮಾತಿಸೂಕ್ಷ್ಮ ಕ್ರಿಮಿಕೀಟಗಳಿಂದ ಹಸ್ತಪ್ರತಿಗಳನ್ನು ಕಾಪಾಡುವುದು ಇಂದು ಅಗತ್ಯವಾಗಿದೆ. ಇದಕ್ಕಾಗಿ ಹಲವು ಬಗೆಯ ಕ್ರಿಮಿನಾಶಕವನ್ನು ಬಳಸುವುದನ್ನು ವೈಜ್ಞಾನಿಕವಾಗಿ ಪ್ರಯೋಗದಿಂದ ಇಂದು ಕಂಡು ಹಿಡಿಯಲಾಗಿದೆ ಎಂದು ಹೇಳಬಹುದು.

ಹಸ್ತಪ್ರತಿ ಸಂರಕ್ಷಣೆಯ ಕುರಿತಾದ ಅನೇಕ ವಿದ್ವಾಂಸರು ಕನ್ನಡ ಪುಸ್ತಕಗಳನ್ನು ಬರೆದಿರುವುದನ್ನು ಕಾಣಬಹುದು. ಶ್ರೀ ಬಿ.ಎಸ್. ಸಣ್ಣಯ್ಯನವರು 'ಗ್ರಂಥ ಸಂರಕ್ಷಣೆ' ಪುಸ್ತಕದಿಂದಲು ಹಾಗೂ ಶ್ರೀ.ಕೆ.ಎಸ್. ಮಹಾಂತದೇವರು ಬರೆದಿರುವ ಲೇಖನದಿಂದ ಹಾಗೂ ಡಾ.ವಿರೇಶ ಬಡಿಗೇರ ಹಸ್ತಪ್ರತಿಯ ಕಂಪ್ಯೂಟರೀಕರಣ

೦೨. ಡಾ.ಮಲ್ಲಿಕಾರ್ಜುನ ಸಿ.ಬಾಗೋಡಿ : ಸುರಪುರ ಶೈಲಿಯ ಚಿತ್ರಕಲೆ, ಪು.ಸಂ.೧೫೧
೦೩. ಡಾ.ಬಿ.ಕೆ.ಹಿರೇಮಠ : ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಪು.ಸಂ.೨೩೨



ಅನೇಕ ಬಗೆಯ ಮಾಹಿತಿಯನ್ನು ವಿವರಿಸಿದ್ದಾರೆ. ಹಸ್ತಪ್ರತಿಗಳು ಹಾಳಾಗದಂತೆ ನೋಡಿಕೊಳ್ಳಲು ಎಷ್ಟು ಪ್ರತಿಭಂದಕ ಕ್ರಮಗಳನ್ನು ಆಧುನಿಕ ಗ್ರಂಥ ಭಂಡಾರ ವಿಜ್ಞಾನದಲ್ಲಿ ಕಂಡುಹಿಡಿಯಗಿಲಾದೆಯೋ ಅನೀರಿಕ್ಷಿತವಾಗಿ ನಾನಾ ಬಗೆಯಾಗಿ ತೃಟತವಾಗಿರುವ ಹಸ್ತಪ್ರತಿಗಳನ್ನು ಪುನರುಜ್ಜೀವನಗೊಳಿಸುವ ನಿವಾರಣೋಪಾಯ ಅಷ್ಟೇ ಅಮಿತವಾಗಿದೆ. ಆದರೂ ಇತ್ತೀಚಿನ ದಿನಗಳಲ್ಲಿ ಹಸ್ತಪ್ರತಿ ಸಂರಕ್ಷಣೆಯ ಕುರಿತು ಅನೇಕ ತಾಂತ್ರಿಕ ಪ್ರಯೋಗಗಳು ನಡೆಯುತ್ತಿರುವುದನ್ನು ಕಾಣಬಹುದು.

ಶಾಸ್ತ್ರದಾನವು ನೋಂಪಿಯ ಅಂಗವಾಗಿ ಪರೋಕ್ಷ ಕಾರ್ಯವಾಗಿ ಕರ್ಮೋಪಶಮನ ಸಾಧನವಾಗಿ ಎಲ್ಲಕೂ ಈ ಮಿಗಿಲಾಗಿ ಭಟ್ಟಾರಕ ಮಠಗಳ ಕರ್ತವ್ಯವಾಗಿ ಒಟ್ಟಾರೆ ಜೈನ ಧರ್ಮೀಯರ ಬದುಕಿನ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಿವೆ. ಜೈನಮನೆ-ಮಠ-ಬಸದಿಗಳಂತೂ ಹಸ್ತಪ್ರತಿಗಳ ಲೇಖನ ಪ್ರತೀಕರಣ ಹಾಗೂ ಗ್ರಂಥ ಪ್ರತಿಷ್ಠೆಯ ನೆಲೆಗಳಾಗಿದ್ದು ಹಸ್ತಪ್ರತಿಗಳನ್ನು ಶಾಸ್ತ್ರೀಯವಾಗಿ ವಿಂಗಡಿಸಿ ಅಕಾರಾದಿ ಸೂಚಿಗಳನ್ನು ಸಿದ್ಧಪಡಿಸಿ ಸುವ್ಯವಸ್ಥಿತವಾದ ಸಂರಕ್ಷಣೆಯ ಕಾರ್ಯಗಳ ಕಡೆಗೆ ಗಮನಹರಿಸಿರುವುದು ಸಾಕಷ್ಟು ನಿದರ್ಶನಗಳು ನಮ್ಮ ಮುಂದೆಯೇ ಇವೆ. ಇಂದು ಈ ಸ್ಥಿತಿ ಉತ್ತಮಗೊಳ್ಳುವುದು ಅತ್ಯಗತ್ಯ ವಿಶ್ವವಿದ್ಯಾಲಯಗಳ ಆಡಳಿತಕ್ಕೆ ಒಳಪಟ್ಟಿರುವ ಕೆಲವು ಹಸ್ತಪ್ರತಿ ಭಂಡಾರಗಳು ಆಧುನಿಕ ಕಾಲಕ್ಕೆ ತಕ್ಕಂತೆ ಹಸ್ತಪ್ರತಿಗಳು ಸಂರಕ್ಷಣೆಯ ಪ್ರಗತಿಯಾಗುತ್ತಿವೆ. ಹಸ್ತಪ್ರತಿಗಳನ್ನು ಕುರಿತ ವರ್ಣನಾತ್ಮಕ ಸೂಚಿಯ ಸಂಪುಟಗಳು ಇತ್ತೀಚಿಗೆ ಹೋರಬರುತ್ತಿರುವುದರಿಂದ ದೇಶಿ ವಿದೇಶಗಳ ವಿದ್ವಾಂಸರು ಈ ವರ್ಣನಾತ್ಮಕ ಸೂಚಿಯ ಸಂಪುಟಗಳಿಂದ ಹೆಚ್ಚಿನ ನೆರವನ್ನು ಪಡೆಯಲು ಸಾಧ್ಯವಾಗುತ್ತದೆ. ಹೀಗೆ ಕಳೆದು ಒಂದೆರಡು ದಶಕಗಳಿಂದ ಈ ಹಸ್ತಪ್ರತಿಗಳ ಸಂರಕ್ಷಣೆಯ ಕುರಿತಾದ ಪ್ರಯೋಜನಗಳು ನಡೆಯುತ್ತಿವೆಯಾದರು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಅದು ಕಾರ್ಯಪ್ರವೃತ್ತಿಯಾಬೇಕಿದೆ. ಅದು ಅಲ್ಲದೇ ಹಸ್ತಪ್ರತಿಗಳ ಸಂಗ್ರಹ ಮತ್ತು ಸಂರಕ್ಷಣೆಯ ಕಾರ್ಯಗಳು ನಡೆಯುತ್ತಿರುವುದು ಇಂದಿಗೂ ಕಾಣಬಹುದು.

**ಸಂಕೀರ್ಣ ಮಾಧ್ಯಮದ ಚಿತ್ರಗಳ ಸ್ಥಿತಿ-ಗತಿ**

ಭಿತ್ತಿಚಿತ್ರ ಹಾಗೂ ಹಸ್ತಪ್ರತಿ ಚಿತ್ರಗಳಂತೆಯೇ ಸಂಕೀರ್ಣ ಮಾಧ್ಯಮದ ಚಿತ್ರಗಳೆಂದೂ ಪ್ರಸ್ತುತ ಪ್ರಬಂಧದಲ್ಲಿ ಪ್ರತ್ಯೇಕ ಅಧ್ಯಯನ ಮಾಡಲಾಗಿದ್ದು, ಸಂಕೀರ್ಣ ಮಾಧ್ಯಮದ ಚಿತ್ರಗಳಲ್ಲಿ ತೀರ್ಥಂಕರ, ಯಕ್ಷ - ಯಕ್ಷೀಣೀಯರ ಜೈನ ಮುನಿಗಳ ಚಿತ್ರಗಳನ್ನು ಗಾರೆ ಕಾಷ್ಠ ಹಾಗೂ ಶಿಲಾ ಮಾಧ್ಯಮದ ಶಿಲ್ಪಗಳ ಮೇಲೆ ಚಿತ್ರಿಸಿರುವುಗಳಾಗಿವೆ. ಇವುಗಳಲ್ಲಿ ಮಾನಸ್ಥಂಭ, ಬ್ರಹ್ಮಸ್ಥಂಭಗಳು ಮತ್ತು ಪಂಚಮಿಯ ಬ್ರಹ್ಮಸ್ಥಂಭಗಳು ನಿಸಧಿಸ್ಥಂಭ ಮತ್ತು ವೀರಗಂಬಗಳು, ಪಂಚಪರಮೇಷ್ಠಿ ಮತ್ತು ನಾಗರ ದೇವತೆಗಳ ಶಿಲ್ಪ ಮತ್ತು ನಂದಿಶ್ವರ ಪ್ರತಿಮೆ ಮೇರು ಪರ್ವತ ಸಹಸ್ರಕೂಟ ಬ್ರಹ್ಮ ಕ್ಷೇತ್ರಪಾಲ, ನಾಗಶಿಲ್ಪಗಳು ವಿಧ್ಯಾದೇವತೆಗಳ ಶೃತಿಸ್ಕಂದ, ಸರಸ್ವತಿ ಮುನಿಗಳಪಾದ ಹಾಗೂ ರಥಗಳ ಹೀಗೆ ಸಂಕೀರ್ಣ ಮಾಧ್ಯಮದ ಚಿತ್ರಗಳಲ್ಲಿ ಕಾಣಬಹುದು

ಭಿತ್ತಿಚಿತ್ರಗಳನ್ನು ಹಾಗೂ ಹಸ್ತಪ್ರತಿ ಚಿತ್ರಗಳ ಸಂರಕ್ಷಣೆಯನ್ನು ಕುರಿತು ವಿವರಿಸಲಾದ ಈ ಸಂರಕ್ಷಣಾ ವಿಧಾನಗಳನ್ನೇ ಈ ಸಂಕೀರ್ಣ ಮಾಧ್ಯಮಗಳ ಚಿತ್ರಗಳಿಗೂ ಬಳಸಬಹುದಾಗಿದೆ.

ಮೂಡಬಿದರೆಯ ಅಮ್ಮನವರ ಬಸದಿಯಲ್ಲಿ ಇರುವ ಸರಸ್ವತಿ ಹಾಗೂ ಪದ್ಮಾವತಿ ಹಾಗೂ ೨೪ ಜನ ತೀರ್ಥಂಕರ ಹಾಗು ಲೆಪ್ಪದ ಬಸದಿಯಲ್ಲಿ ಇರುವ ಯಕ್ಷ-ಯಕ್ಷಿಯರ ಚಿತ್ರಗಳು ಇಂದಿಗೂ ಪೂಜೆಗೊಳ್ಳುತ್ತಿರುವುದು ಹೀಗೆ ಪೂಜೆ ಮಾಡುವ ಸಂದರ್ಭಗಳ ನೀರು ಬಿಂಬಗಳಿಗೆ ಆವರಿಸುವದರಿಂದ ಚಿತ್ರಗಳ ಮೇಲೆ ನೀರಿನ ಕಲೆಗಳು ಕುಳಿತು ಬಿಡುತ್ತವೆ. ಅಲ್ಲದೇ ಕೆಲವು ಸಂದರ್ಭದಲ್ಲಿ ಮಂಗಳಾರತಿಯ ಹೊಗೆ ಮತ್ತು ನೀರು ತಗುಲುವುದರಿಂದ ಚಿತ್ರಗಳ ವರ್ಣಗಳು ಉದುರಿಹೊಗುವ ಸಂಭವವಿರುತ್ತದೆ. ಈ ಒಂದು ರೀತಿಯ ಚಿತ್ರಗಳಿಗೆ



ಒದಗಿದ ಆಪತ್ತು ಇಂದು ಕರ್ನಾಟಕದ ಜೈನಮಠ ಹಾಗೂ ಬಸದಿಗಳಲ್ಲಿ ಮತ್ತು ಜೈನ ಶ್ರಾವಕರ ಮನೆಯಲ್ಲಿನ ಸಂಕೀರ್ಣ ಮಾಧ್ಯಮದ ಕಲೆಗಳು ಜೀರ್ಣಗೊಳ್ಳುತ್ತಿರುವುದು ಕಂಡುಬರುತ್ತದೆ.

ಈ ಮೇಲೆ ಹೇಳಿದ ಹಾಗೆ ಎಲ್ಲ ಮಾಧ್ಯಮದ ಚಿತ್ರಗಳಲ್ಲಿ ರಚನೆಗೊಂಡಿರುವ ಚಿತ್ರಗಳಲ್ಲದೇ ಗಾರೆ, ಕಾಷ್ಠ, ಹಾಗೂ ಶಿಲಾ ಮಾಧ್ಯಮದ ಶಿಲ್ಪಗಳ ಮೇಲೆಯೂ ವಿವಿಧ ವರ್ಣಗಳಿಂದ ಚಿತ್ರಿಸಲಾಗಿದೆ. ಮಳೆ, ಬಿಸಿಲು, ಗಾಳಿ, ಮುಂತಾದ ಪ್ರಾಕೃತಿಕ ಆಪತ್ತುಗಳಿಂದ ಗಾರೆ ಶಿಲ್ಪಗಳ ಮೇಲೆ ಚಿತ್ರಿಸಲಾದ ಚಿತ್ರಗಳು ಸಂಪೂರ್ಣ ನಶಿಸಿ ಹೋಗಿರುವುದು ಕಂಡು ಬರುತ್ತದೆ. ಆದರೂ ಕೆಲವೊಂದು ಕಡೆ ಚಿತ್ರಗಳು ಹಾಗೆಯೇ ಉಳಿದುಕೊಂಡಿರುವದು ಕಾಣಬಹುದು. ಶಿಲಾ ಮಾಧ್ಯಮದ ಮೇಲೆ ಚಿತ್ರಿಸಲಾದ ಚಿತ್ರಗಳ ಮೇಲೆ ಆಗಾಗ ವರ್ಣ ಲೇಪನ ಮಾಡುತ್ತಿರುವುದರಿಂದ ಅಮೂಲ್ಯ ಚಿತ್ರಗಳು ತಮ್ಮ ಮೂಲ ಸ್ವರೂಪವನ್ನು ಕಳೆದುಕೊಂಡು ನವ್ಯ ಶೈಲಿಯ ಚಿತ್ರಗಳಂತೆ ಕಂಡುಬರುತ್ತವೆ. ಹಾಗಾಗಿ ಈ ರೀತಿಯ ಚಿತ್ರಗಳಿಗೆ ಸಂರಕ್ಷಣೆ ಕಡೆಗೂ ಪ್ರಸ್ತುತ ಅಧ್ಯಯನದ ಮೂಲಕ ಗಮನ ನೀಡಲಾಗಿದೆ.

*****



ಚಿತ್ರಕಲೆ ಒಂದು ನಾಡಿನ, ಒಂದು ಜನಾಂಗದ ಇತಿಹಾಸವನ್ನು ತಿಳಿಸುವ ಒಂದು ಸಾಧನ. ಅದು ಪ್ರಾಚೀನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಜೊತೆಗೆ ಆನಂದವನ್ನು ನೀಡುತ್ತದೆ. ಒಂದು ಚಿತ್ರ ಇಲ್ಲವೆ ಶಿಲ್ಪಕೃತಿ ಸಾವಿರಾರು ವರ್ಷಗಳ ಇತಿಹಾಸವನ್ನು ಸಾರಬಲ್ಲದು. ಮಾನವನ ಮೊದಲ ಪಾಠ ಚಿತ್ರಕಲೆಯಲ್ಲಿಯೇ ಆರಂಭವಾಯಿತು. ಲಿಪಿ ಹುಟ್ಟುವುವದಕ್ಕಿಂತ ಮೊದಲೇ ಚಿತ್ರಕಲೆ ಬಳಕೆಯಲ್ಲಿತೆಂದು ಹೇಳಬಹುದು. ಕ್ರಮೇಣ ಭಾಷೆ, ಸಾಹಿತ್ಯಗಳು ಉದ್ಭವವಾಗಿ ಪ್ರವರ್ಧಮಾನಕ್ಕೆ ಬಂದಂತೆ, ಚಿತ್ರಕಲೆಯೂ ತನ್ನದೇ ಆದ ಸ್ಥಾನವನ್ನು ಉಳಿಸಿಕೊಂಡು ಬೆಳೆಸಿಕೊಂಡಿದೆ. ಈ ಶತಮಾನಗಳ ಅವಧಿಯಲ್ಲಿ ರೂಪಗೊಳ್ಳುತ್ತಾ ಅನೇಕ ಪ್ರಕಾರಗಳು ತನ್ನ ಬಳ್ಳಿಗಳನ್ನು ಚಾಚಿ ವೈವಿಧ್ಯಪೂರ್ಣವಾಗಿ ಚಿತ್ರಕಲೆಯ ವಿಶೇಷವಾದ ಪ್ರಭಾವವನ್ನು ಬೀರುತ್ತಾ ಬಂದಿದೆ. ಪ್ರಾಚೀನ ಭಾರತ ಅದರಲ್ಲೂ ಪ್ರಾಚೀನ ಕರ್ನಾಟಕದ ಜೈನ ಚಿತ್ರಕಲೆಯ ಪ್ರಗತಿ ವಿಶ್ವದ ಕಣ್ಣನ್ನು ತನ್ನಡೆಗೆ ಸೆಳೆದುಕೊಂಡಿದೆ.

ಈ ಪ್ರಬಂಧದ ವಿಷಯವು ಒಟ್ಟು ಎಂಟು ಅಧ್ಯಾಯಗಳಲ್ಲಿ ಹರಡಿಕೊಂಡಿದ್ದು, ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚೆಗೊಂಡ ವಿಷಯಗಳ ಸಂಕ್ಷಿಪ್ತ ಸ್ವರೂಪದ ವಿವರಣೆಯನ್ನು ಮತ್ತು ಅಧ್ಯಾಯದಿಂದ ಕಂಡುಕೊಂಡ ಫಲಿತಗಳನ್ನೂ ಸಹ ಈ ಮುಂದೆ ಸಮೀಕ್ಷಿಸಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದೇಶ, ಸ್ವರೂಪ. ವ್ಯಾಪ್ತಿ ಹಾಗೂ ವೈಧಾನಿಕತೆಯನ್ನೂಳಗೊಂಡಿದೆ. ವಿಶೇಷವಾಗಿ ಕರ್ನಾಟಕದ ಜೈನ ಚಿತ್ರಕಲೆ ಎಂಬ ವಿಷಯದ ಕುರಿತು ಸಂಶೋಧನೆಯನ್ನು ಮಾಡುವ ಅನೇಕ ವೈವಿಧ್ಯತೆಗಳಿಂದ ಕೂಡಿದ ಉದ್ದೇಶಗಳೊಂದಿಗೆ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾದ ಸ್ವರೂಪಗಳನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಅಲ್ಲದೆ ಕರ್ನಾಟಕದ ಜೈನ ಚಿತ್ರಗಳ ಸಂಗ್ರಹಗೊಂಡಿರುವ ಪ್ರಮುಖ ನೆಲೆಗಳನ್ನು ಈ ಆಧ್ಯಯನದ ವ್ಯಾಪ್ತಿಗೊಳಪಡಿಸುತ್ತ ಪ್ರಸ್ತುತ ಅಧ್ಯಯನಕ್ಕೆ ಹೊಂದಿಸಿಕೊಳ್ಳಬಹುದಾದ ಅಕರ ಸಾಮಗ್ರಿಗಳನ್ನು ಕುರಿತು ಇಲ್ಲಿ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಕರ್ನಾಟಕದ ಜೈನ ಚಿತ್ರಕಲೆ ಮತ್ತು ಈ ಚಿತ್ರಕಲೆಗೆ ಪೂರಕವಾಗಿರುವ ವಿಷಯಗಳನ್ನು ಒಳಗೊಂಡಂತೆ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯಲ್ಲಿ ಅನೇಕ ಅಧ್ಯಯನಕಾರರ ಗ್ರಂಥ ಲೇಖನಗಳಲ್ಲದೆ, ಸಂಶೋಧನ ಮಹಾಪ್ರಬಂಧ ಮೊದಲಾದ ಆಕರಗಳಿಂದ ಈ ಕ್ಷೇತ್ರದ ಅಧ್ಯಯನದ ಪುನರಾವಲೋಕನವನ್ನು ಮಾಡುತ್ತ ಅಧ್ಯಯನಕ್ಕೆ ಈ ಹಿಂದೆ ನಡೆದ ಪ್ರಯತ್ನಗಳನ್ನು



ಗುರುತಿಸಿದ್ದಲ್ಲದೇ ಮುಂದಿನ ಅಧ್ಯಯನಕಾರರಿಗೆ ಇಂದೊಂದು ಸೂಕ್ತ ಮಾಹಿತಿಯಾಗಲಿದೆ. ಒಟ್ಟಾರೆ ಹೇಳುವುದಾದರೆ ಪ್ರಸ್ತುತ ಅಧ್ಯಯನದ ಪ್ರಮುಖ ಉದ್ದೇಶಗಳನ್ನು ಚರ್ಚಿಸುತ್ತ, ಈ ಅಧ್ಯಯನಕ್ಕೆ ಅಳವಡಿಸಿಕೊಂಡ ಸಂಶೋಧನಾ ವಿಧಿ ವಿಧಾನಗಳನ್ನು ಈ ಅಧ್ಯಯನದಲ್ಲಿ ಪ್ರಸ್ತುತಪಡಿಸಲಾಗಿದೆ.

ಎರಡನೆಯ ಅಧ್ಯಾಯವಾದ ಜೈನ ಚಿತ್ರಕಲೆಯ ಐತಿಹಾಸಿಕ ನೆಲೆ–ಹಿನ್ನೆಲೆ ಕುರಿತಾಗಿದ್ದು, ಜೈನ ಚಿತ್ರಕಲೆಯ ಚಾರಿತ್ರಿಕ ಹಿನ್ನೆಲೆಯನ್ನು ಹಾಗೂ ಜೈನ ಸಾಹಿತ್ಯ ಕೃತಿಗಳಲ್ಲಿ ಚಿತ್ರಕಲೆಯ ಪ್ರಸ್ತಾಪವನ್ನು ಆಧರಿಸಿ ಜೈನ ಕಲೆಯ ಇತಿಹಾಸವನ್ನು ಸಾಹಿತ್ಯದ ಮೂಲಕ ಕಟ್ಟಿಕೊಡುವ ಮೂಲಕ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಮೂರನೆಯ ಅಧ್ಯಾಯವಾದ ಜೈನ ಭಿತ್ತಿ ಚಿತ್ರಕಲೆಯ ಕುರಿತಾಗಿದ್ದು ಇದರಲ್ಲಿ ಭಿತ್ತಿಚಿತ್ರಕಲೆಯ ಇತಿಹಾಸ ಭಿತ್ತಿಸಿದ್ಧತಾ ವಿಧಾನ, ಭಿತ್ತಿರಚನಾ ಹಂತಗಳ ಕುರಿತು ಪ್ರಸ್ತಾವಿಕವಾಗಿ ಹೇಳಲಾಗಿದೆಯಲ್ಲದೆ, ಜೈನ ಬಸದಿ ಮತ್ತು ಜೈನ ಶ್ರಾವಕರ ಮನೆ, ಮಠಗಳಲ್ಲಿ ಚಿತ್ರಿತಗೊಂಡಿರುವ ಭಿತ್ತಿಚಿತ್ರಗಳ ಹಿನ್ನೆಲೆ ಹಾಗೂ ವಸ್ತು ವಿಷಯವನ್ನು ವಿಂಗಡಿಸಿಕೊಂಡು ಅವುಗಳ ರಚನಾವಿಧಾನ, ತಂತ್ರಗಾರಿಕೆ, ವರ್ಣಸಂಯೋಜನೆ ಹಾಗೂ ಶೈಲಿಯನ್ನು ಕುರಿತು ಸ್ಥೂಲವಾಗಿ ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಜೈನ ಹಸ್ತಪ್ರತಿ ಚಿತ್ರಗಳ ಕುರಿತಾಗಿದ್ದು, ಹಸ್ತಪ್ರತಿಯ ಇತಿಹಾಸ ಮತ್ತು ಹಸ್ತಪ್ರತಿ ಚಿತ್ರಕಲೆಯ ಸಿದ್ಧಗೊಳ್ಳುವ ಪೂರ್ವದಲ್ಲಿ ನಡೆಯುವ ಸಿದ್ಧತೆ ಹಾಗೂ ಚಿತ್ರರಚನೆಯ ಪ್ರಕ್ರಿಯೆಗಳನ್ನು ವಿವಿಧ ಆಧಾರಗಳ ಹಿನ್ನೆಲೆಯಲ್ಲಿ ವಿವೇಚನೆಯನ್ನು ಇಲ್ಲಿ ನಡೆಸಲಾಗಿದೆ. ಜೈನ ಧರ್ಮದ ಸಾಹಿತ್ಯ ಗ್ರಂಥಗಳಲ್ಲಿ ಸಾಂದರ್ಭಿಕವಾಗಿ ಚಿತ್ರಿಸಿದ ಚಿತ್ರಗಳ ಹಾಗೂ ಜೈನ ಸಾಹಿತ್ಯ ಕೃತಿಗಳಲ್ಲಿ ಚಿತ್ರಗಳ ವಿವರಣೆ ಇದ್ದು, ಸಾಂಸ್ಕೃತಿಕ ಹಾಗೂ ಕಲಾಪರಂಪರೆಯ ಮೌಲ್ಯಗಳನ್ನು ವಿವರವಾಗಿ ವಿವರಿಸಲಾಗಿದ್ದು 'ಧವಲಾ', 'ಜಯಧವಲಾ', ಮಹಾಧವಲಾ' ಹಾಗೂ ಮುಂತಾದ ಹಸ್ತಪ್ರತಿಗಳಲ್ಲಿ ಕಂಡುಬರುವ ಚಿತ್ರಗಳಲ್ಲಿನ ತಾಂತ್ರಿಕ ಅಂಶಗಳು, ಆಕಾರಗಳು, ರೇಖಾ ವಿನ್ಯಾಸ, ನಿಲುವು, ಬಣ್ಣ ಹಾಗೂ ಸಂಕೇತಗಳನ್ನು ಸಮಗ್ರವಾಗಿ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಅಧ್ಯಾಯ ಐದರಲ್ಲಿ ಜೈನ ಸಂಕೀರ್ಣ ಚಿತ್ರಕಲೆಗಳ ಕುರಿತು ಚರ್ಚಿಸಲಾಗಿದೆ. ಇಲ್ಲಿ ತೀರ್ಥಂಕರ, ಯಕ್ಷಯಕ್ಷಿಣಿಯರ, ಜೈನ ಮುನಿಗಳ ಮತ್ತು ಸೇವಕ ವರ್ಗದವರ ಚಿತ್ರಗಳನ್ನು ಗಾರೆ, ಕಾಷ್ಠ, ಲೆಪ್ಪ ಹಾಗೂ ಶಿಲಾ ಮಾಧ್ಯಮದ ಶಿಲ್ಪಗಳು ರಥ ಶಿಲ್ಪಗಳಲ್ಲಿ ಹಾಗೂ ವಿವಿಧ ಮತ್ತಿತರ ವಸ್ತುಗಳ ಮೇಲೆ ವರ್ಣಗಳಿಂದ ಚಿತ್ರಿಸಲಾಗಿರುವುದನ್ನು ಕಾಣಬಹುದು. ಈ ಮೇಲೆ ಹೇಳಿದ ಪ್ರತಿಯೊಂದು ಮಾಧ್ಯಮದಲ್ಲಿ ಚಿತ್ರಿತಗೊಂಡ ಚಿತ್ರಗಳ ವಿವರಣೆಯನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಆರರಲ್ಲಿ ಜೈನ ಚಿತ್ರಕಲೆಯ ಶೈಲಿ ತಂತ್ರಗಾರಿಕೆ ಪ್ರಭಾವ ಪ್ರೇರಣೆ ಮತ್ತು ಲಕ್ಷಣಗಳನ್ನು ಕುರಿತು ಚರ್ಚಿಸಲಾಗಿದೆ. ಉತ್ತರ ಭಾರತದಿಂದ ಶ್ರವಣಬೆಳಗೊಳಕ್ಕೆ ಕ್ರಿ.ಸ್ತ ಪೂರ್ವದಿಂದಲೇ ಬಂದು ನೆಲೆಸಿದ ಜೈನಧರ್ಮವು ಉತ್ತರ ಭಾರತದ ಶೈಲಿಯ ಪ್ರಭಾವಗಳು ಕಂಡುಬಂದರೂ ಕರ್ನಾಟಕದ ಪ್ರಾದೇಶಿಕತೆಯನ್ನು ಮತ್ತು ವೈವಿಧ್ಯತೆಯನ್ನು ಉಳಿಸಿಕೊಂಡು ಬಂದಿದೆ. ಕರ್ನಾಟಕದ ಜೈನ ಧರ್ಮದ ಕಲಾಕೃತಿಗಳಲ್ಲಿ ರಾಜಸ್ಥಾನ, ದಖ್ಖನಿ, ಮೊಗಲ್, ಅಜಂತಾ, ಎಲ್ಲೋರಾ, ಹಾಗೂ ಕರ್ನಾಟಕದ ವಿಜಯನಗರ ಶೈಲಿ, ಮೈಸೂರು ಕಲಾಶೈಲಿಯ ಸಮನ್ವಯ ಕಲೆಯನ್ನು ಹಸ್ತಪ್ರತಿ ಚಿತ್ರಗಳಲ್ಲಿ ಹಾಗೂ ಭಿತ್ತಿಚಿತ್ರಗಳಲ್ಲಿ ಮತ್ತು ಸಂಕೀರ್ಣ ಮಾಧ್ಯಮದ ಕಲಾಕೃತಿಗಳಲ್ಲಿ ಕಾಣಬಹುದು. ಈ ಕಲಾಶೈಲಿಯ ಪ್ರೇರಣೆ–ಪ್ರಭಾವದಿಂದ ಕರ್ನಾಟಕದಲ್ಲಿ ಜೈನ ಚಿತ್ರಕಲೆಯಲ್ಲಿ ಕಂಡುಬರುವ ವಿವರಣೆಯನ್ನು ಈ ಆಧ್ಯಾಯದಲ್ಲಿ ವಿವರಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಜೈನ ಚಿತ್ರಕಲೆಯ ಸ್ಥಿತಿಗತಿ ಕುರಿತಾಗಿದ್ದು ಇಲ್ಲಿ ಸುಮಾರು ಕ್ರಿ. ಶ. ಪೂರ್ವದಿಂದಲೇ ಕರ್ನಾಟಕದಲ್ಲಿ ಬೆಳೆದು ಬಂದ ಜೈನ ಧರ್ಮಾಧಾರಿತ ಕಲೆಯನ್ನು ಸಂರಕ್ಷಣೆ ಮಾಡುವ ಒಂದು ಪ್ರಮುಖ



ಕಾರ್ಯವನ್ನು ಪ್ರಸ್ತುತ ಅಧ್ಯಾಯದಲ್ಲಿ ವಿವರಿಸಲಾಗಿದೆ. ವಿನಾಶದಂಚಿನಲ್ಲಿರುವ ಅಥವಾ ಆಪತ್ತುಗಳಿಗೆ ಸಿಲುಕಿರುವ ಚಿತ್ರಗಳನ್ನು ಅಧ್ಯಯನದ ದೃಷ್ಟಿಯಿಂದ ಪ್ರಾಕೃತಿಕ ಆಪತ್ತು ಹಾಗೂ ಮಾನವ ನಿರ್ಮಿತ ಆಪತ್ತು ಎಂದು ಎರಡು ರೀತಿಯಲ್ಲಿ ವಿಂಗಡಿಸಿಕೊಂಡಿದ್ದೆಯಲ್ಲದೆ ವಿನಾಶ ಹೊಂದುತ್ತಿರುವ ಚಿತ್ರಗಳನ್ನು ಸಂರಕ್ಷಣೆ ಮಾಡುವ ಸಹ ಒಂದು ಪ್ರಮುಖ ಕಾರ್ಯವನ್ನು ವಿವರಿಸಲಾಗಿದೆ.

ಜೈನ ಚಿತ್ರಗಳನ್ನು ಸಂರಕ್ಷಿಸಲು ವಿಧಾನಗಳನ್ನು ಕುರಿತು ಹೇಳುವುದಾದರೆ ಇಲ್ಲಿ ನೇರ ಕ್ರಮಗಳಿಂದಾಗುವ ಸಂರಕ್ಷಣಾ ವಿಧಾನಗಳು ಮತ್ತು ಪೂರಕ ಕ್ರಮಗಳಿಂದಾಗುವ ಸಂರಕ್ಷಣಾ ವಿಧಾನಗಳು ಎಂದು ಎರಡು ರೀತಿಯಲ್ಲಿ ವಿಂಗಡಿಸಿಕೊಂಡಿದ್ದು ಈ ಎರಡು ಕ್ರಮಗಳಲ್ಲಿ ಕಂಡುಕೊಳ್ಳಬಹುದಾದ ಸಂರಕ್ಷಣಾ ವಿಧಾನಗಳನ್ನು ಕುರಿತು ಈ ಅಧ್ಯಾಯದಲ್ಲಿ ಸಮಿಕ್ಷಿಸಲಾಗಿದೆ.

ಈ ಮೇಲೆ ಹೇಳಿದ ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿಸಿದ ಅನೇಕ ವಿಷಯಗಳನ್ನು ಈ ಕೊನೆಯ ಅಧ್ಯಾಯವಾದ ಸಮಾರೋಪದಲ್ಲಿ ಸಮೀಕ್ಷಿಸಲಾಗಿದೆ. ಅಲ್ಲದೆ ಈ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಸಹ ಸಮೀಕ್ಷೀಸಲಾಗಿದೆ.

**ಪ್ರಸ್ತುತ ಅಧ್ಯಯನದಿಂದ ಕಂಡುಕೊಂಡ ಫಲಿತಗಳು**

ಪ್ರಸ್ತುತ ಅಧ್ಯಯನವು ಕರ್ನಾಟಕದ ಜೈನ ಚಿತ್ರಕಲೆ ಕುರಿತಾಗಿದ್ದು ವಿಶೇಷವಾಗಿ ಕರ್ನಾಟಕದ ಅರಸರು ಜೈನ ಧರ್ಮಕ್ಕೆ ರಾಜಾಶ್ರಯ ನೀಡಿದ್ದರಿಂದ ಜೈನ ಧರ್ಮದ ಚಾರಿತ್ರಿಕ ರಾಜಕೀಯ ಬೆಳವಣಿಗೆಗಳೊಂದಿಗೆ ಚಿತ್ರಕಲೆಯು ಹೇಗೆ ಬೆಳೆದು ಬಂದಿತೆಂಬುದರ ಮಹತ್ತರವಾದ ವಿವರಣೆಯನ್ನು ಇಲ್ಲಿ ಚರ್ಚಿಸಲಾಗಿದೆ. ಅಲ್ಲದೆ ಬಸದಿ ಮತ್ತು ಮಠಗಳಲ್ಲಿ ಚಿತ್ರಿತಗೊಂಡ ಅನೇಕ ಪ್ರಕಾರಗಳ ಚಿತ್ರಗಳೆಲ್ಲವನ್ನು ಒಟ್ಟುಗೂಡಿಸಿ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಕರ್ನಾಟಕದ ಜೈನ ಚಿತ್ರಗಳ ರಚನಾವಿಧಾನ, ತಂತ್ರಗಾರಿಕೆ, ವರ್ಣಸಂಯೋಜನೆ ಹಾಗೂ ಶೈಲಿಯ ವೈಶಿಷ್ಟ್ಯ ತರೆಗಳಂತಹ ಅನೇಕ ಮಹತ್ವದ ವಿವರಣೆಗಳನ್ನು ಅಲ್ಲದೆ ಆಯಾ ಅಧ್ಯಾಯಗಳಿಂದ ಕಂಡುಕೊಂಡ ಫಲಿತಗಳನ್ನು ಒಟ್ಟುಗೂಡಿಸಿಕೊಂಡಿತ್ತಲ್ಲದೆ. ಈ ಕೊನೆಯ ಅಧ್ಯಾಯವಾದ ಸಮಾರೋಪದಲ್ಲಿ ಅವುಗಳನ್ನು ಸಮೀಕ್ಷಿಸಲಾಗಿದೆ.

ಇದುವರೆಗೆ ಕರ್ನಾಟಕದ ಜೈನ ಧರ್ಮದ ಇತಿಹಾಸವನ್ನು ಕುರಿತು ಹೆಚ್ಚಿನ ರೀತಿಯ ಸಂಶೋಧನೆಗಳು ನಡೆದಿವೆ. ಮತ್ತು ಈ ಅಧ್ಯಯನಗಳಲ್ಲಿ ಸಾಂದರ್ಭಿಕವಾಗಿ ಚಿತ್ರಕಲೆಯನ್ನು ವಿವರಿಸಿದ್ದು ಕಂಡುಬಂದರೂ ಇಡಿಯಾಗಿ ಕರ್ನಾಟಕದ ಜೈನ ಕಲೆಯ ಕುರಿತಾಗಲಿ ಅರಸರು ಚಿತ್ರಕಲೆಗೆ ನೀಡಿದ ಪ್ರೋತ್ಸಾಹ, ಪೋಷಣೆಯನ್ನೋ ಕುರಿತಾದ ಯಾವುದೇ ರೀತಿಯ ಅಧ್ಯಯನಗಳು ನಡೆದಿಲ್ಲ. ಈ ಅಂಶವನ್ನು ಗಮನಿಸಿ ಪ್ರಸ್ತುತ ಅಧ್ಯಯನವನ್ನು ಕೈಗೊಂಡಿರುವುದು ಔಚಿತ್ಯಪೂರ್ಣವೆನಿಸುತ್ತದೆ.

ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನಧರ್ಮದ ಇತಿಹಾಸವೇ ಆಗಿದೆ. ಎಂಬ ವಿದ್ವಾಂಸರ ಮಾತನ್ನು ಬಹುಶ ಜಾಗತಿಕ ಮಟ್ಟದ ಎಲ್ಲ ವಿದ್ವಾಂಸರು ಒಪ್ಪಿಕೊಳ್ಳುತ್ತಾರೆ. ಕಾರಣ ದಕ್ಷಿಣ ಭಾರತದಲ್ಲಿ ಜೈನಧರ್ಮವು ಕರ್ನಾಟಕದ ಇತಿಹಾಸದೊಂದಿಗೆ ಬೆಳೆಯುತ್ತಾ ತನ್ನದೇ ಆದ ಇತಿಹಾಸವನ್ನು ನಿರ್ಮಿಸಿದ್ದನ್ನು ಇತಿಹಾಸದ ಪುಟಗಳಿಂದ ತಿಳಿಯಬಹುದು. ಕರ್ನಾಟಕದ ಪ್ರಮುಖ ಅರಸು ಮನೆತನಗಳು ರಾಜಕೀಯದೊಂದಿಗೆ ಸಾಂಸ್ಕೃತಿಕ ಲೋಕಕ್ಕೂ ವಿಶಿಷ್ಟ ಕೊಡುಗೆಯನ್ನು ನೀಡಿದ್ದಾರೆ. ಹಾಗಾಗಿ ಅಂದು ಅನೇಕ ಚಿತ್ರ ರಚನೆಗಳು ರಚನೆಗೊಂಡಿವೆ. ಜೈನ ಧರ್ಮವನ್ನು ಪೋಷಿಸಿದ ಅರಸರ ಕಾಲದಲ್ಲಿ ಚಿತ್ರಕಲಾವಿದರಿಗೆ ಆಶ್ರಯ ನೀಡಿದ ವಿವರಗಳು ತಿಳಿದು ಬಂದಿಲ್ಲ. ಆದರೆ ಧರ್ಮ ಪ್ರಚಾರದ ಜೊತೆಗೆ ಚಿತ್ರಕಲೆ ನೀಡಿದ ಆಶ್ರಯವನ್ನು ಹಾಗೂ ಅನೇಕ ವಿಷಯಗಳನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.



ಕರ್ನಾಟಕದ ಜೈನ ಸಾಹಿತ್ಯ ಗ್ರಂಥಗಳಲ್ಲಿ ಕಥಾವಸ್ತುವಿನ ಸನ್ನಿವೇಶಗಳಿಗೆ ಸಂಬಂಧಿಸಿದಂತೆ ಚಿತ್ರ ಬರೆದು ಗ್ರಂಥಕ್ಕೆ ಸೇರಿಸಲಾದ ಅನೇಕ ಚಿತ್ರಿತ ಹಸ್ತಪ್ರತಿಗಳು ಈ ಹಸ್ತಪ್ರತಿಗಳು ಜೈನ ಮಠಗಳಲ್ಲಿ ಹಾಗೂ ಜೈನ ಶ್ರಾವಕರ ಮನೆಗಳಲ್ಲಿ ಅಳಿದುಳಿದಿರುವ ಹಸ್ತಪ್ರತಿಗಳು ಬೆರಳಣಿಕೆಯಷ್ಟು ಇವುಗಳಲ್ಲಿ ಹೆಚ್ಚಿನ ಹಸ್ತಪ್ರತಿಗಳು ಅಚ್ಚಾಗದೇ ಹಾಗೆಯೇ ಉಳಿದಿವೆ. ಅಪ್ರಕಟಿತ ಹಸ್ತಪ್ರತಿಗಳನ್ನು ಪ್ರಸ್ತುತ ಅಧ್ಯಯನದ ಮೂಲಕ ಪರಿಚಯಿಸುವ ಪ್ರಯತ್ನ ಮಾಡಲಾಗಿದೆ. ಅಲ್ಲದೆ ಈ ಹಸ್ತಪ್ರತಿಗಳ ವಸ್ತು ವಿಷಯ ಚಿತ್ರ ರಚನಾ ವಿಧಾನವಲ್ಲದೆ ಹಸ್ತಪ್ರತಿಗಳ ಅರ್ಥ ಸ್ವರೂಪ ಹಿನ್ನೆಲೆ ಮುಂತಾದ ಅನೇಕ ವಿವರಗಳನ್ನೂ ಸಹ ಇಲ್ಲಿ ಚರ್ಚಿಸಲಾಗಿದೆ.

ಕರ್ನಾಟಕದ ಜೈನ ಚಿತ್ರಗಳನ್ನು ಅವಲೋಕಿಸಿದಾಗ ಚಿತ್ರಗಳ ರಚನಾ ವಿಧಾನ ವರ್ಣಸಂಯೋಜನೆ ಹಾಗೂ ತಂತ್ರಗಾರಿಕೆಯಿಂದ ವಿಶಿಷ್ಟ ಕಲಾಕೃತಿಗಳಾಗಿವೆ. ಅಲ್ಲದೆ ಈ ಚಿತ್ರಗಳಲ್ಲಿ ದಕ್ಷಿಣ ಭಾರತದಲ್ಲಿ ಪ್ರಚಲಿತವಿದ್ದ ಕಿರುರೂಪ ಶೈಲಿ ಮತ್ತು ಜಾನಪದರ ಶೈಲಿಯನ್ನು ಅನುಸರಿಸಬಹಾದಾದ ಲಕ್ಷಣಗಳನ್ನು ಕುರಿತು ವಿವೇಚಿಸಲಾಗಿದೆ. ಅಲ್ಲದೇ ಕರ್ನಾಟಕದ ಜೈನ ಚಿತ್ರಗಳು ತಮ್ಮದೇ ಆದ ವಿಶಿಷ್ಟ ಶೈಲಿಯಿಂದ ಕೂಡಿದವುಗಳಾಗಿರುವಂತಹ ಅನೇಕ ವಿವರಗಳನ್ನೂ ಸಹ ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಕರ್ನಾಟಕದ ಜೈನ ಚಿತ್ರಕಲೆಯನ್ನು ಕುರಿತು ಹೆಚ್ಚಿನ ಗ್ರಂಥಗಳು ಬರದೇ ಹೊದರೂ ಅದಕ್ಕೆ ಪೂರಕವಾಗಿ ಕರ್ನಾಟಕದ ಜೈನ ಧರ್ಮದ ಇತಿಹಾಸ ಸಾಹಿತ್ಯ ಮತ್ತು ವಾಸ್ತು ಕಲೆಯನ್ನು ಕುರಿತಾಗಿ ಪ್ರಕಟಗೊಂಡ ಗ್ರಂಥಗಳಲ್ಲದೆ ಜೈನ ಚಿತ್ರಕಲೆಗೆ ಸಂಬಂಧಪಟ್ಟಂತೆ ಲೇಖನಗಳನ್ನಿಟ್ಟುಕೊಂಡು ಅವುಗಳೊಂದಿಗೆ ಪರಾಮರ್ಶಿಸಿದೆಯಾದರೂ ಪ್ರಸ್ತುತ ಅಧ್ಯಯನವು ಹೆಚ್ಚಾಗಿ ಕ್ಷೇತ್ರಕಾರ್ಯವನ್ನು ಅವಲಂಬಿಸಿದೆ.

ಹಾಗಾಗಿ ಚರ್ಚೆ, ಸಂದರ್ಶನ, ಛಾಯಾಚಿತ್ರಣ, ಮುಂತಾದ ಆಕಾರಗಳಿಂದ ಮಾಹಿತಿಯನ್ನು ಸಂಗ್ರಹಿಸಿಕೊಂಡು ಪ್ರಸ್ತುತ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

ಪ್ರಸ್ತುತ ಕರ್ನಾಟಕದ ಚರಿತ್ರೆಯಲ್ಲಿ ನಿರ್ಲಕ್ಷ್ಯಗೊಳಗಾದ ಜೈನ ಧರ್ಮದ ವಾಸ್ತುಶಿಲ್ಪ, ಚಿತ್ರ ಹಾಗೂ ಹಸ್ತಪ್ರತಿ ಚಿತ್ರಗಳನ್ನೂ ಈ ಪ್ರಬಂಧದಲ್ಲಿ ಕೆಲವನ್ನು ಮಾತ್ರ ಮಾದರಿಗಾಗಿ ದಾಖಲೀಕರಣಗೊಳಿಸುವುದರೊಂದಿಗೆ ಅವುಗಳ ಕುರಿತು ಅವುಗಳ ವಸ್ತು-ವಿಷಯ, ಸ್ವರೂಪ ಮತ್ತು ವರ್ಣಗಾರಿಕೆಯನ್ನು ಕುರಿತು ಚರ್ಚಿಸಲಾಗಿದೆ.

ಈ ಅಧ್ಯಯನವನ್ನು ಕಲಾತ್ಮಕ ಧಾರ್ಮಿಕ ಮತ್ತು ಐತಿಹಾಸಿಕ ಹೀಗೆ ಸಮಾನ ದೃಷ್ಟಿಕೋನದಿಂದ ನೋಡಲಾಗಿದೆ. ಇಲ್ಲಿ ಚಿತ್ರಗಳು ಕಲಾತ್ಮಕ ಅಂಶಗಳಂತೆ ಐತಿಹಾಸಿಕವಾಗಿಯೂ ಕೂಡಾ ಹೆಚ್ಚಿನ ಮಹತ್ವ ಪಡೆದಿದ್ದು ವಿನಾಶದ ಹಾದಿಯಲ್ಲಿರುವ ಇಂತಹ ಕಲಾಸಂಪತ್ತನ್ನು ನಮ್ಮ ಮುಂದಿನ ಜನಾಂಗಕ್ಕೆ ಉಳಿಸಿ ಹೆಚ್ಚು ದಿನಗಳವರೆಗೆ ಬದುಕಿಸುವಂತೆ ಮಾಡುವ ಇಂದು ಪ್ರಮುಖವಾದ ಅಂಶವಾಗಿದೆ.

ಈ ಮೇಲಿನ ಅಧ್ಯಯನವು ಕರ್ನಾಟಕದ ಜೈನ ಚಿತ್ರಕಲೆಯ ಅತ್ಯಂತ ಸ್ಥೂಲವಾದ ಅಧ್ಯಯನವಾಗಿದ್ದು ಹಸ್ತಪ್ರತಿ ಮತ್ತು ಭಿತ್ತಿಚಿತ್ರಗಳ ಕೆಲವು ನಮೂನೆಗಳನ್ನು ಮಾತ್ರ ಆಧರಿಸಿ ಅಧ್ಯಯನ ನಡೆಸಲಾಗಿದೆ. ಇನ್ನೂ ನೂರಾರು ಜನರು ಈ ಕ್ಷೇತ್ರದಲ್ಲಿ ಅಧ್ಯಯನ ಮಾಡುವಷ್ಟು ವಿಷಯದ ವ್ಯಾಪಕತೆ ಇಲ್ಲಿ ಹೇರಳವಾಗಿದೆ. ಮುಂದಿನ ಅಧ್ಯಯನಕಾರರಿಗೆ ಪ್ರಸ್ತುತ ಅಧ್ಯಯನ ಆಕಾರ ಸಾಮಗ್ರಿಯಾಗಿ ಸಹಾಯಕವಾದರೆ ಈ ಶ್ರಮ ಸಾರ್ಥಕವಾದಂತೆ.

*****





# ಅನುಬಂಧಗಳು



## ಸಂಕೇತಾಕ್ಷರಗಳು

.......

| | |
|---|---|
| ೧. ಪ್ರ.ಸಂ. | ಪ್ರಧಾನ ಸಂಪಾದಕರು |
| ೨. ಕ.ಲ.ಲ.ಅ. | ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು |
| ೩. ಕ.ವಿ.ವಿ. ಹಂಪಿ | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೪. ಪು.ಸಂ. | ಪುಟ ಸಂಖ್ಯೆ |
| ೫. ಗು.ವಿ.ವಿ. | ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ |
| ೬. ಮ.ಪ್ರ. | ಮಹಾಪ್ರಬಂಧ |
| ೭. ಮೈ.ವಿ.ವಿ. | ಮೈಸೂರ ವಿಶ್ವವಿದ್ಯಾಲಯ, ಮೈಸೂರು |
| ೮. ಸಂ. | ಸಂಪಾದಕ |
| ೯. ಕಿ.ಪ್ರ. | ಕಿರು ಪ್ರಬಂಧ |



## ಕರ್ನಾಟಕದ ಜೈನ ಹಸ್ತಪ್ರತಿಗಳ ಸಂಗ್ರಹದ ನೆಲೆಗಳು

೦೧. ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೦೩. ಕನ್ನಡ ಅಧ್ಯಯನ ಕೇಂದ್ರ ಹಸ್ತಪ್ರತಿಭಂಡಾರ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು

೦೨. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಹಸ್ತಪ್ರತಿಭಂಡಾರ, ಮಾನಸ ಗಂಗೋತ್ರಿ, ಮೈಸೂರು ವಿ.ವಿ

೦೪. ಜೈನ ಮಠ, ಮೂಡಬಿದಿರೆ, ದಕ್ಷಿಣಕನ್ನಡ

೦೫. ಶ್ರೀ ಲಕ್ಷೀಸೇನ ಭಟ್ಟಾರಕ, ಶ್ರೀ ಮಠ, ಕೊಲ್ಲಾಪುರ. (ಮಹಾರಾಷ್ಟ್ರ)

೦೬. ಹಸ್ತಪ್ರತಿ ವಿಭಾಗ, ಶ್ರುತ ಕೇವಲಿ, ಎಜುಕೇಶನ್ ಟ್ರಸ್ಟ್(ರಿ),ಶ್ರೀ ಧವಲ ತೀರ್ಥ, ಶ್ರವಣಬೆಳಗೊಳ

೦೭. ಶ್ರೀ ಮಂಜುನಾಥೇಶ್ವರ ಸಂಸ್ಕೃತಿ, ಸಂಶೋಧನ ಕೇಂದ್ರ ಉಜಿರೆ, ಧರ್ಮಸ್ಥಳ

೦೮. ಜೈನ ಮಠ, ಕಾರ್ಕಳ, ದಕ್ಷಿಣ ಕನ್ನಡ

೦೯. ಹಸ್ತಪ್ರತಿ ಗ್ರಂಥಾಲಯ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೧೦. ಕನ್ನಡ ಅಧ್ಯಯನ ಸಂಸ್ಥೆ, ಗುಲಬುರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೧೧. ಶಿವಯೋಗ ಮಂದಿರ ಹಸ್ತಪ್ರತಿ ಕೇಂದ್ರ, ಶಿವಯೋಗ ಮಂದಿರ, ಬಾದಾಮಿ

೧೨. ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ

೧೩. ಜಗದ್ಗುರು ಮುರಘರಾಜೇಂದ್ರ ಬೃಹನ್ಮಠ, ಚಿತ್ರದುರ್ಗ

೧೪. ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿ ಜೈನಮಠ, ಶ್ರವಣಬೆಳಗೊಳ

೧೫. ಬಿ.ಎಂ.ಶ್ರೀ ಪ್ರತಿಷ್ಠಾನ, ನರಸಿಂಹರಾಜ ಕಾಲನಿ, ಬೆಂಗಳೂರು

೧೬. ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜ ಪೇಟೆ, ಬೆಂಗಳೂರು



## ಜೈನ ಭಿತ್ತಿಚಿತ್ರಗಳು ಇರುವ ನೆಲೆಗಳು

| ಕ್ರಸಂ | ಸ್ಥಳ | ತಾಲೂಕು | ಜಿಲ್ಲೆ |
|---|---|---|---|
| ೦೧. | ಕತ್ತಲ ಬಸದಿ (ಶ್ರವಣಬೆಳಗೊಳ) | ಚನ್ನರಾಯಪಟ್ಟಣ | ಹಾಸನ |
| ೦೨. | ಚಾವುಂಡರಾಯ ಬಸದಿ (ಶ್ರವಣಬೆಳಗೊಳ) | ಚನ್ನರಾಯಪಟ್ಟಣ | ಹಾಸನ |
| ೦೩. | ಪಾರ್ಶ್ವನಾಥ ಬಸದಿ (ಶ್ರವಣಬೆಳಗೊಳ) | ಚನ್ನರಾಯಪಟ್ಟಣ | ಹಾಸನ |
| ೦೪. | ದಾನ ಶಾಲಾ ಬಸದಿ (ಶ್ರವಣಬೆಳಗೊಳ) | ಚನ್ನರಾಯಪಟ್ಟಣ | ಹಾಸನ |
| ೦೫. | ಲೆಪ್ಪದ ಬಸದಿ (ಮೂಡಬಿದಿರೆ) | ಮೂಡಬಿದಿರೆ | ದಕ್ಷಿಣಕನ್ನಡ |
| ೦೬. | ಅಮ್ಮನವರ ಬಸದಿ (ಮೂಡಬಿದಿರೆ) | ಮೂಡಬಿದಿರೆ | ದಕ್ಷಿಣಕನ್ನಡ |
| ೦೭. | ಶ್ರವಣಬೆಳಗೂಳ ಶ್ರೀ ಮಠ (ಶ್ರವಣಬೆಳಗೊಳ) | ಚನ್ನರಾಯಪಟ್ಟಣ | ಹಾಸನ |
| ೦೮. | ಜೈನ ಮಠ, ಕಾರ್ಕಳ | ಕಾರ್ಕಳ | ದಕ್ಷಿಣಕನ್ನಡ |
| ೦೯. | ಜೈನಮಠ, ಮೂಡಬಿದರೆ | ಕಾರ್ಕಳ | ದಕ್ಷಿಣಕನ್ನಡ |
| ೧೦. | ಸುಬ್ಬಯ್ಯ ಶಾಸ್ತ್ರೀಗಳ ಮನೆ, ಬಜಗೋಳಿ | ಕಾರ್ಕಳ | ದಕ್ಷಿಣಕನ್ನಡ |
| ೧೧. | ಪಂಡಿತರ ಮನೆ (ಜೈನ್ ಪೇಟೆ, ನೆಲ್ಲಿಕಾರು) | ಕಾರ್ಕಳ | ದಕ್ಷಿಣಕನ್ನಡ |
| ೧೨. | ದೊಡ್ಡ ಮನೆ (ಜೈನ್ ಪೇಟೆ ನೆಲ್ಲಿಕಾರು) | ಕಾರ್ಕಳ | ದಕ್ಷಿಣಕನ್ನಡ |
| ೧೩. | ಜೈನ ಬಸ್ತಿ (ಹೊಳೆನರಸಿಪುರ) | ಹೊಳೆನರಸಿಪುರ | ಹಾಸನ |
| ೧೪. | ಬೆಳಗೊಳದ ಮಂಟಪ (ಶ್ರವಣಬೆಳಗೊಳ) | ಚನ್ನರಾಯಪಟ್ಟಣ | ಹಾಸನ |
| ೧೫. | ವಾಸಂತಿಕಾ ದೇವಾಲಯ, ಅಂಗಡಿ | ಮೂಡಿಗೆರೆ | ಚಿಕ್ಕಮಗಳೂರು |
| ೧೬. | ಸಾಲಿಗ್ರಾಮ ಪಾರ್ಶ್ವನಾಥ ಬಸದಿ | ಕೆ.ಆರ್.ನಗರ | ಮೈಸೂರು |



## ಯಕ್ಷ - ಯಕ್ಷಿಯರು ಹಾಗೂ ತೀರ್ಥಂಕರರ ವಿವರಗಳು

ಭಾರತೀಯ ಜೈನ ಧರ್ಮದ ಸಂಪ್ರದಾಯದಲ್ಲಿ ಜೈನ ಪಂಥದ ಒಳಪ್ರಭೇದಗಳಾದ ದಿಗಂಬರ ಮತ್ತು ಶ್ವೇತಾಂಬರ ಪಂಥಗಳಲ್ಲಿ ಯಕ್ಷ-ಯಕ್ಷಿಯರು ಕುರಿತು ಹಂಪಾ ನಾಗರಾಜಯ್ಯನವರು ಯಕ್ಷಾ-ಯಕ್ಷಿಯರು ಎಂಬ ಪುಸ್ತಕದಲ್ಲಿ ಜೈನ ಸಾಹಿತ್ಯ ಹಾಗೂ ಶಿಲ್ಪಶಾಸ್ತ್ರಗಳಲ್ಲಿರುವ ಯಕ್ಷ ಕಲ್ಪನೆಯ ಹುಟ್ಟು ಬೆಳವಣಿಗೆಗಳನ್ನು ಕುರಿತು ಅಮೂಲಾಗ್ರವಾಗಿ ಚರ್ಚಿಸಿದ್ದಾರೆ. ದಿಗಂಬರ ಹಾಗೂ ಶ್ವೇತಾಂಬರ ಕಲ್ಪನೆಗಳ ಸಾಮ್ಯ-ವೈಸಾಮ್ಯಗಳನ್ನು ಗುರುತಿಸಿದ್ದಾರೆ. ಈ ಪುಸ್ತಕ ಒಂದು ಅನನ್ಯ ಕೃತಿಯಾಗಿದೆ.

ದಿಗಂಬರ ಹಾಗೂ ಶ್ವೇತಾಂಬರ ಸಾಂಪ್ರದಾಯದಲ್ಲಿರುವ ವಿದ್ಯಾದೇವತೆಗಳನ್ನು ಹಾಗೂ ಯಕ್ಷ-ಯಕ್ಷಿಯರ ಹೆಸರು, ಪರಂಪರೆ, ಬಣ್ಣ, ವಾಹನ ಹಾಗೂ ಭುಜಸಂಖ್ಯೆ ಆಯತ ಮತ್ತು ವಿಶೇಷತೆಯನ್ನು ಇಲ್ಲಿ ಗುರುತಿಸಬಹುದಾಗಿದೆ. ಕೆಲವು ಪುಸ್ತ್ರಕಗಳಲ್ಲಿ ೨೪ ಯಕ್ಷ ಯಕ್ಷಿಯರ ಹೆಸರುಗಳನ್ನು ಗಮನಿಸಬಹುದಾಗಿದೆ.

೧. (ಷೋಡಶ )ಹದಿನಾರು ವಿದ್ಯಾದೇವಿಯರು

೨. ಚತುರ್ವಿಂಶತಿ ಶಾಸನ ಯಕ್ಷರು

೩. ಚತುರ್ವಿಂಶತಿ ಯಕ್ಷಿಯರು

೪. ಶಾಸ್ತ್ರನ ಕೃತಿಗಳಲ್ಲಿ ೨೪ ಯಕ್ಷರ ಹೆಸರು

೫. ಶಾಸ್ತ್ರನ ಕೃತಿಗಳಲ್ಲಿ ೨೪ ಯಕ್ಷಿಯರ ಹೆಸರು

೬. ಇಪ್ಪತ್ನಾಲ್ಕು ತೀರ್ಥಂಕರರು

## ೧. (ಷೋಡಶ )ಹದಿನಾರು ವಿದ್ಯಾದೇವಿಯರು

| ಕ್ರಸಂ. | ಹೆಸರು | ಪರಂಪರೆ | ಬಣ್ಣ | ವಾಹನ | ಭುಜಸಂಖ್ಯೆ | ಆಯುಧ |
|---|---|---|---|---|---|---|
| ೦೧. | ರೋಹಿಣಿ | ದಿಗಂಬರ | ಸುವರ್ಣ | ಕಮಲಾಸನಾ | ನಾಲ್ಕು | ಕಲಶ ಶಂಖ ಕಮಲ ಬೀಜಪೂರ |
| | | ಶ್ವೇತಾಂಬರ | ಧವಲ | ಗೋಗಾಮಿನೀ | ನಾಲ್ಕು | ಧನುಷ್ ಬಾಣ ಶಂಖ ಅಕ್ಷಸೂತ್ರ |
| ೦೨. | ಪ್ರಜ್ಞಪ್ತಿ | ದಿಗಂಬರ | ನೀಲಿ | ಕುದುರೆ | ನಾಲ್ಕು | ಚಕ್ರ ಖಡ್ಗ ಕಮಲ ಫಲ |
| | | ಶ್ವೇತಾಂಬರ ೧ | ಶ್ವೇತ | ಮಯೂರ | ನಾಲ್ಕು | ವರದ ಶಕ್ತಿಮಾತುಲಿಂಗ ಶಕ್ತಿ |
| | | ಶ್ವೇತಾಂಬರ ೨ | ಶ್ವೇತ | ಮಯೂರ | ಎರಡು | ಶಕ್ತಿ ಕಮಲ |
| ೦೩. | ವಜ್ರಶೃಂಖಲಾ | ದಿಗಂಬರ ೧ | ಸುವರ್ಣ | ಆನೆ | ಎರಡು | ವಜ್ರಶೃಂಕಲಾ |
| | | ದಿಗಂಬರ ೨ | ಸುವರ್ಣ | ಆನೆ | ನಾಲ್ಕು | ವಜ್ರಶೃಂಕಲಾ ಶಂಖ ಕಮಲ ಬೀಜಪೂರ |
| | | ಶ್ವೇತಾಂಬರ ೧ | ಸುವರ್ಣ | ಪದ್ಮ | ಎರಡು | ಶೃಂಖಲಾ ಗದೆ |
| | | ಶ್ವೇತಾಂಬರ ೨ | ಶ್ವೇತ | ಪದ್ಮ | ನಾಲ್ಕು | ವರದ ಶೃಂಖಲಾ ಪದ್ಮಾ ಶೃಂಖಲಾ |
| ೦೪. | ವಜ್ರಾಂಕುಶಾ | ದಿಗಂಬರ | ಸುವರ್ಣ | ಪುಷ್ಪ | ನಾಲ್ಕು | ಅಂಕುಶ ಕಮಲ ಬೀಜಪೂರ ವೀಣಾ |
| | | ಶ್ವೇತಾಂಬರ ೧ | ಸುವರ್ಣ | ಗಜ | ನಾಲ್ಕು | ಕತ್ತಿ ವಜ್ರ ಗುರಾಣಿ ಭಲ್ಲೆ |
| | | ಶ್ವೇತಾಂಬರ ೨ | ಸುವರ್ಣ | ಗಜ | ನಾಲ್ಕು | ವರದ ವಜ್ರ ಮಾತುಲಿಂಗ ಅಂಕುಶ |
| ೦೫. | . ಜಾಂಬೂನದಾ ಅಪ್ರತಿಚಕ್ರಾ | ದಿಗಂಬರ | ಸುವರ್ಣ | ಕೇಕಿ | ನಾಲ್ಕು | ಖಡ್ಗ ಭಲ್ಲೇ ಕಮಲ ಬೀಜಪೂರ |
| | ಚಕ್ರೇಶ್ವರೀ | ಶ್ವೇತಾಂಬರ | ಸುವರ್ಣ | ಗರುಡ | ನಾಲ್ಕು | ನಾಲ್ಕು ಭುಜಗಳಲ್ಲಿ ಚಕ್ರ |
| ೦೬. | ಪುರುಷದತ್ತಾ | ದಿಗಂಬರ | ಶ್ವೇತ | ಕೋಕ | ನಾಲ್ಕು | ವಜ್ರ ಕಮಲ ಶಂಕ ಫಲ |
| | | ಶ್ವೇತಾಂಬರ ೧ | ಸುವರ್ಣ | ಮಹಿಷಿ | ಎರಡು | ಖಡ್ಗ ಗುರಾಣಿ |
| | | ಶ್ವೇತಾಂಬರ ೨ | ಸುವರ್ಣ | ಮಹಿಷಿ | ನಾಲ್ಕು | ವರದ ಕತ್ತಿ ಮಾತುಲಿಂಗ ಖೇಟಕ |
| ೦೭. | ಕಾಲೀ | ದಿಗಂಬರ | ಸುವರ್ಣ | ಮೃಗ | ನಾಲ್ಕು | ಮುಸಲ ಅಸಿ ಪದ್ಮ ಫಲ |
| | | ಶ್ವೇತಾಂಬರ ೧ | ಕೃಷ್ಣ | ಪದ್ಮ | ಎರಡು | ಗದೆ ವಜ್ರ |
| | | ಶ್ವೇತಾಂಬರ ೨ | ಕೃಷ್ಣ | ಪದ್ಮ | ನಾಲ್ಕು | ಅಕ್ಷಸೂತ್ರ ಗದೆ ವಜ್ರ ಅಭಯ |
| ೦೮. | ಮಹಾಕಾಲೀ | ದಿಗಂಬರ | ಶ್ಯಾಮ | ಶರಭ | ನಾಲ್ಕು | ಧನುಷ್ ಬಾಣ ಖಡ್ಗ ಅಭಯ ಘಂಟೆ |
| | | ಶ್ವೇತಾಂಬರ ೧ | ತಮಾಲ | ನರ | ನಾಲ್ಕು | ಅಕ್ಷಸೂತ್ರ ವಜ್ರ ಅಭಯ ಘಂಟೆ |
| | | ಶ್ವೇತಾಂಬರ ೨ | ಶ್ವೇತ | ನರ | ನಾಲ್ಕು | ಅಕ್ಷಸೂತ್ರ ವಜ್ರ ಅಭಯ ಘಂಟೆ |



| | | | | | | |
|---|---|---|---|---|---|---|
| ೦೯. | ಗೌರಿ | ದಿಗಂಬರ | ಸುವರ್ಣ | ಗೋಧಾ | ನಾಲ್ಕು | ಕಮಲ(ನಾಲ್ಕು) |
| | | ಶ್ವೇತಾಂಬರ | ಗೌರ | ಗೋಧಾ | ನಾಲ್ಕು | ವರದ ಮುಸಲ ಅಕ್ಷಮಾಲಾ ಕುವಲಯ |
| ೧೦. | ಗಾಂಧಾರೀ | ದಿಗಂಬರ | ಶ್ಯಾಮ | ಕಚ್ಛಪ | ಎರಡು | ಚಕ್ರ ಖಡ್ಗ |
| | | ಶ್ವೇತಾಂಬರ [೧] | ಶ್ಯಾಮ | ಕಮಲ | ನಾಲ್ಕು | ಕಮಲ ಎರಡು ಮುಸಲ ವಜ್ರ |
| | | ಶ್ವೇತಾಂಬರ [೨] | ಶ್ಯಾಮ | ಕಮಲ | ನಾಲ್ಕು | ವರದ ಮುಸಲ ಅಭಯ ವಜ್ರ |
| ೧೧. | ಜ್ವಾಲಾಮಾಲಿನೀ | ದಿಗಂಬರ | ಶ್ವೇತ | ಮಹಿಷಿ | ಎಂಟು | ಧನುಷ್ ಬಾಣ ಖಡ್ಗ ಖೇಟಕ ಚಕ್ರ (ಇತ್ಯಾದಿ) |
| | ಜ್ವಾಲಾ | ಶ್ವೇತಾಂಬರ [೧] | ಶ್ವೇತ | ವರಾಹ | ಅನೇಕ | ಬೇರೆ ಬೇರೆ ಆಯುಧಗಳು |
| | | ಶ್ವೇತಾಂಬರ [೨] | ಶ್ವೇತ | ಮಾರ್ಜಾರ | ಎರಡು | ಎರಡರಲ್ಲೂ ಜ್ವಾಲೆ |
| ೧೨. | ಮಾನವೀ | ದಿಗಂಬರ | ನೀಲಿ | ಶೂಕರ | ನಾಲ್ಕು | ಮತ್ಸ್ಯ ಖಡ್ಗ ತ್ರಿಶೂಲ |
| | | ಶ್ವೇತಾಂಬರ | ನೀಲ | ಸರೋಜ | ನಾಲ್ಕು | ವರದ ಪಾಶ ಅಕ್ಷಸೂತ್ರ ವೃಕ್ಷ |
| ೧೩. | ವೈರೋಟೀ | ದಿಗಂಬರ | ನೀಲ | ಸಿಂಹ | ನಾಲ್ಕು | ವರದ ಹಾವು, ಎರಡು ಕೈ ಪ್ರಣಾಮ ಮುದ್ರೆ |
| | ವೈರೋಟ್ಯಾ | ಶ್ವೇತಾಂಬರ [೧] | ಶ್ಯಾಮ | ಅಜಗರ | ನಾಲ್ಕು | ಖಡ್ಗ ಹಾವು, ಹುರಾಣಿ ಹಾವು |
| | | ಶ್ವೇತಾಂಬರ [೨] | ಗೌರ | ಸಿಂಹ | ನಾಲ್ಕು | ಖಡ್ಗೋಊರ್ಧ್ವಹಸ್ತ ಹಾವು ವರದ |
| ೧೪. | ಅಚ್ಯುತಾ | ದಿಗಂಬರ | ಸುವರ್ಣ | ಕುದುರೆ | ನಾಲ್ಕು | ವಜ್ರ ಎರಡುಕೈ ಪ್ರಣಾಮ ಮುದ್ರೆ |
| | ಅಚ್ಛುಪಾ | ಶ್ವೇತಾಂಬರ [೧] | ವಿದ್ಯುತ್ವರ್ಣ | ಕುದುರೆ | ನಾಲ್ಕು | ಬಾಣ ಖಡ್ಗ ಧನುಷ್ ಗುರಾಣಿ |
| | | ಶ್ವೇತಾಂಬರ [೨] | ವಿದ್ಯುತ್ವರ್ಣ | ಕುದುರೆ | ನಾಲ್ಕು | ಬಾಣ ಖಡ್ಗ ಗುರಾಣಿ ಹಾವು |
| ೧೫. | ಮಾನಸೀ | ದಿಗಂಬರ | ರಕ್ತ | ಸರ್ಪ | ಎರಡು | ಪ್ರಣಾಮ ಮುದ್ರೆ |
| | | ಶ್ವೇತಾಂಬರ [೧] | ಸುವರ್ಣ | ಹಂಸ | ಎರಡು | ವರದ ಮುದ್ರೆ |
| | | ಶ್ವೇತಾಂಬರ [೨] | ಧವಳ | ಹಂಸ | ನಾಲ್ಕು | ವರದ ವಜ್ರ ಅಕ್ಷಸೂತ್ರ ಅಶನಿ |
| ೧೬. | ಮಹಾಮಾನಸೀ | ದಿಗಂಬರ [೧] | ವಿದ್ರುಮ | ಹಂಸ | ನಾಲ್ಕು | ಅಕ್ಷಮಾಲಾ ಮಾಲಾ ವರದ ಅಂಕುಶ |
| | | ದಿಗಂಬರ [೨] | ವಿದ್ರುಮ | ಹಂಸ | ನಾಲ್ಕು | ಪ್ರಣಾಮ ಮುದ್ರೆ |
| | | ಶ್ವೇತಾಂಬರ | ಧವಲ | ಸಿಂಹ | ನಾಲ್ಕು | ವರದ ಅಸಿ ಕುಂಡಿಕಾ ಗುರಾಣಿ |



| | | | | | | | |
|---|---|---|---|---|---|---|---|
| ೧೦. | ಬ್ರಹ್ಮ | ದಿಗಂಬರ | ಶ್ವೇತ | ಪದ್ಮ | ಎಂಟು | ಬಾಣ ಧನುಷ್ ಪರಶುದಂಡ ಕತ್ತಿ ಗುರಾಣಿ ವರದ ವಜ್ರ | ಚತುರ್ಮುಖ |
| | | ಶ್ವೇತಾಂಬರ | ಶ್ವೇತ | ಪದ್ಮ | ಎಂಟು | ಬೀಜಪೂರ ಮುದ್ಗರ ಪಾಶ ಅಭಯ ನಕುಲ ಅಂಕುಶ ಗದೆ ಅಕ್ಷಸೂತ್ರ ಅಕ್ಷಸೂತ್ರ ಪದ್ಮ ತ್ರಿಶೂಲ | |
| ೧೧. | ಈಶ್ವರ | ದಿಗಂಬರ | ಶ್ವೇತ | ವೃಷಭ | ನಾಲ್ಕು | ದಂಡ | |
| | | ಶ್ವೇತಾಂಬರ | ಶ್ವೇತ | ವೃಷಭ | ನಾಲ್ಕು | ಬೀಜಪೂರ ಗದೆ ನಕುಲ ಅಕ್ಷಸೂತ್ರ | |
| ೧೨. | ಕುಮಾರ | ದಿಗಂಬರ | ಶ್ವೇತ | ಹಂಸ | ಆರು | ಬಾಣ ಗದೆ ವರದ ಧನುಷ್ ನಕುಲ ಫಲ | |
| | | ಶ್ವೇತಾಂಬರ | ಶ್ವೇತ | ಹಂಸ | ನಾಲ್ಕು | ಬೀಜಪೂರ ಬಾಣ ಧನುಷ್ ನಕುಲ | |
| ೧೩. | ಷಣ್ಮುಕ | ದಿಗಂಬರ[1] | ಹರಿತ | ಮಯೂರ | ಹನ್ನೆರಡು | ಮೇಲಿನ ಎಂಟು ಕೈಗಳಲ್ಲಿ ಪರಶು ಶೇಷ, ನಾಲ್ಕು ಕೈಗಳಲ್ಲಿ ಕತ್ತಿ, ಅಕ್ಷಸೂತ್ರ, ಗುರಾಣಿ ದಂಡ | ತ್ರಿಮುಖ |
| | ಚತುರ್ಮುಖ | ದಿಗಂಬರ[2] | ಹರಿತ | ಮಯೂರ | ಹನ್ನೆರಡು | ಮೇಲಿನ ಎಂಟು ಕೈಗಳಲ್ಲಿ ಪರಶು ಶೇಷ, ನಾಲ್ಕು ಕೈಗಳಲ್ಲಿ ಕತ್ತಿ, ಅಕ್ಷಸೂತ್ರ, ಗುರಾಣಿ ದಂಡ | |
| | | ಶ್ವೇತಾಂಬರ | ಶ್ವೇತ | ಮಯೂರ | ಹನ್ನೆರಡು | ಫಲ ಚಕ್ರ ಬಾಣ ಖಡ್ಗ ಪಾಶ ಅಕ್ಷಸೂತ್ರ ನಕುಲ ಚಕ್ರ ಧನುಷ್ ಗುರಾಣಿ ಅಂಕುಶ ಅಭಯ | ಆರು ಮುಖ |
| ೧೪. | ಪಾತಾಲ | ದಿಗಂಬರ | ರಕ್ತ | ಮಕರ | ಆರು | ಅಂಕುಶ ಶೂಲ ಕಮಲ ಕಶಾ ಹಲಫಲ | ನಾಲ್ಕು ಮುಖ |
| | | ಶ್ವೇತಾಂಬರ | ರಕ್ತ | ಮಕರ | ಆರು | ಪದ್ಮ ಪಾಶ ಅಸಿ ನಕುಲ ಗುರಾಣಿ ಅಕ್ಷಸೂತ್ರ | |
| ೧೫. | ಕಿನ್ನರ | ದಿಗಂಬರ | ರಕ್ತ | ಮಿನೂ | ಆರು | ಬೀಜಪೂರ ಗದೆ ಅಭಯ ನಕಲ ಪದ್ಮ ಅಕ್ಷಸೂತ್ರ | ಆರು ಮುಖ |
| | | ಶ್ವೇತಾಂಬರ | ರಕ್ತ | ಕೂರ್ಮ | ಆರು | ಮುದ್ಗರ ಅಕ್ಷಸೂತ್ರ ಪರದೆ ಚಕ್ರ ವಜ್ರ ಅಂಕುಶ | ತ್ರಿಮುಖ |
| ೧೬. | ಗರುಡ | ದಿಗಂಬರ | ಶ್ಯಾಮ | ವರಾಹ | ನಾಲ್ಕು | ವಜ್ರ ಪದ್ಮ ಚಕ್ರ ಫಲ | ತ್ರಿಮುಖ |
| | | ಶ್ವೇತಾಂಬರ | ಶ್ಯಾಮ | ವರಾಹ | ನಾಲ್ಕು | ಬೀಜಪೂರ ಕಮಲ ಅಕ್ಷಸೂತ್ರ ನಕುಲ | |
| ೧೭. | ಗಂಧರ್ವ | ದಿಗಂಬರ | ಶ್ಯಾಮ | ಪಕ್ಷಿ | ನಾಲ್ಕು | ಎರಡು ಕೈ, ನಾಗಪಾಶ, ಬಾಣ ಧನುಷ್ | ಶೂಕರಮುಖಿ |
| | | ಶ್ವೇತಾಂಬರ | ಶ್ಯಾಮ | ಹಂಸ | ನಾಲ್ಕು | ವರದ ಪಾಸ ಬೀಜಪೂರ ಅಂಕುಶ | |
| ೧೮. | ಖೇಂದ್ರ | ದಿಗಂಬರ | ಶ್ಯಾಮ | ಶಂಖ | ಹನ್ನೆರಡು | ಬಾಣ ಕಮಲ ಫಲ ಮಾಲಾ ಅಕ್ಷಸೂತ್ರ ಅಭಯ ಧನುಷ್ ವಜ್ರಪಾಶ ಮುದ್ಗರ ಅಂಕುಶ ವರದ | ಆರು ಮುಖ |



| | | | | | | | |
|---|---|---|---|---|---|---|---|
| | ಯಕ್ಷೇಂದ್ರ | ಶ್ವೇತಾಂಬರ | ಶ್ಯಾಮ | ಶಂಖ | ಹನ್ನೆರಡು | ಬೀಜಪೂರ ಬಾಣ ಖಡ್ಗ ಮುದ್ಗದ ಪಾಶ ಅಭಯ ನಕುಲ ಧನುಶ್ ಗುರಾಣಿ ಶೂಲ ಅಂಕುಶ ಅಕ್ಷಸೂತ್ರ | |
| ೧೯. | ಕುಬೇರ | ಶ್ವೇತಾಂಬರ | ಇಂದ್ರನುಷ್ | ಆನೆ | ಎಂಟು | ಕೃಪಾಣು ಬಾಣ ಪಾಶ ವರದ ಗುರಾಣಿ ಧನುಷ್ಯ ದಂಡ ಪದ್ಮ | ಚತುರ್ಮುಖ |
| | | ದಿಗಂಬರ | ಇಂದ್ರನುಷ್ | ಆನೆ | ಎಂಟು | ಶೂಲ ಪರಶು ಅಭಯ ವರದ ಮುದ್ಗರ ಅಕ್ಷಸೂತ್ರ ಬೀಜಪೂರ ಶಕ್ತಿ | |
| ೨೦. | ವರುಣ | ದಿಗಂಬರ | ಶ್ವೇತ | ವೃಷಭ | ನಾಲ್ಕು | ವರದ ಕತ್ತಿ ಗುರಾಣಿ ಫಲ | ಅಷ್ಟಮುಖ |
| | | ಶ್ವೇತಾಂಬರ | ಶ್ವೇತ | ವೃಷಭ | ಎಂಟು | ಬೀಜಪೂರ ಗದೆ ಬಾಣ ಶಕ್ತಿ ನಕುಲ ಪದ್ಮ ಧನುಷ್ ಪರಶು | ಚತುರ್ಮುಖ |
| ೨೧. | ಭೃಕುಟ | ದಿಗಂಬರ | ಸುವರ್ಣ | ವೃಷಭ | ಎಂಟು | ಗುರಾಣಿ ಅಸಿ ಧನುಷ್ ಬಾಣ ಅಂಕುಶ ಕಮಲ ಚಕ್ರ ವರದ | ಚತುರ್ಮುಖ |
| | | ಶ್ವೇತಾಂಬರ | ಸುವರ್ಣ | ವೃಷಭ | ಎಂಟು | ಬೀಜಪೂರ ಶಕ್ತಿ ಮುದ್ಗರ ಅಭಯ ನಕುಲ ಪರಶು ವಜ್ರ ಅಕ್ಷಸೂತ್ರ | |
| ೨೨. | ಗೋಮೇದ | ದಿಗಂಬರ | ಶ್ಯಾಮ | ನೃವಾಹನ ಪುಷ್ಪಯಾನ | ಆರು | ಮುದ್ಗರ ಮುತಾರ ದಂಡ ಫಲ ವಜ್ರ ವರದ | |
| | | ಶ್ವೇತಾಂಬರ | ಶ್ಯಾಮ | ನರವಾಹನ | ಆರು | ಪರಶು ಬೀಜಪೂರ ಚಕ್ರ ನಕುಲ ಶೂಲಶಕ್ತಿ | ತ್ರಿಮುಖ |
| ೨೩. | ಧರಣೇಂದ್ರ | ದಿಗಂಬರ | ಶ್ಯಾಮ | ಕೂರ್ಮ | ನಾಲ್ಕು | ಎರಡು ಕೈಗಳಲ್ಲಿ ನಾಗ, ನಾಗಪಾಶ | ಸರ್ಪಹೆಡೆ |
| | ಪಾರ್ಶ್ವ | ಶ್ವೇತಾಂಬರ ೧ | ಶ್ಯಾಮ | ಕೂರ್ಮ | ನಾಲ್ಕು | ಗದೆ ಬೀಜಪೂರ ಸರ್ಪ ನಕುಲ ಗಜಮುಖ | ಸರ್ಪಹೆಡೆ |
| | | ಶ್ವೇತಾಂಬರ ೨ | ಶ್ಯಾಮ | ಕೂರ್ಮ | ನಾಲ್ಕು | ಸರ್ಪಬೀಜಪೂರ ಸರ್ಪ ನಕುಲ | |
| ೨೪. | ಮಾತಂಗ | ದಿಗಂಬರ | ಮುದ್ಗ | ಆನೆ | ಎರಡು | ವರದ ಫಲ | ಹಣೆಯಲ್ಲಿ ಧರ್ಮಚಕ್ರ |
| | | ಶ್ವೇತಾಂಬರ | ಶ್ಯಾಮ | ಆನೆ | ಎರಡು | ನುಲ ಬೀಜಪೂರ | |

## ೩. ಚತುವಿಂಶತಿ ಶಾಸನ ಯಕ್ಷಿಯರು

| | | | | | | |
|---|---|---|---|---|---|---|
| ೦೧. | ಚಕ್ರೇಶ್ವರೀ | ದಿಗಂಬರ[೧] | ಸುವರ್ಣ | ಕಮಲ ವಾಹನ | ಹನ್ನೆರಡು | ಎರಡು ಕೈಯಲ್ಲಿ ವಜ್ರ ಎಂಟು ಕೈಯಲ್ಲಿ ಚಕ್ರ ವರದ,ಫಲ |
| | | ದಿಗಂಬರ[೨] | ಸುವರ್ಣ | ಗರುಡ | ನಾಲ್ಕು | ಎರಡು ಚಕ್ರ ವರದ, ಫಲ |
| | ಅಪ್ರತಿಚಕ್ರಾ | ಶ್ವೇತಾಂಬರ | ಸುವರ್ಣ | ಗರುಡ | ಎಂಟು | ವರದ, ಚಕ್ರ ಪಾಶ ಬಾಣ ಧನುಷ್ ಚಕ್ರ ಅಂಕುಶ ವಜ್ರ |
| ೦೨. | ರೋಹಿಣೀ | ದಿಗಂಬರ | ಸುವರ್ಣ | ಲೋಹಾಸನ | ನಾಲ್ಕು | ಚಕ್ರ ಶಂಖ ಅಭಯ ವರದ |
| | ಅಜಿತಾ | ಶ್ವೇತಾಂಬರ | ಧವಲ | ಲೋಹಾಸಾನ | ನಾಲ್ಕು | ವರದ ಪಾಶ ಅಂಕುಶ ಫಲ |
| ೦೩. | ಪ್ರಜ್ಞಪ್ತಿ | ದಿಗಂಬರ | ಶ್ವೇತ | ಪಕ್ಷಿ | ಆರು | ಅರ್ಧಚಂದ್ರ ಪರಶು ಫಲ ಕತ್ತಿ ಕಮಂಡಲ |
| | ದುರಿತಾರಿ | ಶ್ವೇತಾಂಬರ | ಶ್ವೇತ | ಮೇಷ | ನಾಲ್ಕು | ವರದ ವರದ ಅಕ್ಷಸೂತ್ರ ಫಲ ಅಭಯ |
| ೦೪. | ವಜ್ರಶೃಂಕಲಾ | ದಿಗಂಬರ | ಸುವರ್ಣ | ಹಂಸ | ನಾಲ್ಕು | ನಾಗಪಾಶ ಅಕ್ಷಸೂತ್ರ ಫಲ ವರದ |
| | ಕಾಲಿಕಾ | ಶ್ವೇತಾಂಬರ | ಶ್ಯಾಮ | ಪದ್ಮ | ನಾಲ್ಕು | ಪಾಶ ವರದ ನಾಗ ಅಂಕುಶ |
| ೦೫. | ಪುರುಷದತ್ತಾ | ದಿಗಂಬರ | ಸುವರ್ಣ | ಗಜ | ನಾಲ್ಕು | ಚಕ್ರ ವಜ್ರ ಫಲ ವರದ |
| | ಮಹಾಕಾಲೀ | ಶ್ವೇತಾಂಬರ | ಸುವರ್ಣ | ಪದ್ಮ | ನಾಲ್ಕು | ಪಾಶ ವರದ ಅಂಕುಶ ಬೀಜಪೂರ |
| ೦೬. | ಮನೋವೇಗಾ | ದಿಗಂಬರ | ಸುವರ್ಣ | ಅಶ್ವ | ನಾಲ್ಕು | ವರದ ಅಸಿ ಗುರಾಣಿ ಫಲ |
| | ಶ್ಯಾಮಾ | ಶ್ವೇತಾಂಬರ[೧] | ಶ್ಯಾಮ | ನರ | ನಾಲ್ಕು | ಪಾಶ ವರದ ಬಾಣ ಬೀಜಪೂರ ಅಂಕುಶ |
| | | ಶ್ವೇತಾಂಬರ[೨] | ಶ್ಯಾಮ | ನರ | ನಾಲ್ಕು | ವರದ ಬಾಣ ಧನುಷ್ ಅಭಯ |
| | | ಶ್ವೇತಾಂಬರ[೩] | ಶ್ಯಾಮ | ನರ | ನಾಲ್ಕು | ವರದ ಪಾಶ ಧನುಷ್ ಅಭಯ |
| ೦೭. | ಕಾಲೀ | ದಿಗಂಬರ | ಶ್ವೇತ | ವೃಷಭ | ನಾಲ್ಕು | ಗಂಟೆ ತ್ರಿಶೂಲ ಫಲ ವರದ |
| | ಶಾಂತಾ | ಶ್ವೇತಾಂಬರ | ಪೀತ | ಗಜ | ನಾಲ್ಕು | ವರದ ಅಕ್ಷಸೂತ್ರ ಶೂಲ ಅಭಯ |
| ೦೮. | ಜ್ವಾಲಾಮಾಲಿನೀ | ದಿಗಂಬರ | ಶ್ವೇತ | ಮಹಿಷಿ | ಎಂಟು | ಚಕ್ರ ಧನುಷ್ ಪಾಶ ಗುರಾಣಿ ತ್ರಿಶೂಲ ಬಾಣ ಮತ್ಸ್ಯ ಕತ್ತಿ |
| | ಭೃಕುಟಿ | ಶ್ವೇತಾಂಬರ | ಪೀತ | ವರಾಹ/ಹಂಸ/ ವಿಡಾಲ | ನಾಲ್ಕು | ಖಡ್ಗ ಮುದ್ಗರ ಫಲಕ ಪರಶು |
| ೦೯. | ಮಹಾಕಾಲೀ | ದಿಗಂಬರ | ಕೃಷ್ಣ | ಕೂರ್ಮ | ನಾಲ್ಕು | ವಜ್ರ ಫಲ ಮುದ್ಗರ ವರದ |

| | | | | | | |
|---|---|---|---|---|---|---|
| | ಸುತಾರಾ | ಶ್ವೇತಾಂಬರ | ಗೌರ | ವೃಷಭ | ನಾಲ್ಕು | ವರದ ಅಕ್ಷಸೂತ್ರ ಕಲಶ ಅಂಕುಶ |
| ೧೦. | ಮಾನವೀ | ದಿಗಂಬರ | ಹರಿತ್ | ಸೂಕರ (ಹಂದಿ) | ನಾಲ್ಕು | ಮಾಲಾ ವರದ ಮತ್ಸ್ಯ ಫಲ |
| | ಅಶೋಕಾ | ಶ್ವೇತಾಂಬರ | ಹರಿತ್ | ಪದ್ಮ | ನಾಲ್ಕು | ವರದ ಪಾಶ ಫಲ ಅಂಕುಶ |
| ೧೧. | ಗೌರೀ | ದಿಗಂಬರ | ಸುವರ್ಣ | ಮೃಗ | ನಾಲ್ಕು | ಮುದ್ಗರ ಕಮಲ ಕಲಶ ವರದ |
| | ಮಾನವೀ | ಶ್ವೇತಾಂಬರ | ಗೌರ | ಸಿಂಹ | ನಾಲ್ಕು | ವರದ ಮುದ್ಗರ ಕಲಶ ಅಂಕುಶ |
| ೧೨. | ಗಾಂಧಾರಿ | ದಿಗಂಬರ | ಹರಿತ್ | ಮಕರ | ನಾಲ್ಕು | ಪದ್ಮ ವರದ ಕಮಲ ಮುಸಲ |
| | ಪ್ರಚಂಡಾ | ಶ್ವೇತಾಂಬರ | ಶ್ಯಾಮ | ಅಶ್ವ | ನಾಲ್ಕು | ವರದ ಶಕ್ತಿ ಪುಷ್ಪ ಗದೆ |
| ೧೩. | ವೈರೋಟೀ | ದಿಗಂಬರ | ಹರಿತ್ | ಅಜಗರ(ಹೆಬ್ಬಾವು) | ನಾಲ್ಕು | ಎರಡು ಕೈಗಳಲ್ಲಿ ಸರ್ಪ, ಧನುಷ್, ಬಾಣ |
| | ವಿದಿತಾ | ಶ್ವೇತಾಂಬರ | ಸುವರ್ಣ | ಪದ್ಮ | ನಾಲ್ಕು | ಪಾಶ ಕತ್ತಿ ಅಂಕುಶ ಗುರಾಣೀ |
| ೧೪. | ಅನಂತಮತೀ | ದಿಗಂಬರ | ಸುವರ್ಣ | ಹಂಸ | ನಾಲ್ಕು | ಧನುಷ್ ಬಾಣ ಫಲ ವರದ |
| | ಅಂಕುಶಾ | ಶ್ವೇತಾಂಬರ | ಗೌರ | ಪದ್ಮ | ನಾಲ್ಕು | ಪಾಶ ಕತ್ತಿ ಅಂಕುಶ ಗುರಾಣಿ |
| ೧೫. | ಮಾನಸೀ | ದಿಗಂಬರ | ಪ್ರವಾಳಿ(ಹವಳ) | ವ್ಯಾಘ್ರ | ಆರು | ಕಮಲ ಧನುಷ್ ವರದ ಅಂಕುಶ ಬಾಣ ಕಮಲ |
| | ಕಂದರ್ಪಾ | ಶ್ವೇತಾಂಬರ | ಗೌರ | ಮತ್ಸ್ಯ | ನಾಲ್ಕು | ಉತ್ಪಲ ಅಂಕುಶ ಪದ್ಮ ಅಭಯ |
| ೧೬. | ಮಹಾಮಾನಸೀ | ದಿಗಂಬರ | ಸುವರ್ಣ | ಮಯೂರ | ನಾಲ್ಕು | ಫಲ ಚಕ್ರ ಖಡ್ಗ ವರದ |
| | ನಿರ್ವಾಣೀ | ಶ್ವೇತಾಂಬರ | ಗೌರ | ಪದ್ಮ | ನಾಲ್ಕು | ಪುಸ್ತಕ ಉತ್ಪಲ ಕಮಂಡಲು ಕಮಲ |
| ೧೭. | ಜಯಾ | ದಿಗಂಬರ | ಸುವರ್ಣ | ಸೂಕರ | ನಾಲ್ಕು | ಶಂಕ ಅಸಿ ಚಕ್ರ ವರದ |
| | ವಿಜಯಾ | ಶ್ವೇತಾಂಬರ | ಗೌರ | ಮಯೂರ | ನಾಲ್ಕು | ಬೀಜಪೂರ ಶೂಲ ಮುಷಂಢೀ ಪದ್ಮ |
| ೧೮. | ತಾರಾವತೀ | ದಿಗಂಬರ | ಸುವರ್ಣ | ಹಂಸ | ನಾಲ್ಕು | ಸರ್ಪವಜ್ರ ಮೃಗ ವರದ |
| | ಧಾರಿಣೀ | ಶ್ವೇತಾಂಬರ | ಕೃಷ್ಣ | ಪದ್ಮ | ನಾಲ್ಕು | ಬೀಜಪೂರ ಕಮಲ ಪಾಶ |
| ೧೯. | ಅಪರಾಜಿತಾ | ದಿಗಂಬರ | ಹರಿತ್ | ಅಷ್ಟಾಪದ | ನಾಲ್ಕು | ಗುರಾಣಿ ಕತ್ತಿ ಫಲ ವರದ |
| | ವೈರೋಟ್ಯಾ | ಶ್ವೇತಾಂಬರ | ಕೃಷ್ಣ | ಪದ್ಮ | ನಾಲ್ಕು | ವರದ ಅಕ್ಷಸೂತ್ರ ಬೀಜಪೂರ ಶಕ್ತಿ |
| ೨೦. | ಬಹುರೂಪಿಣೀ | ದಿಗಂಬರ | ಪೀತ | ನಾಗ | ನಾಲ್ಕು | ಗುರಾಣಿ ಕತ್ತಿ ಫಲ ವರದ (ಅಷ್ಟಾಪದ) |
| | ನರದತ್ತಾ | ಶ್ವೇತಾಂಬರ | ಗೌರ | ಭದ್ರಾಸನ | ನಾಲ್ಕು | ವರದ ಅಕ್ಷಸೂತ್ರ ಬೀಜಪೂರ ಶೂಲ |
| ೨೧. | ಚಾಮುಂಡಾ | ದಿಗಂಬರ | ಹರಿತ್ | ಮಕರ | ನಾಲ್ಕು | ಯಷ್ಟಿ ಗುರಾಣಿ ಅಕ್ಷಸೂತ್ರ ಕತ್ತಿ |
| | ಗಾಂಧಾರೀ | ಶ್ವೇತಾಂಬರ | ಶ್ವೇತ | ಹಂಸ | ನಾಲ್ಕು | ವರದ ಖಡ್ಗ ಬೀಜಪೂರ ಕುಂಭ |



| | | | | | | |
|---|---|---|---|---|---|---|
| | | ಶ್ವೇತಾಂಬರ | ಶ್ವೇತ | ಹಂಸ | ನಾಲ್ಕು | ವರದ ಖಡ್ಗ ಶಕುಂತ ಕುಂಭ |
| | | ಶ್ವೇತಾಂಬರ | ಶ್ವೇತ | ಹಂಸ | ನಾಲ್ಕು | ವರದ ಖಡ್ಗ ಬೀಜಾಪೂರ ಬೀಜಾಪೂರ ಆಮ್ರಸ್ತಬಕ, |
| ೨೨. | ಅಮ್ರಾ. | ದಿಗಂಬರ | ಹರಿತ್ | ಸಿಂಹ | ಎರಡು | ಪುತ್ರನಿಗೆ ಶುಭಕೋರುವ ಹಸ್ತ (ಆಮ್ರವೃಕ್ಷದ ನೆರಳಲ್ಲಿ ಎರಡು ಮಕ್ಕಳ ಜೆತೆಗೆ ಇರುತ್ತಾರೆ) |
| | | | | | | ಬೀಜಪೂರ ಪಾಶ ಪುತ್ರ ಅಂಕುಶ |
| | ಅಂಬಿಕಾ | ಶ್ವೇತಾಂಬರ | ಪೀತ | ಸಿಂಹ | ನಾಲ್ಕು | ಆಮ್ರಾಲೀ ಪಾಶ ಪುತ್ರ ಅಂಕುಶ |
| | | ಶ್ವೇತಾಂಬರ | ಪೀತ | ಸಿಂಹ | ನಾಲ್ಕು | ಅಂಕುಶ ಅಕ್ಷಸೂತ್ರ ಕಮಲ ವರದ (ತ್ರಿಫಣಸರ್ಪ |
| ೨೩. | ಪದ್ಮಾತತೀ | ದಿಗಂಬರ | ರಕ್ತ | ಪದ್ಮ | ನಾಲ್ಕು | ಮೌಳೀ) |
| | | | | | | ಪಾಶ ಅಕ್ಷಸೂತ್ರ ಕುಂತ ಅರ್ಧಚಂದ್ರ ಗದೆ ಮುಸಲ |
| | | ದಿಗಂಬರ | ರಕ್ತ | ಪದ್ಮ | ಆರು | ಯಥೋಚಿತ |
| | | ದಿಗಂಬರ | ರಕ್ತ | ಪದ್ಮ | ಎಂಟು | ವಿಭಿನ್ನ |
| | | ದಿಗಂಬರ | ರಕ್ತ | ಪದ್ಮ | ಹದಿನಾರು | ಪದ್ಮ ಪಾಶ ಫಲ ಅಂಕುಶ |
| | | ಶ್ವೇತಾಂಬರ | ಸುವರ್ಣ | ಕುಕ್ಕುಟ ಸರ್ಪ | ನಾಲ್ಕು | ವರದ ಪುಸ್ತಕ |
| ೨೪. | ಸಿದ್ದಯಿಕಾ | ದಿಗಂಬರ | ಸುವರ್ಣ | ಭದ್ರಾಸನ/ಸಿಂಹ | ಎರಡು | ಪುಸ್ತಕ ಅಭಯ ಬೀಜಾಪೂರ ವೀಣೆ |
| | | ಶ್ವೇತಾಂಬರ | ಹರಿತ್ | ಸಿಂಹ | ನಾಲ್ಕು | ಪುಸ್ತಕ ಅಭಯ ಪಾಶ ಕಮಲ |
| | | ಶ್ವೇತಾಂಬರ | ಹರಿತ್ | ಗಜ | ನಾಲ್ಕು | |
| | | | | ಸಂಕೀರ್ಣ | | |
| ೦೧. | ಕ್ಷೇತ್ರಪಾಲ | ದಿಗಂಬರ | ಶ್ಯಾಮ | ಶ್ವಾನ | ನಾಲ್ಕು | ಕತ್ತಿ ಕಪ್ಪು ನಾಯಿ ಗದೆ(ನಾಗಾಲಂಕೃತ ತ್ರಿನೇತ್ರ) |
| | | ಶ್ವೇತಾಂಬರ | ವಿಭಿನ್ನ | ಶ್ವಾನ | ಇಪ್ಪತ್ತು | ವಿಭಿನ್ನ |
| | | ಶ್ವೇತಾಂಬರ | ಶ್ಯಾಮ | ಶ್ವಾನ | ಆರು | ಮುದ್ಗರ ಪಾಶ ಡಮರು ಶ್ವಾನ ಅಂಕುಶ ಖಡ್ಗ |
| | | ಶ್ವೇತಾಂಬರ | ಶ್ಯಾಮ | ಶ್ವಾನ | ಆರು | ದಕ್ಕೆ ಶೂಲ ಮಾಲೆ ಪಾಶ ಅಂಕುಶ ಖಡ್ಗ |
| ೦೨. | ಅನಾವೃತ ಯಕ್ಷ | ದಿಗಂಬರ | ಕೃಷ್ಣ | ಗರುಡ | ನಾಲ್ಕು | ಶಂಖ ಚಕ್ರ ಕಮಂಡಲು ಅಕ್ಷಸೂತ್ರ |
| ೦೩. | ಸರ್ವಾಹ್ಣ ಯಕ್ಷ | ದಿಗಂಬರ | ಶ್ಯಾಮ | ಶ್ವೇತಗಜ | ನಾಲ್ಕು | (ಎರಡಕ್ಕೆ) ಬದ್ಧಾಂಜಲಿ(೨ಕ್ಕೆ) ದರ್ಂಚಕ್ರ ಹಿಡಿದಿವೆ. (ಪುಸ್ತಕದ ಮೇಲೆ ಧರ್ಮಚಕ್ರ) |
| ೦೪. | ಬ್ರಹ್ಮ ಶಾಂತಿ ಯಕ್ಷ | ಶ್ವೇತಾಂಬರ | ಪಿಂಗ | ಭದ್ರಾಸನ | ನಾಲ್ಕು | ಅಕ್ಷಸೂತ್ರ ದಂಡ ಕಮಂಡಲ ಛತ್ರ ಪಾದುಕಾರೂಢ |



## ೪. ಶಾಸ್ತ್ರಕೃತಿಗಳಲ್ಲಿ ಉಲ್ಲೇಖಿತವಾಗಿರುವ ೨೪ ಯಕ್ಷರ ಹೆಸರುಗಳು

| ಕ್ರಸಂ | ತಿಲೋಯ ಪಣ್ಣತ್ತಿ | ಪ್ರತಿಷ್ಠಾಸಾರ ಸಂಗ್ರಹ | ಅಭಿಧಾನ ಚಿಂತಾಮಣಿ | ಅಪರಾಜಿತ ವೃಚ್ಛಾ | ತೀರ್ಥಂಕರ |
|---|---|---|---|---|---|
| ೦೧. | ಗೋವಧನ | ಗೋಮುಖ | ಗೋಮುಖ | ಗೋಮುಖ | ಋಷಭ |
| ೦೨. | ಮಹಾಯಕ್ಷ | ಮಹಾಯಕ್ಷ | ಮಹಾಯಕ್ಷ | ಮಹಾಯಕ್ಷ | ಅಜಿತ |
| ೦೩. | ತ್ರಿಮುಖ | ತ್ರಿಮುಖ | ತ್ರಿಮುಖ | ತ್ರಿಮುಖ | ಸಂಭವ |
| ೦೪. | ಯಕ್ಷೇಶ್ವರ(ಈಶ್ವರ) | ಯಕ್ಷೇಶ್ವರ | ಯಕ್ಷನಾಯಕ | ಚತುರಾನನ | ಅಭಿನಂದನ |
| ೦೫. | ತುಂಬರ | ತುಂಬರ | ತುಂಬರ | ತುಂಬರ | ಸುಮತಿ |
| ೦೬. | ಮಾತಂಗ | ಪುಷ್ಪ | ಸುಮುಂ | ಕುಸುಮ | ಪದ್ಮಪ್ರಭ |
| ೦೭. | ವಿಜಯ | ಮಾತಂಗ | ಮಾತಂಗ | ಮಾತಂಗ | ಸುಪಾರ್ಶ್ವ |
| ೦೮. | ಅಜಿತ | ಶ್ಯಾಮ | ವಿಜಯ | ವಿಜಯ | ಚಂದ್ರಪ್ರಭ |
| ೦೯. | ಬ್ರಹ್ಮ | ಅಜಿತ | ಅಜಿತ | ಜಯ | ಪುಷ್ಪದಂತ |
| ೧೦. | ಬ್ರಹ್ಮೇಶ್ವರ | ಬ್ರಹ್ಮ | ಬ್ರಹ್ಮ | ಬ್ರಹ್ಮ | ಶೀತಲ |
| ೧೧. | ಕುಮಾರ(ಯಕ್ಷರಾಜ) | ಈಶ್ವರ | ಯಕ್ಷೇಶ್ವರ | ಕಿಂನರೇಶ | ಶ್ರೇಯಾಂಸ |
| ೧೨. | ಷಣ್ಮುಖ | ಕುಮಾರ | ಕುಮಾರ | ಕುಮಾರ | ವಾಸುಪೂಜ್ಯ |
| ೧೩. | ಪಾತಾಲ | ಚತುರ್ಮುಖ | ಷಣ್ಮುಖ | ಷಣ್ಮುಖ | ವಿಮಲ |
| ೧೪. | ಕಿಂನರ | ಪಾತಾಲ | ಪಾತಾಲ | ಪಾತಾಲ | ಅನಂತ |
| ೧೫. | ಕಿಂಪುರುಷ | ಕಿಂನರ | ಕಿಂನರ | ಕಿಂನರ | ಧರ್ಮ |
| ೧೬. | ಗರುಡ | ಗರುಡ | ಗರುಡ | ಗರುಡ | ಶಾಂತಿ |
| ೧೭. | ಗಂಧರ್ವ (ಗಂಧರ್ವಯಕ್ಷೇಶ್ವರ) | ಗಂಧರ್ವ | ಗಂಧರ್ವ | ಗಂಧರ್ವ | ಕುಂಥು |
| ೧೮. | ಕುಬೇರ | ಬೇಂದ್ರ | ಯಕ್ಷೇದ್ರ | ಯಕ್ಷೇಶ | ಅರ |
| ೧೯. | ವರುಣ | ಕುಬೇರ | ಕುಬೇರ | ಕುಬೇರ | ಮಲ್ಲಿ |
| ೨೦. | ಭೃಕುಟಿ | ವರುಣ | ವರುಣ | ವರುಣ | ಮುನಿಸುವ್ರತ |
| ೨೧. | ಗೋಮೇಧ | ಭೃಕುಟಿ | ಭೃಕುಟಿ | ಭೃಕುಟಿ | ನಮಿ |
| ೨೨. | ಪಾರ್ಶ್ವ | ಗೋಮೇದ | ಗೋಮೇದ | ಗೋಮೇದ | ನೇಮಿ |
| ೨೩. | ಮಾತಂಗ | ಧರಣ | ಪಾರ್ಶ್ವ | ಪಾರ್ಶ್ವ | ಪಾರ್ಶ್ವ |
| ೨೪. | ಗುಹ್ಯಕ | ಮಾತಂಗ | ಮಾತಂಗ | ಮಾತಂಗ | ಮಹಾವೀರ |



## ೫. ಶಾಸ್ತ್ರನ ಕೃತಿಗಳಲ್ಲಿ ೨೪ ಯಕ್ಷಿಯರ ಹೆಸರು

| ಕ್ರಸಂ. | ತಿಲೋಯಪಣ್ಣತ್ತಿ | ಪ್ರತಿಷ್ಠಾಸಾರ ಸಂಗ್ರಹ | ಅಭಿಧಾನ ಚಿಂತಾಮಣಿ | ಅಪರಾಜಿತ ವೃಚ್ಛಾ | ತೀರ್ಥಂಕರರು |
|---|---|---|---|---|---|
| ೦೧. | ಚಕ್ರೇಶ್ವರೀ | ಚಕ್ರೇಶ್ವರೀ | ಚಕ್ರೇಶ್ವರೀ | ಚಕ್ರೇಶ್ವರೀ(ಚಕ್ರ) | ಋಷಬ |
| ೦೨. | ರೋಹಿಣೀ (ಅಜಿತಾ) | ರೋಹಿಣೀ | ಅಜಿತಬಲಾ | ರೋಹಿಣೀ | ಅಜಿತ |
| ೦೩. | ಪ್ರಜ್ಞಪ್ತಿ | ಪ್ರಜ್ಞಪ್ತಿ | ದುರಿತಾರ | ಪ್ರಜ್ಞಾ (ನಮಾ) | ಸಂಭವ |
| ೦೪. | ವಜ್ರಶೃಂಖಲ | ವಜ್ರಶೃಂಖಲಾ | ಕಾಲಿಕಾ | ವಜ್ರಶೃಂಖಲಾ | ಅಭಿನಂದನ |
| ೦೫. | ವಜ್ರಾಂಕುಶ | ಪುರುಷ ದತ್ತಾ | ವಜ್ರಶೃಂಕಲಾ | ನರದತ್ತಾ | ಸುಮತಿ |
| ೦೬. | ಅಪ್ರತಿಚಕ್ರೇಶ್ವರ | ಮನೋವೇಗಾ | ಶ್ಯಾಮಾ | ಮನೋವೇಗಾ | ಪದ್ಮಪ್ರಭ |
| ೦೭. | ಪುರುಷದತ್ತಾ | ಕಾಲೀ | ಶಾಂತಾ | ಕಾಲಿಕಾ | ಸುಪಾರ್ಶ್ವ |
| ೦೮. | ಮನೋವೇಗಾ | ಜ್ವಾಲಿನೀ | ಭೃಕುಟಿ | ಜ್ವಾಲಾಮಾಲಿಕಾ | ಚಂದ್ರಪ್ರಭ |
| ೦೯. | ಕಾಲೀ | ಮಹಾಕಾಲೀ | ಸುತಾರಕಾ | ಮಹಾಕಾಲೀ | ಪುಷ್ಪದಂತ |
| ೧೦ | ಮಹಾಕಾಲಿನೀ | ಮಾನವೀ | ಅಶೋಕಾ | ಮಾನವೀ | ಶೀತಲ |
| ೧೧. | ಮಹಾಕಾಲೀ | ಗೌರಿ | ಮಾನವೀ | ಗೌರೀ | ಶ್ರೇಯಾಂಸ |
| ೧೨. | ಗೌರೀ | ಗಾಂಧಾರೀ | ಚಂಡಾ | ಗಾಂಧಾರಿಕಾ | ವಾಸುಪೂಜ್ಯ |
| ೧೩. | ಗಾಂಧಾರೀ | ವೈರೋಟೀ | ವಿದಿತಾ | ವಿರಾಟಾ | ವಿಮಲ |
| ೧೪. | ವೈರೋಟಿ | ಅನಂತಮತೀ | ಅಂಕುಶ | ತಾರಿಕಾ | ಅನಂತ |
| ೧೫. | ಅನಂತಮತೀ | ಮಾನಸೀ | ಕಂದರ್ಪಾ | ಅನಂತಗತಿ | ಧರ್ಮ |
| ೧೬. | ಮಾನಸೀ | ಮಹಾಮಾನಸೀ | ನಿರ್ವಾಣೀ | ಮಾನಸೀ | ಶಾಂತಿ |
| ೧೭. | ಮಹಾಮಾನಸೀ | ಜಯದೇವೀ | ಬಲಾ | ಮಹಾಮಾನಸೀ | ಕುಂಥು |
| ೧೮. | ಜಯಾ | ತಾರಾವತೀ | ಧಾರಿಣೀ | ಜಯಾ | ಅರ |
| ೧೯. | ವಿಜಯಾ | ಅಪರಾಜಿತಾ | ಧರಣಪ್ರೀಯಾ | ವಿಜಯಾ | ಮಲ್ಲಿ |
| ೨೦. | ಅಪರಾಜಿತ | ಬಹುರೂಪಿಣೀ | ನರದತ್ತಾ | ಅಪರಾಜಿತ | ಮುನಿಸುವ್ರತ |
| ೨೧. | ಬಹುರೂಪಿಣಿ | ಚಾಮುಂಡಾ | ಗಾಂಧಾರೀ | ಬಹುರೂಪಾ | ನಮಿ |
| ೨೨. | ಕೂಷ್ಮಾಂಡೀ(ಅಂಬಾ) | ಆಮ್ರಾ(ಗೌರಿ) | ಅಂಬಿಕಾ (ತಾರಾ) | ಅಂಬಿಕಾ(ಅಂಬಿಲಾ) | ನೇಮಿ |
| ೨೩. | ಪದ್ಮಾ | ಪದ್ಮಾವತೀ | ಪದ್ಮಾವತೀ | ಪದ್ಮಾವತೀ | ಪಾರ್ಶ್ವ |
| ೨೪. | ಸಿದ್ಧಯಿಣಿ | ಸಿದ್ಧಯಿಕಾ | ಸಿದ್ಧಯಿಕಾ | ಸಿದ್ಧಯಿಕಾ | ಮಹಾವೀರ |

## ೦೬. ಇಪ್ಪತ್ನಾನಾಲ್ಕು ತೀರ್ಥಂಕರರು

| ಕ್ರಸಂ | ತೀರ್ಥಂಕರರ ಹೆಸರು | ಮೈಬಣ್ಣ | ಲಾಂಛನ |
|---|---|---|---|
| ೦೧. | ಋಷಭ(ಅಧಿನಾಥ) | ಸುವರ್ಣವರ್ಣ | ಎತ್ತು |
| ೦೨. | ಅಜಿತನಾಥ | ಸುವರ್ಣವರ್ಣ | ಆನೆ |
| ೦೩ | ಸಂಭವನಾಥ | ಸುವರ್ಣವರ್ಣ | ಕುದುರೆ |
| ೦೪. | ಅಭವನಾಥ | ಸುವರ್ಣವರ್ಣ | ಮಂಗ |
| ೦೫. | ಸುಮತಿನಾಥ | ಸುವರ್ಣವರ್ಣ | ಕ್ರೌಂಚ |
| ೦೬. | ಪದ್ಮನಾಥ | ಕೆಂಪು | ಕೆಂಪು ಕಮಲ |
| ೦೭. | ಸುಮಾರ್ಶ್ವನಾಥ | ಸುವರ್ಣವರ್ಣ(ಹಸಿರು) | ಸ್ವಸ್ತಿಕ |
| ೦೮. | ಚಂದ್ರಪ್ರಭನಾಥ | ಬಿಳಿಯ ಬಣ್ಣ | ಅರ್ಧಚಂದ್ರ |
| ೦೯. | ಪುಷ್ಪದಂತ (ಸುವಿಧಿನಾಥ) | ಬಿಳಿಯ ಬಣ್ಣ | ಮಕರ (ಮೊಸಳೆ) |
| ೧೦. | ಶೀತಲನಾಥ | ಸುವರ್ಣವರ್ಣ | ಕಲ್ಪವೃಕ್ಷ |
| ೧೧. | ಶ್ರೇಯಾಂಸನಾಥ | ಸುವರ್ಣವರ್ಣ | ಶ್ವೇ.ಗರುಡ (ಗಂಡಕ) |
| ೧೨. | ವಾಸುಪೂಜ್ಯನಾಥ | ಕೆಂಪು | ಕೋಣ |
| ೧೩. | ವಿಮಲನಾಥ | ಸುವರ್ಣವರ್ಣ | ಕಾಡುಹಂದಿ |
| ೧೪. | ಅನಂತನಾಥ | ಸುವರ್ಣವರ್ಣ | ಏದ(ಕರಡಿ) |
| ೧೫. | ಧರ್ಮನಾಥ | ಸುವರ್ಣವರ್ಣ | ವಜ್ರದಂಡ |
| ೧೬. | ಶಾಂತಿನಾಥ | ಸುವರ್ಣವರ್ಣ | ಜಿಗರೆ |
| ೧೭. | ಕುಂಥುನಾಥ | ಸುವರ್ಣವರ್ಣ | ಕುರಿ |
| ೧೮. | ಅರನಾಥ | ಸುವರ್ಣವರ್ಣ | ಮೀನ (ಶ್ವೇ.ನಂದ್ಯಾವರ್ತ) |
| ೧೯. | ಮಲ್ಲಿನಾಥ (ಶ್ವೇ.ಸ್ತ್ರೀ) | ಸುವರ್ಣವರ್ಣ | ಕುಂಭ |
| ೨೦. | ಮುನಿಸುವ್ರತ | ಕಪ್ಪು | ಆವಿ |
| ೨೧. | ನಮಿನಾಥ | ಸುವರ್ಣವರ್ಣ | ನೀಲಕಮಲ<br>ಶ್ವೇ.ಅಶೋಕ ವೃಕ್ಷ |
| ೨೨. | ನೇಮಿನಾಥ | ಕಪ್ಪು ಕೆಂಪು ಕೂಡಿದ ಕಪ್ಪು | ಶಂಖ |
| ೨೩. | ಪಾರ್ಶ್ವನಾಥ | ನೀಲಿ | ಸರ್ಪ |
| ೨೪. | ಮಹಾವೀರ | ಸುವರ್ಣವರ್ಣ | ಸಿಂಹ |

# ಕರ್ನಾಟಕದ ಜೈನ ಚಿತ್ರಕಲೆಯ ನೆಲೆಗಳು

ಉತ್ತರ



ಬೀದರ್
ಗುಲಬರ್ಗಾ
ಕೊಲ್ಲಾಪುರ
ಬಿಜಾಪುರ
ಬೆಳಗಾವಿ
ಬಾಗಲಕೋಟ
ರಾಯಚೂರು
ಕೊಪ್ಪಳ
ಧಾರವಾಡ
ಗದಗ
ಬಳ್ಳಾರಿ
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಚಿತ್ರದುರ್ಗ
ಶಿವಮೊಗ್ಗ
ಕೋಲಾರ
ಚಿಕ್ಕಮಗಳೂರು
ತುಮಕೂರು
ಉಡುಪಿ
ಬೆಂಗಳೂರು ನಗರ
ಹಾಸನ
ದಕ್ಷಿಣ ಕನ್ನಡ
ಬೆಂಗಳೂರು ಗ್ರಾಮೀಣ
ಮಂಡ್ಯ
ಕೊಡಗು
ಮೈಸೂರು
ಚಾಮರಾಜನಗರ



## ಚಿತ್ರ ಋಣ-ನೆರವು

೦೧. **ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ**
ಡಾ.ಬಿ.ಕೆ. ಹೀರೆಮಠ
ವೀರಶೈವ ಅಧ್ಯಯನ ವೇದಿಕೆ
ಶ್ರೀ ಹೀರೆಮಠ, ಕಸಬಾ ಜಂಬಗಿ ತಾ.ಮುದೋಳ ಜಿ.ವಿಜಾಪೂರ

೦೨. **ಕರ್ನಾಟಕ ಭಿತ್ತಿಚಿತ್ರ ಪರಂಪರೆ:**
ಡಾ.ಅ.ಲ. ನರಸಿಂಹನ್
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು.

೦೩. **ಹಂಪ. ನಾಗರಾಜಯ್ಯ**
ಚಂದ್ರ ಸಾಗರವರ್ಣಿ ಗ್ರಂಥಮಾಲೆ
೧೦೭೯.೫ ವಿಭಾಗ, ರಾಜಾಜಿನಗರ
ಬೆಂಗಳೂರು- ೫೬೦೦೧೦

೦೪. **ಹಸ್ತಪ್ರತಿ ವಿಭಾಗ**
ಶ್ರುತ ಕೇವಲಿ, ಎಜುಕೇಶನ್ ಟ್ರಸ್ಟ್ (ರಿ)
ಶ್ರೀ ಧವಲ, ತೀರ್ಥಂ
ಶ್ರೀಕ್ಷೇತ್ರ, ಶ್ರವಣಬೆಳಗೊಳ

೦೫. **Bahubali Of Jainbadri**
(Shravanabflagola) and
Other Jain Shrines Of Deccan
S.d.s.i Managing Committes
Jain Mutt Shravanabflagola

06. **Jain Art**
(Ananda .K.Coomaraswamy
Munshiram Mahehoral
Publishers Pvt. Ltd
New Delhi

07. **Masterpieces Of Painting**
( Sargy Doshi)
Marg publication
Bombay

08. Sri. Jitendra Kumar
Paniditaratna. Shanthirajashatyy trust
Shanti- 369 42nd Cross, 8th Block Jayanagar
Bangalore - 560070



## ಗ್ರಂಥ ಸೂಚಿ


೦೧. **ಉತ್ತರ ಕನಾಟಕದ ಭಿತ್ತಿ ಚಿತ್ರಕಲೆ ಒಂದು ಅಧ್ಯಯನ** — ಡಾ. ಯಾದಪ್ಪ ಪರದೇಶಿ
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ
ಕನ್ನಡ ವಿಶ್ವ ವಿದ್ಯಾಲಯ ಹಂಪಿ
೨೦೦೧

೦೨. **ಕರ್ನಾಟಕದ ಭಿತ್ತಿಚಿತ್ರ ಪರಂಪರೆ** — ಡಾ. ಅ.ಲ ನರಸಿಂಹನ್
ಕರ್ನಾಟಕ ಲಲಿತ ಕಲಾ ಅಕಾಡೆಮಿ ಬೆಂಗಳೂರು.
೧೯೯೮

೦೩. **ಕರ್ನಾಟಕದಲ್ಲಿ ಜೈನಧರ್ಮ** — ಕೆ .ಶಾರದಾ
ಪ್ರಸಾರಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ
೨೦೦೬

೦೪. **ಕರ್ನಾಟಕದ ವಾಸ್ತು ಶಿಲ್ಪ ಮತ್ತು ಚಿತ್ರಕಲೆ** — ಡಾ. ಸಿಂಧಗಿ ರಾಜಶೇಖರ
ಸುಜಾತ ಪಬ್ಲಿಕೇಶನ್ಸ್, ಧಾರವಾಡ.
೧೯೯೮

೦೫. **ಕರ್ನಾಟಕ ಹಸ್ತಪ್ರತಿ ಚಿತ್ರಕಲೆ–ಒಂದು ಅಧ್ಯಯನ** — ಡಾ. ಎಚ್.ಎನ್. ಚಿತ್ರಗಾರ
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ
ಕನ್ನಡ ವಿಶ್ವ ವಿದ್ಯಾಲಯ ಹಂಪಿ
೨೦೦೫

೦೬. **ಕರ್ನಾಟಕದ ಜನಪದ ಚಿತ್ರಕಲೆ – ಒಂದು ಅಧ್ಯಯನ** — ಡಾ. ಎಸ್ ಸಿ. ಪಾಟೀಲ
ವೀರಶೈವ ಅಧ್ಯಯನ ಸಂಸ್ಥೆ ಗದಗ
೧೯೯೩

೦೭. **ಕರ್ನಾಟಕದ ಭಿತ್ತಿ ಚಿತ್ರಗಳು** — ಬಿ.ವಿ.ಕೆ ಶಾಸ್ತ್ರಿ
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು
೧೯೮೩

೦೮. **ಕರ್ನಾಟಕದಲ್ಲಿ ಚಿತ್ರಕಲೆ** — ಶಿವರಾಮ ಕಾರಂತ
ಪ್ರಸಾರಂಗ ಮೈಸೂರು ವಿ.ವಿ. ಮೈಸೂರು
೧೯೭೮

೦೯. **ಕರ್ನಾಟಕದಲ್ಲಿ ಅರಸು ಮನೆತನಗಳು** ಸಂಪುಟ ಒಂದು — ಲಕ್ಷ್ಮೀನಾರಯಣರಾವ್ ಮತ್ತು ಎಸ್. ಆರ್ ಪಂಚಮುಖಿ
ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿ
ಧಾರವಾಡ–೧೯೪೬



೧೦. **ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ** ಕೆ.ವಿ. ಕಾಳೆ
ಪ್ರಸಾರಂಗ ಕನ್ನಡವಿಶ್ವ ವಿದ್ಯಾಲಯ ಹಂಪಿ
೨೦೦೦

೧೧. **ಕರಕುಶಲ ಕಲೆಗಳು** (ಸಂ) ಡಾ. ಕರಿಗೌಡ ಬೀಚನಹಳ್ಳಿ
ಕನ್ನಡ ವಿಶ್ವವಿದ್ಯಾಲಯ ಹಂಪಿ
೨೦೦೦

೧೨. **ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ** ಡಾ. ಬಿ.ಕೆ. ಹಿರೇಮಠ
ವೀರಶೈವ ಅಧ್ಯಯನ ವೇದಿಕೆ ಬಿಜಾಪುರ
೧೯೯೨

೧೩. **ಕರ್ನಾಟಕದ ಸಂಸ್ಕೃತಿ ಸಮೀಕ್ಷೆ** ಡಾ. ಎಚ್. ತಿಪ್ಪೆರುದ್ರಸ್ವಾಮಿ
ಡಿ.ವಿ.ಕೆ. ಮೂರ್ತಿ ಪ್ರಕಾಶಕರು ಮೈಸೂರು
೨೦೦೧

೧೪. **ಕರ್ನಾಟಕ ಭಿತ್ತಿ ಚಿತ್ರಗಳು** ಬಿ.ಬಿ.ಕೆ.ಶಾಸ್ತ್ರಿ
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು
೧೯೮೩

೧೫. **ಚಂದ್ರಪ್ರಭ** (ಸಂ) ಪ್ರೋ. ಎಸ್ ಪ್ರಭಾಕರ
ಚಂದ್ರನಾಥಸ್ವಾಮಿ ಬಸದಿ
ಧಾಮಸಂಪ್ರೋಕ್ಷಣ ಪೂರ್ವಕ ಪ್ರತಿಷ್ಠಾಮಹೋತ್ಸವ ಸಮಿತಿ
ಶ್ರೀಕ್ಷೇತ್ರ ಧರ್ಮಸ್ಥಳ
೨೦೦೧

೧೬. **ಚಿತ್ರಕಲಾ ಪ್ರಪಂಚ** (ಸಂ) ಪಿ.ಆರ್ ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು
೧೯೯೩

೧೭. **ಜೈನ ಧರ್ಮ** ಮಿರ್ಜಿ ಅಣ್ಣಾರಾಯ
ಶಾಂತಿಸೇವಾ ಸದನ ಸೇಡಬಾಳ
೧೯೫೨

೧೮. **ಜೈನ ಕ್ಷೇತ್ರಗಳ ಐತಿಹ್ಯ** ಪಿ.ಜಿ.ಕೆಂಪಣ್ಣವರ
ಶ್ರೀ ಬಿ.ಬಿ.ಕರ್ಣವಾಡಿ "ಬೀಮರಾಜ ನಿಲಯ"
ವಿದ್ಯಾನಗರ, ಹಾರೋಗೇರಿ ರಾಯಭಾಗ
೧೯೯೦



೧೯. ಜೈನಧರ್ಮ (ಮೂಲ) ಪಂಡಿತ ಕೈಲಾಸ್ ಚಂದ್ರ ಶಾಸ್ತ್ರಿ
ಜೈನ ಸಂಸ್ಕೃತಿ ಸಂರಕ್ಷಕ ಸಂಘ ಸೋಲ್ಲಾಪುರ (ಅನು) ಕೆ. ಭುಜಬಲಶಾಸ್ತ್ರಿ
೧೯೬೯

೨೦. ಜಾಗತಿಕ ಚಿತ್ರಕಲೆ ಬಿ.ಪಿ.ಬಾಯರಿ
ಪ್ರತಿಭಾ ಗ್ರಂಥಮಾಲೆ ಧಾರವಾಡ
೧೯೯೫

೨೧. ತಾಳೆಗೇರಿ ಗ್ರಂಥಗಳಲ್ಲಿ ಚಿತ್ರವಿನ್ಯಾಸ ವ್ಹಿ.ಟಿ.ಎಸ್. ರಾವ್
ಮಣಿಹ (ಫ.ಗು.ಹಳಹಟ್ಟಿ ಸ್ಮರಣ ಸಂಪುಟ)
೧೮೮೨

೨೨. ದಕ್ಷಿಣ ಕನ್ನಡ ಜಿಲ್ಲೆಯ ಜೈನಧರ್ಮ ಪರಂಪರೆ
ಮತ್ತು ವಿಶಿಷ್ಟ ಸಂಪ್ರದಾಯಗಳು ಡಾ.ಎಸ್.ಡಿ.ಶೆಟ್ಟಿ
ಶ್ರೀಧರ್ಮಸ್ಥಳ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆ ಉಜಿರೆ
೨೦೦೦

೨೩. ಧರ್ಮ (ವಿಶ್ವಕೋಶ ) (ಸಂ) ರಹಮತ್ ತರೀಕೆರೆ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ
೨೦೦೦

೨೪. ದೃಶ್ಯಕಲಾ ಎನ್. ಮರಿಶಾಮಚಾರ್
ಸಿ.ಎಂ.ಎನ್ ಪ್ರಕಾಶನ ಬೆಂಗಳೂರು
೧೯೮೯

೨೫. ನಿಜದ ನೆಲೆ (ಸಂ) ಡಾ.ಎಸ್.ಸಿ.ಪಾಟೀಲ
ಡಾ.ಬಿ.ಕೆ ಹಿರೇಮಠ ಅಭಿನಂದನಾ ಗ್ರಂಥ ಸತ್ಯಾನಂದ ಪಾತ್ರೋಟಿ
ಬಸವೇಶ್ವರ ವಿದ್ಯಾವರ್ಧಕ ಸಂಘ ಬಾಗಲಕೋಟೆ
೨೦೦೩

೨೬. ಪ್ರಾಚೀನ ಲೇಖನ ಸಾಮಗ್ರಿಗಳು (ಮೂಲ) ಡಾ.ಅಲ್ಬರ್ಟನ್ ಗೌರ್
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ (ಅನು) ಡಾ. ಶ್ರೀನಿವಾಸ
೨೦೦೩ ಹಾವನೂರು
ಡಾ.ಲಕ್ಷ್ಮೀನಾರಾಯಣ ಆರೋರ

೨೭. ಪ್ರಾಚೀನ ಭಾರತದ ಭಿತ್ತಿ ಚಿತ್ರಗಳು ಪಿ.ಆರ್.ತಿಪ್ಪೆಸ್ವಾಮಿ
ಚಿತ್ರಾಕ್ಷಿ ಸ್ಕೂಲ್ ಆಫ್ ಆರ್ಟ
ಧಾರವಾಡ ವಜ್ರಮಹೋತ್ಸವ ಸಂಚಿಕೆ
೧೯೯೫



೨೮. **ಬೆಳೆದು ಬಂದ ಭಾರತದ ಚಿತ್ರಕಲೆ** ಪಿ.ಆರ್.ತಿಪ್ಪೆಸ್ವಾಮಿ
ಕಲಾಕ್ಷೇತ್ರ ಮೈಸೂರು
೧೯೭೨

೨೯. **ಬಾಹುಬಲಿ-ರೂಪಸ್ವರೂಪ ವಿಶ್ವಕೋಶ.** ಪ್ರೋ. ಹಂಪ ನಾಗರಾಜಯ್ಯ.
ಸಿ.ಜಿ. ಪಬ್ಲಿಕೇಷನ್ಸ್ ಬೆಂಗಳೂರು
೨೦೦೫

೩೦. **ಬುಜರಕೆಂಚನಹಳ್ಳಿಯ ಭಿತ್ತಿ ಚಿತ್ರಕಲೆ ಒಂದು ಅಧ್ಯಯನ** ಡಾ.ಎಸ್.ಸಿ. ಪಾಟೀಲ
ಅಪ್ರಕಟಿತ ಕಿರು ಸಂಶೋಧನ ಪ್ರಬಂಧ ಕನ್ನಡ ವಿ.ವಿ.ಹಂಪಿ.
೨೦೦೬

೩೧. **ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ** (ಮೂಲ) ಡಾ. ಹೀರಾಲಾಲ್
ಜೈನಜೈನ ಸಂಸ್ಕೃತಿ ಸಂಸರಕ್ಷಿತ ಸಂಘ ಸೊಲ್ಲಾಪುರ (ಅನು) ಮಿರ್ಜಿ ಅಣ್ಣಾರಾಯ
ಲಾಲಾ ಚಂದ್ರ ಹೀರಾ ಚಂದ ದೇಶಿ, ಸೀಡೆಬಾಳೆ
೧೯೭೧

೩೨. **ಭಾರತೀಯ ಚಿತ್ರಕಲೆ ಸಂಕ್ಷಿಪ್ತ ಪರಿಚಯ** ಎಸ್. ಎಲ್. ಶಿರಹಟ್ಟಿ.
ವಿಜಯಕಲಾಮಂದಿರ ಗದಗ
೧೯೭೨

೩೩. **ಭಾರತೀಯ ಚಿತ್ರಕಲೆ** ಶಿವರಾಮ ಕಾರಂತ
ಕನ್ನಡ ಪುಸ್ತಕ ಪ್ರಧಿಖಾರ ಬೆಂಗಳೂರು
೧೯೯೮

೩೪. **ಭಾರತೀಯ ಚಿತ್ರಕಲೆ** ಬಿ.ಪಿ.ಬಾಯರಿ
ಪ್ರತಿಭಾ ಗ್ರಂಥಮಾಲೆ ಧಾರವಾಡ
೧೯೭೨

೩೫. **ಮೂಡುಬಿದರೆಯ ವೈಶಿಷ್ಟ್ಯ** ಪ್ರೋ. ಎಸ್ ಪಿ ಅಜಿತ್ ಪ್ರಸಾದ್.
ಪ್ರಸಾರಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ
೨೦೦೨

೩೬. **ಮಲೆನಾಡಿನ ಜೈನ ಅರಸೋತ್ತಿಗೆ ಒಂದು ಅಧ್ಯಯನ** ಬಿ.ಎಸ್. ರಾಮಭಟ್ಟ
ಅಪ್ರಕಟಿತ ಡಿ.ಲಿಟ್ ಮಹಾಪ್ರಬಂಧ
ಕನ್ನಡ ವಿಶ್ವ ವಿದ್ಯಾಲಯ ಹಂಪಿ
೧೯೯೫




೩೭. **ಯಕ್ಷ ಯಕ್ಷಿಯರು** — ಹಂಪಾ ನಾಗರಾಜಯ್ಯ
ಚಂದ್ರಸಾಗರ ವರ್ಣಿ ಸ್ಮರಕ ಗ್ರಂಥಮಾಲೆ ಬೆಂಗಳೂರು
೧೯೭೬

೩೮. **ವರ್ಣ ಸಂಚಯ** — ಡಾ.ಎಸ್ ಸಿ ಪಾಟೀಲ
ವಿಜಯ ಚಿತ್ರಕಲಾ ಮಹಾವಿದ್ಯಾಲಯ ಇಲಕಲ್
೨೦೦೧

೩೯. **ವಿಜಯನಗರದ ಗಾರೆಶಿಲ್ಪ** — ಡಾ. ಸಿ.ಮಹಾದೇವ
ಪ್ರಸಾರಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ
೨೦೦೦

೪೦. **ಶಿಲ್ಪಕಲಾ ಪ್ರಪಂಚ** — (ಸಂ) ಪಿ.ಆರ್ ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು
೧೯೯೪

೪೧. **ಶ್ರವಣ ಬೆಳಗೋಳದ ಒಂದು ಸಮಿಕ್ಷೆ** — ಡಾ. ಜಿ.ಎಸ್ ಶಿವರುದ್ರಪ್ಪ
ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು
೧೯೮೩

೪೨. **ಶ್ರವಣ ಬೆಳಗೋಳದ ಬಸದಿಗಳ ವಾಸ್ತು ಶಿಲ್ಪ** — ಡಾ. ದೇವರಕೊಡ್ಡಾರೆಡ್ಡಿ
ಚಂದ್ರಗುಪ್ತ ಗ್ರಂಥಮಾಲೆ ಶ್ರವಣಬೆಳಗೋಳ
೧೯೯೩

೪೩. **ಸಂಶೋಧನ ಚತುರ್ಮುಖ** — ಡಾ. ಬಿ.ವ್ಹಿ ಶಿರೂರು
ವಿದ್ಯಾನಿಧಿ ಪ್ರಕಾಶನ
೨೦೦೬

೪೪. **ಸಾಹಿತ್ಯ ಮತ್ತು ಚಿತ್ರಕಲೆ** — ವಿ. ಸೀತಾರಾಮಯ್ಯ
ರಾಘವ ಪ್ರಕಾಶನ ಬೆಂಗಳೂರು
೧೯೮೫

೪೫. **ಸಾಹಿತ್ಯದಲ್ಲಿ ಚಿತ್ರಕಲೆ.** — ಎನ್. ಮರಿಶಾಮಚಾರ್
ಸಿ.ಎಂ ಎನ್ ಪ್ರಕಾಶನ್ ಬೆಂಗಳೂರು
೧೯೮೬

೪೬. **ಸುರಪುರ ಚಿತ್ರಕಲೆ ಒಂದು ಅಧ್ಯಯನ** — ಡಾ. ಮಲ್ಲಿಕಾರ್ಜುನ ಬಾಗೋಡಿ
ಅಪ್ರಕಟಿತ ಮಹಾಪ್ರಬಂಧ ಗುಲಬರ್ಗಾ ವಿ.ವಿ ಗುಲಬರ್ಗಾ
೨೦೦೬



೪೭. ಸೃಷ್ಟಿ (ಲೇಖನ ಸಂಕಲನ) ಡಾ. ಬಿ.ಕೆ ಹಿರೇಮಠ
ಬಾಪೂಜಿ ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ರಿ) ಬಾಗಲಕೋಟೆ
೨೦೦೩

೪೮. ಹಸ್ತಪ್ರತಿಗಳ ವಿನ್ಯಾಸ ಸೌಂದರ್ಯ ಡಾ. ಬಿ.ಕೆ ಹಿರೇಮಠ
ಕರ್ನಾಟಕ ಭಾರತಿ
ಡಾ.ಪ.ಗು. ಹಳಕಟ್ಟಿ ಜನ್ಮ ಶತಮಾನೋತ್ಸವ ವಿಶೇಷ ಸಂಚಿಕೆ
ಕ.ವಿ.ವಿ ಧಾರವಾಡ
೧೯೮೩

೪೯. ಹಸ್ತಪ್ರತಿ ಪ್ರತಿಕಾರರು ಡಾ. ಬಿ.ಕೆ ಹಿರೇಮಠ
ಕರ್ನಾಟಕ ಕಲಾ ಮೇಳ ಸ್ಮರಣ ಸಂಚಿಕೆ ಬೆಂಗಳೂರು
೧೯೮೩

೫೦. ಹಸ್ತಪ್ರತಿಗಳ ವಿನ್ಯಾಸ ಸೌಂದರ್ಯ ಡಾ. ಬಿ. ಕೆ ಹಿರೇಮಠ
ಕರ್ನಾಟಕ ಭಾರತಿ
ಡಾ.ಪ.ಗು. ಹಳಕಟ್ಟಿ ಜನ್ಮ ಶತಮಾನೋತ್ಸವ ವಿಶೇಷ ಸಂಚಿಕೆ
ಕ.ವಿ.ವಿ ಧಾರವಾಡ
೧೯೮೩

## ಆಂಗ್ಲ ಭಾಷಾ ಪುಸ್ತಕಗಳು

1. Indian Jaina Iconography — Dr. Nagarajaiah Hampa
Shravanabelagola 2003

2. Jamoda Jaina Murals — M.S.Mate
Research Institute Rune 1977

3. Jaina Art — Ananta Kumaraswamy
Munshiram Manoharlal Publishers Pvt. Ltd.
New Delhi 1994

4. Masterpieses of Jain paintings — Sarayu Doshi
Marg Publications, Mumbai 1985

5. Mural Paintings In India — J.C.Nagpal
Gain Publication, Delhi 1987

6.Techniques In Indian Mural Painting — Jayanth Chakravarthi
K.P.Bagachi & Co., Kolkotta 1980

